*First Edition; 1000 Copies–1955*




KANNADA PUBLISHER :
GEETHA SAHITYA MANDIRA
2624, V. V. Mohalla, Mysore.

Price
Ordinary Rs. 1—8—0
Calico Rs. 2—8—0

Printers :
Hindusthan Prees, Mysore

# ಈ ಪುಸ್ತಕದ ಕುರಿತು ....

ಇದು **ಸಿಸಿರೋ ಸಾಹಸ** (Operation Ciciro) ಅಥವಾ **ಸ್ವಾತಂತ್ರ್ಯದ ಎದೆಗಾರಿಕೆ** (Dare to be Free) ಯ ಸಂಪ್ರದಾಯದ ಒಂದು ಸತ್ಯಕತೆ. ಇದರಲ್ಲಿರುವವರು ಆಯಾ ಹೆಸರುಗಳುಳ್ಳ ಜೀವಂತ ವ್ಯಕ್ತಿಗಳು. ಅವರು ಕಲ್ಪನಾತೀತವಾದ ಯುದ್ಧಾನಂತರದ ಪ್ರಪಂಚದಲ್ಲಿ ನಡೆದ ಒಂದು ಕಲ್ಪನಾತೀತ ಸಾಹಸದಲ್ಲಿ ಭಾಗವಹಿಸಿದರು

ಜೆಕ್ "ಲೋಕಲ್" ಸಣ್ಣ ರೈಲು ಬಂಡಿಯೊಂದು 9–15 ಕ್ಕೆ ಪ್ರೇಗಿನಿಂದ ಹೊರಟು ಗಡಿಯಲ್ಲಿರುವ ಆಸ್ಚ್ ಪಟ್ಟಣವನ್ನು ದಾಟಿ ಹೇಗೆ ಸೀಮೋಲ್ಲಂಘನ ಮಾಡಿತೆಂಬ ವರದಿಗಳನ್ನು ಪತ್ರಿಕೆಗಳಲ್ಲಿ ಅನೇಕರು ಓದಿರಬಹುದು. ಗಡಿಯಾಚೆ ಅಮೆರಿಕದ ವಿಭಾಗದಲ್ಲಿ ಈ ಪ್ರಯಾಣಿಕರನ್ನು ಎರಡು ಗುಂಪುಗಳಾಗಿ, ವಿಂಗಡಿಸಿ ತೋರಿಸುವ ಗಮನಾರ್ಹವಾದ ಸುದ್ದಿ ಚಿತ್ರವನ್ನು ನೋಡಿದ ನೆನಪು ಹಲವರಿಗಿರಬಹುದು. ಅದರಲ್ಲಿ ಒಂದು ಗುಂಪು ಕೋಪದಿಂದ ತಮ್ಮನ್ನು ಹಿಂದಕ್ಕೆ ಕಳುಹಿಸಬೇಕೆಂದು ಕೇಳುವ ಜಿಗುಪ್ಸೆಗೊಂಡ ಕಮ್ಯುನಿಸ್ಟರದು, ಇನ್ನೊಂದು ಹಲವು ವರ್ಷಗಳಲ್ಲಿ ಮೊದಲನೇ ಬಾರಿಗೆ ಸ್ವಾತಂತ್ರ್ಯದ ಹೊಸ ಉಸಿರನ್ನು ಪಡೆದು ಉತ್ಸಾಹಭರಿತರಾದ ಪ್ರಜಾಪ್ರಭುತ್ವವಾದಿಗಳ ಗುಂಪು. ಈ ಎರಡನೆಯ ಗುಂಪಿನವರನ್ನು "ಮಾರ್ಟಿನ್‌ಫಿಯಾಲ" ಸಂದರ್ಶಿಸಿ ಅವರಲ್ಲಿ ಪ್ರತಿಯೊಬ್ಬರೂ ಮಾಡಿದ ಧೀರ ಕೃತ್ಯಗಳನ್ನು ಕೇಳಿ ಇಲ್ಲಿ–ಮೊದಲಬಾರಿ–ಕತೆಯಾಗಿ ಹೆಣೆದಿದ್ದಾರೆ. ಏಕೆಂದರೆ ಲೋಹ ಪರದೆಯೊಳಗಿಂದ ಬಹಳ ಚಮತ್ಕಾರದಿಂದ ಮಾಡಿದ ಈ ಸಾಮೂಹಿಕ ಪಲಾಯನ ತಂತ್ರವು ಅಪೂರ್ವ ದಕ್ಷತೆಯಿಂದ ಹೂಡಲ್ಪಟ್ಟಿತ್ತು.

ಮಾರ್ಟಿನ್‌ಫಿಯಾಲರ ಕತೆ ಕುತೂಹಲಜನಕವಾದ ಕಾದಂಬರಿಯಷ್ಟು ಉದ್ವೇಗಮಯವಾಗಿದೆ. ಅಲ್ಲದೆ ತಮ್ಮ ಸ್ವಾನುಭವದಿಂದ ಇದರ ಜೀವಂತ ಪಾತ್ರಗಳನ್ನು ಅವರು ಚೆನ್ನಾಗಿ ಬಣ್ಣಿಸಿದ್ದಾರಲ್ಲದೆ, ಗೊಟ್ವಾಲ್ಡರ ಜೆಕೊಸ್ಲೋವಾಕಿಯಾದ ಸಾವಿನ ವಾತಾವರಣದೊಳಗಿನ ಜೀವನವನ್ನೂ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

**ಪ್ರಕಾಶಕರು.**

# ಸ್ವಾತಂತ್ರ್ಯದ ಕಿಡಿಗಳು

೧೯೫೧ ನೇ ಸೆಪ್ಟೆಂಬರ್ ೩. ಪ್ರಾತಃಕಾಲ ಒಂಭತ್ತು ಗಂಟೆಯಾಗುತ್ತಿತ್ತಷ್ಟೆ. ಜೆಕೊಸ್ಲೋವಾಕಿಯ-ಜರ್ಮನಿಗಳ ಗಡಿಯ ಸಮೀಪವಿರುವ ಆಸ್ಚ್ ಎಂಬ ಸಣ್ಣ ಪಟ್ಟಣದ ಮುನ್ಸಿಪಲ್ ಆಸ್ಪತ್ರೆಯ ಮೂಲೆಗಳನ್ನು ಸುತ್ತುತ್ತ, ರಷ್ಯಾದಲ್ಲಿ ತಯಾರಾದ "ಜಿಸ್" ಕಾರು ಅರ್ಥಗರ್ಭಿತವಾಗಿ ನಿಧಾನವಾಗಿ ಪ್ರದಕ್ಷಿಣೆ ತೆಗೆಯಿತು.

ಬಾನು ಶುಭ್ರವಾಗಿತ್ತು. ಸೂರ್ಯನ ಬೆಳಕು ಮುಂಬರುವ ಬೇಸಿಗೆಯ ಉಷ್ಣದ ಸೂಚನೆಯನ್ನು ಕೊಡುತ್ತಿತ್ತು. ಆಸ್ಪತ್ರೆಯ ಡೈರೆಕ್ಟರಾದ ಡಾಕ್ಟರ್ ಜರೊಸ್ಲಾವ್ ಸ್ವೆಕ್ ದೊಡ್ಡ ಕಿಟಕಿಯ ಒಳಗಿನಿಂದ ಆ ಕಪ್ಪು ಬಣ್ಣದ ಕಾರು ಮುಖ್ಯ ದ್ವಾರದ ಬಳಿ ನಿಶ್ಶಬ್ದವಾಗಿ ನಿಂತುದನ್ನು ನೋಡುತ್ತಿದ್ದರು.

ಸ್ವೆಕ್ ಅಂದು ಮುಂಜಾನೆ ಎದ್ದು, ಗಡ್ಡ ತೆಗೆದು, ಸ್ನಾನವನ್ನು ಮಾಡಿ ಫಲಹಾರವನ್ನು ತೀರಿಸಿದ್ದರು. ಎಂದಿನಂತೆ ನಿರುತ್ಸಾಹದ ದಿನ ಅದು ಅವರಿಗೆ. ಹಿಂದಿನ ರಾತ್ರಿ ಆಸ್ಪತ್ರೆಯಿಂದ ಮನೆಗೆ ಮರಳುವಾಗ ಅವರು ಬಹಳ ದಣಿದಿದ್ದರಲ್ಲದೆ (ಬಹಿರಂಗವಾಗಿ ಅವರು ಅದನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲದಿದ್ದರೂ) ಕಟುವಾದ ನಿರಾಶೆಯನ್ನು ತಾಳಿದ್ದರು.

ಅವರು ಇನ್ನೂ ತರುಣರು. ಹಿಂದೆ ತಾನು ಸಣ್ಣದೊಂದು ಕೈಗಾರಿಕೆಯ ಪಟ್ಟಣದಲ್ಲಿ ಆಸ್ಪತ್ರೆಯನ್ನು ನಡೆಸುತ್ತ ವಿಕಸಿತ ಬಾಳನ್ನು ಅನುಭವಿಸಿದುದು ಅವರಿಗೆ ಚೆನ್ನಾಗಿ ಸ್ಮರಣೆಯಲ್ಲಿತ್ತು. ಈಗ ಅಂಥ ವಿಕಸಿತ ಜೀವನಕ್ಕೆ ಎಡೆಯಿರಲಿಲ್ಲ. ಡಾ|| ಸ್ವೆಕ್, ವೈದ್ಯರಾಗಿದ್ದೂ, ಸೈನಿಕರಾಗಿದ್ದೂ ಅನೇಕ ರೀತಿಯ ಹುಟ್ಟು ಸಾವುಗಳನ್ನು ಕಂಡವರು. ಜೆಕೊಸ್ಲೋವಾಕ್ ಸೈನ್ಯದಲ್ಲಿ ಅವರು ಹಿಂದೆ ಅತಿ ಕಿರಿಯ ವಯಸ್ಸಿನ ಮೇಜರಾಗಿದ್ದು, ವೈದ್ಯಕೀಯದಷ್ಟೇ ಹೆಚ್ಚುಕಡಿಮೆ ಸೈನಿಕ ವೃತ್ತಿಯನ್ನು ಮಾಡಿದ್ದರು. ಅವರಿಗೆ ಆಗ ಮಹತ್ವಾಕಾಂಕ್ಷೆ ತುಂಬಾ ಇತ್ತು. ಆದರೆ ಅಂಥ ಮಹತ್ವಾಕಾಂಕ್ಷೆಯನ್ನು ಸಮರ್ಥಿಸುವ ಅವಕಾಶಗಳೂ ಬೇಕಾಗಿದ್ದವು. ವ್ಯಕ್ತಿ ಸ್ವಾತಂತ್ರ್ಯವು ಅಳಿದು ಹೋಗಿ, ಮಾನವಕೋಟಿಗೆ ಸೇವೆ ಸಲ್ಲಿ

ಸುವ ಪ್ರಜ್ಞೆಯು ಬದಲು ಸರ್ಕಾರದ ದಾಸ್ಯತ್ವದಲ್ಲಿರುವ ಪರಿಸ್ಥಿತಿಯು ಬರಲು ಅವರಲ್ಲಿ ನಿಷ್ಕ್ರಿಯವಾದ ವಿರಕ್ತಿಯ ಭಾವನೆ ಮೂಡಿತ್ತು.

ಆದರೂ ಕಮ್ಯುನಿಸ್ಟರು ಮಾಡಿದ ಉಜ್ವಲ ಅಧಿಕಾರಾಪಹರಣದ ನಂತರದ ದಿನಗಳಲ್ಲಿ ಅವರು ನಿಜಕ್ಕೂ ಸುದೈವಿಗಳಾಗಿದ್ದರು. ಹಾಗೆಂದು ಅವರ ಪತ್ನಿಯೂ ಆ ಕುತೂಹಲಮಯ ದಿನಗಳಲ್ಲಿ ಆಗಾಗ ಹೇಳುತ್ತಿದ್ದರು. ಅವರಿಗೆ ನೌಕರಿಯಾದರೂ ಇತ್ತು. ಆದರೆ ಎಷ್ಟೋ ಮಂದಿಗೆ ಅದೂ ಇರಲಿಲ್ಲ. ಯಥಾರ್ಥವಾಗಿ, ಅವರಿಗೆ ನೌಕರಿಗಿಂತ ಮಿಗಿಲಾದ ಒಂದು ವಿಷಯವೂ ಇತ್ತು. ಅದು ಅವರಿಗಿದ್ದ ಸ್ಥಾನ.

ಅವರು ಆರಿಸಲ್ಪಟ್ಟ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದು ಹೊಸ ಸರಕಾರದಲ್ಲಿ ಅವರ ಯೋಗ್ಯತೆ ಅವರಿಗೊಂದು ಸರಕಾರಿ ಉದ್ಯೋಗವನ್ನು ಒದಗಿಸಿತು. ಮತ್ತು ಸಂಬಳ ಸಿಗುವ ನೌಕರರಿಗಿಂತಲೂ ಆ ಯೋಗ್ಯತೆ ಹಲವು ವಿಧಗಳಲ್ಲಿ ಬಹಳ ಅಮೂಲ್ಯವಾಗಿತ್ತು. ಹತ್ತಿರದ ಎಗರ್ ಪಟ್ಟಣದ ಜಿಲ್ಲಾ ನ್ಯಾಯಾಲಯದಲ್ಲಿ ಅವರು ವೈದ್ಯಕೀಯ ಪಂಚಾಯಿತದಾರರಾಗಿದ್ದರು. ಆದ್ದರಿಂದ ಅವರಿಗೆ ಸರ್ಕಾರೀ ರಕ್ಷಣೆಯೂ ಸರ್ಕಾರೀ ಸ್ಥಾನಮಾನವೂ ದೊರಕಿತ್ತು. ಮತ್ತೆ, ಆತನಕ ಜೆಕೊಸ್ಲೋವಾಕಿಯಾದ ಹೊಸ ಆಳುವ ವರ್ಗದೊಡನೆ ಘರ್ಷಣೆಗೆ ತುತ್ತಾಗದಂತೆ ಅವರು ಜಾಗರುಕತೆ ವಹಿಸಿದ್ದರು. ಇವೆಲ್ಲವನ್ನೂ ಎಣಿಸಿದರೆ ಅವರು ಇದಕ್ಕಿಂತ ಎಷ್ಟೋ ಹೀನಾವಸ್ಥೆಯಲ್ಲಿರಬಹುದಿತ್ತು... ಲೋಹ ಪರದೆಯ ಹೊರಗೆ ಕೂಡ.

ಆದರೆ, ಅವರು ಆತ್ಮವಂಚನೆ ರುಚಿಸದ ಒಬ್ಬ ಮನುಷ್ಯನಾದ್ದರಿಂದ ತಾನು ಅತೃಪ್ತಿಪಟ್ಟಿದ್ದೇನೆಂದು ಅವರೇ ಒಪ್ಪುತ್ತಿದ್ದರು. ಜೀವನದ ಮೆರವಣಿಗೆ ಒಮ್ಮೆಲೇ ಸ್ಥಬ್ಧವಾದಂತಿತ್ತು ; ಅದು ಹಿಂದೆ ಮಾತ್ರ ಹೋಗುತ್ತಿರಲಿಲ್ಲ. ಇಂದು ಜೆಕೊಸ್ಲೋವಾಕಿಯದಲ್ಲಿ ಉದ್ಭವಿಸಿದ ನೂತನ ಪರಿಸ್ಥಿತಿಯಲ್ಲಿ, ಅವರಿಗೆ ಹತ್ತು ವರ್ಷಗಳ ಹಿಂದೆ ಇದ್ದ ಉಜ್ವಲ ಪ್ರಗತಿಯನ್ನು ಎಂದಾದರೂ ಸಾಧಿಸುವ ಯೋಚನೆಯನ್ನು ಕೂಡಾ ಅವರು ಮಾಡಲಾರದಾದರು.

ಕಾರಿನ ಬಾಗಿಲು ತೆರೆಯಿತು. ಅದರಿಂದ ಗಿಡ್ಡಗಾದ ಸ್ಥೂಲಕಾಯನೊಬ್ಬನು ಸಾವಧಾನವಾಗಿ ಇಳಿದನು. ಬೆಲ್ಟ್ ಹಾಕಿದ ರೈನ್ ಕೋಟನ್ನು

ಅವನು ಧರಿಸಿದ್ದನು. ತಲೆಯಲ್ಲಿ ರೂಪಕೆಟ್ಟ ಕಪ್ಪು ಹ್ಯಾಟೊಂದು ಇತ್ತು. ಕಾರಿನ ಇನ್ನೊಂದು ಬದಿಯಿಂದ ಅದೇ ರೀತಿಯ ಉಡುಪುಗಳನ್ನು ತೊಟ್ಟಿದ್ದ ಒಬ್ಬ ತೆಳುವಾದ ಎತ್ತರದ ವ್ಯಕ್ತಿಯು ಬಂದು ಆ ಸ್ಥೂಲ ಕಾಯನನ್ನು ಸಂಧಿಸಲು ಬಂದನು. ಅವರೇನೂ ಮಾತಾಡಿಕೊಳ್ಳಲಿಲ್ಲ. ತಮ್ಮೊಳಗೆ ಸಂಜ್ಞೆಗಳನ್ನು ಮಾತ್ರ ಮಾಡಿದರು. ಆ ಬಳಿಕ ನೇರವಾಗಿ ಇಬ್ಬರೂ ಆಸ್ಪತ್ರೆಯ ಹೆಬ್ಬಾಗಿಲಿನ ಬಳಿ ಬಂದು ಅದರ ಮೆಟ್ಟಲುಗಳನ್ನು ಏರತೊಡಗಿದರು. ಅವರ ನಡಿಗೆಯ ಸರಳತೆಯನ್ನು ಕಂಡು ಸ್ವೆಕ್ ಭಯ ಗ್ರಸ್ಥರಾದರು. ಅವರಿಬ್ಬರೂ ಖಂಡಿತವಾಗಿಯೂ ರೋಗಿಗಳಲ್ಲವೆಂಬುದು ಡಾಕ್ಟರರಿಗೆ ಮಂದಟ್ಟಾಯಿತು....

* * * *

ಸ್ವೆಕ್ ಒಂದು ವೈದ್ಯಕೀಯ ಪತ್ರಿಕೆಯನ್ನು ಮೇಜಿನೊಳಗಿನಿಂದ ತೆಗೆದು ಅದನ್ನು ಬಿಡಿಸಿ ಓದುತ್ತಿರುವಂತೆ ನಟಿಸುತ್ತಿದ್ದರು. ಆಗ ಮೇಟ್ರ್ಲ ಬಾಗಿಲು ತೆರೆದು ಅವರ ಆಫೀಸಿನೊಳಗೆ ಬಂದಳು.

ಅವಳ ಕಳವಳ ಡಾಕ್ಟರರಿಗೆ ಅರಿವಾಗುತ್ತಿತ್ತು: ಆಕೆಯ ಮುಖ ಕೆಂಪೇರಿತ್ತು. ನಡಿಗೆಯಲ್ಲಿ ಅವಸರವಿತ್ತು. ತನ್ನೆದೆಯಲ್ಲುಂಟಾಗುವ ಅಳುಕನ್ನು ತಡೆ ಹಿಡಿಯಲು ಸ್ವೆಕ್ ಸಾಕಷ್ಟು ಅಭ್ಯಸಿಸಿದ್ದರು. ಆದರೆ ಮೇಟ್ರ್ಲ ಅವರಿಗರಿವಿಲ್ಲದೆಯೇ ಬಾಗಿಲು ತೆರದು ಬಂದಿದ್ದಳು— ಅಲ್ಲದೆ ತನ್ನಲ್ಲುಂಟಾಗಿದ್ದ ಎದೆಗುದಿಯನ್ನು ತೋರ್ಪಡಿಸುತ್ತಿದ್ದಳು.

ಅವಳು ಮೆಲ್ಲನೆ ಬಾಗಿಲನ್ನು ಮುಚ್ಚಿ, ತುದಿಗಾಲಿನಲ್ಲೇ ಕೋಣೆ ಯನ್ನು ದಾಟಿ ಡಾಕ್ಟರರನ್ನು ಸಮೀಪಿಸಿದಳು.

ತನ್ನ ಆಫೀಸಿಗೆ ಆಕೆ ಅಷ್ಟು ಬೇಗನೆ ಏಕೆ ಬಂದಳೆಂದು ಚೋದ್ಯಪಡು ವಂತೆ ಗಡಿಯಾರದ ಕಡೆಗೆ ನೋಡುತ್ತ, "ಏನು ಮೇಟ್ರ್ಲ".... ಎಂದು ಡಾಕ್ಟರರು ಕೇಳಿದರು.

"ತಮ್ಮನ್ನು ಕಾಣಲು ಇಬ್ಬರು ಬಂದಿದ್ದಾರೆ," ಡಾಕ್ಟರ್ ತನ್ನ ಆವೇಶ ವನ್ನು ಹತೋಟಿಯಲ್ಲಿಡಲು ಪ್ರಯತ್ನಿಸುತ್ತ ಆಕೆ ಉತ್ತರಿಸಿದಳು.

"ಹಾಗೋ? ಒಳ್ಳೆಯದು. ಅವರನ್ನು ಕಾಯುವ ಕೋಣೆಯಲ್ಲಿ ಕುಳ್ಳಿರ ಹೇಳಿ. ಅವರ ಸರದಿ ಬರುವಾಗ ನಾನು ಅವರನ್ನು ನೋಡುತ್ತೇನೆ."

ಮೇರ್ಟ್ರೆ ಡಾಕ್ಟರರನ್ನು ಕಣ್ಣರಳಿಸಿನೋಡಿದಳು.

" ಡಾಕ್ಟರ್, ಅವರು ರೋಗಿಗಳೆಂದು ನನಗನಿಸುವುದಿಲ್ಲ. ಅವರು.... ಅವರು ನಿಮ್ಮೊಡನೆ ಖಾಸಗಿಯಲ್ಲಿ ಸ್ವಲ್ಪ ಮಾತಾಡಲು ಬಯಸುತ್ತಾರೆ."

ಡಾಕ್ಟರರನ್ನು ಒಬ್ಬಂಟಿಗರಾಗಿಯೇ ಹೆಚ್ಚು ಸಮಯದವರೆಗೆ ಬಿಡಲಿಲ್ಲ. ಪುನಃ ಬಾಗಿಲು ತೆರೆಯಿತು. ಆ ವ್ಯಕ್ತಿಗಳಿಬ್ಬರೂ ಒಳಗೆ ಬಂದರು. ಅವರಿನ್ನೂ ಹ್ಯಾಟುಗಳನ್ನು ಧರಿಸಿದ್ದರು. ಅವರನ್ನು ಕಂಡ ಡಾಕ್ಟರರು ತಾನು ಹೇಗಾದರೂ ಪಾರಾಗಲು ಮೇರ್ಟ್ರೆ ಸಂದರ್ಭ ಒದಗಿಸದಂತೆ ಆ ವ್ಯಕ್ತಿಗಳಿಬ್ಬರೂ ಅವಳನ್ನು ಮಾಳಿಗೆಯ ತನಕವೂ ಹಿಂಬಾಲಿಸಿರುವರೆಂದು ಯೋಚಿಸಿದರು. ಅವರ ಯೋಚನೆಯು ನಿಜವಾಗಿತ್ತು.

ಅವರ ಮನಸ್ಸಿನಲ್ಲಿದ್ದುದನ್ನೇ ಅವಳು ಸರಿಯಾಗಿ ಹೇಳಿಬಿಟ್ಟಳೆಂಬುದು ವಿಶೇಷದ ಸಂಗತಿ.

ಅವಳ ಮನಸ್ಸಿನೊಳಗಿದ್ದ ಸಮಸ್ಯೆಯ ವೇದನೆಯನ್ನು ಅವಳ ಮುಖಭಾವ ಪ್ರತಿಬಿಂಬಿಸುತ್ತಿತ್ತು : ನೂತನ ಜಕೊಸ್ಲೋವಾಕಿಯಾದಲ್ಲಿ ಅಂಥಹ ಸಮಸ್ಯೆಗಳಾದರೋ ಅಪರೂಪವಲ್ಲ. ಡಾಕ್ಟರ್ ಸ್ಪೆಕ್‌ರನ್ನು ಅವಳು ಮನಸಾರೆ ಮೆಚ್ಚಿದ್ದಳಲ್ಲದೆ ಅವರ ಮೇಲೆ ತುಂಬಾ ಆದರವೂ ಅವಳಿಗಿತ್ತು. ಅವರು ತನಗಿಂತ ಹಿರಿಯ ಅಧಿಕಾರಿಗಳಾಗಿದ್ದುದರಿಂದ ಅವರಿಗೆ ಎಚ್ಚರಿಕೆಯೀಯಬೇಕೆಂದು ಆಗ ಆಗ್ರಹಪಡುತ್ತಿದ್ದಳು. ತನ್ನಲ್ಲುಂಟಾಗಿದ್ದ ದಿಗಿಲನ್ನು ಅವರಿಗೂ ತೋರ್ಪಡಿಸಬೇಕೆಂದು ಬಯಸಿದ್ದಳು. ಆದರೆ ಅದರಿಂದ ತನಗೆ ಒದಗಬಹುದಾದ ಅಪಾಯವನ್ನು ನೆನೆದು ಅವಳು ಕಂಗೆಟ್ಟಳು. ಅವಳ ಜೀವದಾಸೆ ಡಾಕ್ಟರರಿಗೆ ಏನನ್ನೂ ಸೂಚಿಸುವುದು ಬೇಡವೆನ್ನುತ್ತಿತ್ತು. ಸ್ಪೆಕ್ ತಮ್ಮ ಹೆದರಿಕೆಯನ್ನು ಬದಿಗಿಟ್ಟು ಆಕೆಗೆ ಮೆಲ್ಲನೆ ಹೀಗೆಂದು ಹೇಳಿದರು.

" ಹಾಗಾದರೆ ಅವರು ಒಳಗೆ ಬರಲಿ ಮೇರ್ಟ್ರೆ."

ಮೇರ್ಟ್ರೆ ತಾನು ತತ್ಕಾಲಕ್ಕೆ ಈ ಗಂಡಾಂತರದಿಂದ ಪಾರಾದನೆಂದು ಮನಸ್ಸಿನಲ್ಲೇ ಡಾಕ್ಟರರಿಗೆ ತನ್ನ ಕೃತಜ್ಞತೆಯನ್ನರ್ಪಿಸಿದಳು. ಆದರೆ ಅವಳು ಡಾಕ್ಟರರ ಕೋಣೆಯಿಂದ ಹಿಂದಿರುಗಿದ ವೇಗದಲ್ಲಿ ಅವಳು ಎಷ್ಟರ ಮಟ್ಟಿಗೆ ದೇಶದ ನೂತನ ಪ್ರಭುತ್ವದ ಅಡಿಯಾಳಾಗಿದ್ದಳೆಂಬುದು ಸ್ಪಷ್ಟವಾಗಿ ತೋರು

ತ್ತಿತ್ತು. ಅವಳು ಅದಕ್ಕೆ ತೋರುತ್ತಿದ್ದ ವಿಧೇಯತೆ ಆಳವಾಗಿತ್ತು. ಸರ್ವ ವ್ಯಾಪಿಯಾಗಿತ್ತು.

ಮೇಟ್ರನಳ ಕಣ್ಣುಗಳಲ್ಲಿ ಸಂವೇದನೆಯ ನೋಟ ಡಾಕ್ಟರ್ ಸ್ವೆಕ್‌ಗೆ ತೋರದಿರಲಿಲ್ಲ. ಆದರೂ ತಮ್ಮ ಅಪರಾಧದಲ್ಲಿ ಅವಳು ಭಾಗವಹಿಸಲಿಲ್ಲ ವೆಂದು ಸೂಚಿಸುವ ವಿಶ್ವಾಸದ ನೋಟವನ್ನು ಪ್ರತಿಯಾಗಿ ಅವಳ ಮೇಲೆ ಬೀರಿದರು.

"ಓಹೋ ! ನಮಸ್ಕಾರ ! ನಿಮಗೆ ನನ್ನೊಡನೆ ಏನೋ ಮಾತಾಡ ಲಿಕ್ಕಿದೆಯಂತೆ ಅಲ್ಲವೆ" ಹೀಗೆಂದು ಅಭ್ಯಾಗತರಿಗೆ ಡಾಕ್ಟರ್ ಸ್ವೆಕ್ ಕೇಳಿದರು.

ಮೇಟ್ರನ್ ಬಾಗಿಲನ್ನು ಮುಚ್ಚುವತನಕ ಇಬ್ಬರೂ ಮಾತನಾಡಲಿಲ್ಲ. ಆ ಬಳಿಕ ಅವರು ಮುಂದೆ ಬಂದು ಮೇಜಿನಬಳಿ ನಿಂತರು. ಇಬ್ಬರೂ ತಮ್ಮ ಜೇಬುಗಳೊಳಗೆ ಕೈಹಾಕಿದರು. ಎತ್ತರದ ವ್ಯಕ್ತಿ ಒಂದು ಸ್ಕೋಡಾ ಆಟೊ ಮೆಟಿಕ್ ಪಿಸ್ತೂಲನ್ನು ತೆಗೆದು, ಡಾಕ್ಟರರ ಮುಂದೆ ಹಿಡಿದನು. ಸ್ಥೂಲ ಕಾಯನಾದ ವ್ಯಕ್ತಿಯು ಒಂದು ಕಂದು ಬಣ್ಣದ ಕಾರ್ಡನ್ನು ತೆಗೆದನು. ಅದರಲ್ಲಿ ಕೆಂಪಕ್ಷರಗಳಿದ್ದುವು.

ಇಬ್ಬರೂ ತುಟಿ ಪಿಟಕ್ಕೆನ್ನಲಿಲ್ಲ. ಕಾರ್ಡನ್ನು ಹಿಡಿದುಕೊಂಡ ವ್ಯಕ್ತಿಯು ಅದನ್ನು ತೆಗೆದು ಮೇಜಿನ ಮೇಲಿಟ್ಟ. ಆದರೂ ಅವನ ಒರಟಾದ ಹೆಬ್ಬೆಟ್ಟು ಮತ್ತು ತೋರ್ಬೆರಳುಗಳು ಆ ಕಾರ್ಡನ್ನು ಗಟ್ಟಿಯಾಗಿ ಹಿಡಿದಿದ್ದುವು.

ಡಾಕ್ಟರರು ಕಾರ್ಡನ್ನು ನೋಡಿದರು. ಅದೊಂದು ಕೇವಲ ಔಪಚಾ ರಿಕವಾಗಿತ್ತು. ಏಕೆಂದರೆ ಜೆಕೊಸ್ಲೋವಾಕಿಯಾದ ಜನರಲ್ಲಿ ಅದನ್ನು ಹೆಚ್ಚಿ ನವರು ಸ್ವತಃ ನೋಡಿದ್ದರು. ಮತ್ತೆ ನೋಡದಿದ್ದವರು ಆದರ ವರ್ಣನೆ ಯನ್ನು ಇತರರಿಂದ ಕೇಳಿ ತಿಳಿದಿದ್ದರು.

ಆದರೆ ಡಾಕ್ಟರರಿಗೆ ಯೋಚಿಸಲಿಕ್ಕೆ ಸಮಯಬೇಕಾಗಿತ್ತು. ಅದಕ್ಕಾಗಿ ಅವರು ಯಾವ ನೆವವನ್ನು ಹೇಳಲೂ ಸಿದ್ಧರಿದ್ದರು. ಆದ್ದರಿಂದ ಅವರು ತಲೆ ತಗ್ಗಿಸಿ ಕಾರ್ಡನ್ನು ಓದಿದರು. ಅದರಲ್ಲಿ ಕೆಂಪಕ್ಷರಗಳಲ್ಲಿ, (Statni-Stajna Bespecnost) ಸ್ಟಾಟ್ನಿ ಸ್ಟಾಜ್ನಾ ಬೆಸ್ಪೆಕ್ನೊಸ್ಟ್— ಗುಪ್ತ ರಾಜಕೀಯ ಪೋಲೀಸ್, ಎಂದು ಬರೆದಿತ್ತು.

ಅದನ್ನೋದಿ ಡಾಕ್ಟರರು ನೆಟ್ಟಗೆ ನಿಂತುಕೊಂಡು ಸ್ಥೂಲಕಾಯನನ್ನು ನೆಟ್ಟದೃಷ್ಟಿಯಿಂದ ನೋಡಿದರು.

ಅವನೂ ಪ್ರತಿಯಾಗಿ ಅವರನ್ನೇ ನೋಡಿದನು. ಅವನ ನೋಟದಲ್ಲಿ ಮನಸ್ಸಾಕ್ಷಿಯನ್ನು ಮೀರಿದ ಸ್ಥಬ್ದತೆಯಿತ್ತು. ಡಾಕ್ಟರ್ ಸ್ವೆಕ್‌ರಿಗೆ ತಾನು ಹುಲ್ಲು ಕಡ್ಡಿಗಿಂತಲೂ ಕೀಳಾಗಿ ಆ ಮನುಷ್ಯನಿಗೆ ತೋರುತ್ತಿದ್ದೇನೆಂದು ಹೊಳೆಯಿತು. ಆ ವ್ಯಕ್ತಿಗಳು ಸಂದೇಶವಾಹಕರು; ಆದರೆ ಅವರಿಗೆ ಆ ಸಂದೇಶದಲ್ಲೂ ಆಸಕ್ತಿಯಿರಲಿಲ್ಲ. ಆದನ್ನು ಸ್ವೀಕರಿಸುವವನ ಮೇಲೂ ಆಸಕ್ತಿ ಯಿರಲಿಲ್ಲ.

"ಒಳ್ಳೆಯದು........?"

ಎಂದು ಡಾಕ್ಟರರು, ಕೊನೆಗೆ, ಮಾತನಾಡಲಾರಂಭಿಸಿದರು.

ಸ್ಥೂಲಕಾಯ ವ್ಯಕ್ತಿಯು ಆ ಕಾರ್ಡನ್ನು ತನ್ನ ಮಲಿನವಾದ ಕೋಟಿನ ಒಳಜೇಬಿಗೆ ಸೇರಿಸಿದನು. ಕಿಟಕಿಯತ್ತ ನೋಡುತ್ತ ಅವನು ತನ್ನ ತಲೆಯ ನ್ನಾಡಿಸಿದನು.

"ನಾವು ಎಗರ್ ಪಟ್ಟಣಕ್ಕೆ ಹಿಂದೆ ಹೋಗುವೆವು. ನಿಮಗೆ ಸ್ವಾಭಾವಿಕ ವಾಗಿ ಅದು ಗೊತ್ತಿದೆಯಷ್ಟೆ.....?

"ಸ್ವಾಭಾವಿಕವಾಗಿ. ನಾನು ಅಲ್ಲಿ ವೈದ್ಯಕೀಯ ಪಂಚಾಯತನಾಗಿ ದ್ದೇನೆ..."

ಸ್ಥೂಲಕಾಯನು ತನ್ನ ಹುಬ್ಬನ್ನೂ ಕೂಡ ಮೇಲಕ್ಕೆತ್ತಲಿಲ್ಲ.

"ಹಾಸ್ಲೋವ್ ತಲುಪುವ ಮುಂಚೆ ರಸ್ತೆಯ ಬಲಗಡೆಯ ಕಾಡಿನಲ್ಲಿ ಒಂದು ಬಯಲಿದೆ. ಬಹುಶಃ ನಿಮಗೆ ಅದು ಗೊತ್ತಿದೆಯಷ್ಟೆ ....?"

ಡಾಕರ್ ಸ್ವೆಕ'ರಿಗೆ ಅದು ಗೊತ್ತಿತ್ತು. ತಮ್ಮ ಹೆಂಡತಿ ಮಕ್ಕಳೊ ಡನೆ ಅಲ್ಲಿ ಅವರು ಹಲವು ಬಾರಿ ವನಭೋಜನ ಮಾಡಿದ್ದರು. ಒಳ್ಳೆಯ ಹುಲ್ಲುಗಾವಲು. ಇವರು ತನ್ನನ್ನು ಅಲ್ಲಿ ಕಂಡಿದ್ದರೆ? ಡಾಕ್ಟರರು ಮತ್ತೂ ಯೋಚಿಸಿದರು. ಇವರು ತನ್ನನ್ನು ಅಲ್ಲಿಗೆ ಹಿಂಬಾಲಿಸಿರಬಹುದೆ? ಅದರ ಎತ್ತರದ ವ್ಯಕ್ತಿಯ ಪಿಸ್ತೂಲಿನ ಗುರಿ ಇನ್ನೂ ಡಾಕ್ಟರರ ಮೇಲೆಯೇ ಇತ್ತು. ಅವನು ಆವೇಶರಹಿತನಾಗಿದ್ದನು.

"ನನಗೆ... ನನಗೆ ಖಂಡಿತ ತಿಳಿದಿದೆಯೆನ್ನಲು ಸಾಧ್ಯವಿಲ್ಲ. ನನಗೆ ಅದನ್ನು ಗಮನಿಸಿದ ನೆನೆಪಿಲ್ಲ...."

"ನಿಮಗೆ ಗೊತ್ತಿದೆ. ಹೊಸ್ಲೋವ್‌ಗಿಂತ ಸ್ವಲ್ಪ ಈಚೆಗೆ, ಬಲಗಡೆಯಲ್ಲಿದೆ. ನಿಮ್ಮನ್ನು ನಾವು ಅಲ್ಲಿ ಕಾಯುತ್ತೇವೆ..."

ಡಾಕ್ಟರರು ತಲೆದೂಗಿದರು.

"ಬಹಳ ಒಳ್ಳೆಯದು...."

"ನಮಗೆ ಇಲ್ಲಿಂದ ಹೊರಡಲು ಐದು ನಿಮಿಷ ಅವಕಾಶ ಕೊಡಿ. ಈ ಕೆಲಸವು ಶಾಂತವಾಗಿ ನಡೆಯುವುದೋ ಇಲ್ಲವೋ ಎಂಬುದನ್ನು ನೀವೇ ನಿರ್ಧರಿಸುವವರು..."

"ನಾನೇನೋ ತೊಂದರೆ ಕೊಡುವುದಿಲ್ಲ." ಎಂದು ಡಾಕ್ಟರ್ ಸ್ಪೈಕ್ ಹೇಳಿದರು.

"ಹಾಗಾದರೆ, ಅದು ಮತ್ತೂ ಒಳ್ಳೆಯದು. ಸರಿಯಾಗಿ ಐದು ನಿಮಿಷಗಳವರೆಗೆ ಇಲ್ಲಿ ಕಾಯುತ್ತಿರಿ. ಆ ಬಳಿಕ ಆ ಬಯಲಿಗೆ ನಮ್ಮನ್ನು ಹಿಂಬಾಲಿಸಿರಿ."

ಡಾಕ್ಟರ್ ಸ್ಪೈಕ್ ತಲೆಬಾಗಿದರು. ಎತ್ತರದ ವ್ಯಕ್ತಿ ತನ್ನ ಪಿಸ್ತೂಲನ್ನು ಮೆಲ್ಲಗೆ ಕಿಸೆಗೆ ಸೇರಿಸಿಕೊಂಡನು.

ಬಾಗಿಲಿನ ಹತ್ತಿರ ಸಮೀಪಿಸಿದ್ದ ಸ್ಥೂಲಕಾಯನು ತಿರುಗಿ ನೋಡಿ, "ಇನ್ನೊಂದು ಸಂಗತಿ. ನೀವು ಇಲ್ಲಿ ಯಾವ ಸಂದೇಶವನ್ನು ಕೊಡಕೂಡದು. ಟೆಲಿಫೋನನ್ನೂ ಉಪಯೋಗಿಸಬಾರದು..." ಎಂದು ಡಾಕ್ಟರರಿಗೆ ಹೇಳಿದನು.

"ಆದರೆ... ಆದರೆ ಮೇಟ್ರಸಿಗೆ ನನ್ನ ಸಂದರ್ಶನೆಗಳನ್ನು ರದ್ದು ಮಾಡಲು ಹೇಳಬೇಕಾಗಿದೆ...."

"ನಾವು ಹೇಳಿದಷ್ಟೇ ನೀವು ಮಾಡಬೇಕು. ನಾವು ಮೇಟ್ರಸ್ಸಿಗೆ... ಅಥವಾ ಬೇರೆಯವರಿಗೆ.... ಹೊರಗೆ ಹೋಗುವಾಗ ಹೇಳುತ್ತೇವೆ.... ಮರೆಯಬೇಡಿ, ಈಗಲೇ! ಸರಿ ಐದು ನಿಮಿಷಗಳಲ್ಲಿ..." ಎಂದು ಸ್ಥೂಲಕಾಯನು ಆವೇಶರಹಿತನಾಗಿ ಹೇಳಿದನು.

ಅವರು ತೆರಳಿದ ಬಳಿಕ ಬಾಗಿಲು ಮುಚ್ಚಿತು. ಅದರ ಹೊಳೆಯುವ ಶೂನ್ಯವಾದ ಮರದ ಹಲಗೆಯನ್ನು ಡಾಕ್ಟರ್ ಸ್ಪೈಕ್ ನೋಡುತ್ತ ಒಳಗೆ ನಿಂತು

ಕೊಂಡರು. ಟೆಲಿಫೋನಿನ ಬಳಿಗೆ ಅವರ ಕೈಗಳೊಮ್ಮೆ ಸರಿದುವು. ಆದರೆ ಅವುಗಳನ್ನು ಫಕ್ಕನೆ ಅವರು ಹಿಂದಕ್ಕೆಳೆದುಕೊಂಡರು.

ಮೇಜನ್ನೊಮ್ಮೆ ಅವರು ತೆರೆದರು. ಒಳಗೆ ಅವರು ಜಾಗ್ರತೆಯಾಗಿ ಇರಿಸಿದ್ದ ಪಿಸ್ತೂಲನ್ನು ನೋಡಿದರು.... ಮೇಜಿನ ಬಾಗಿಲನ್ನು ಪುನಃ ಜಾಗ್ರತೆ ಯಿಂದ ಮುಚ್ಚಿದರು.

ಗಡಿಯಾರದ ಕಡೆ ಅವರು ಕಣ್ಣು ಹೊರಳಿಸಿದರು. ಒಂಭತ್ತು ಗಂಟೆ ಯಾಗಿ ಹದಿನೆಂಟು ನಿಮಿಷಗಳು ಕಳೆದಿದ್ದುವು. ಇನ್ನು ಒಂದೆರಡು ನಿಮಿಷ ಗಳಲ್ಲಿ ಅವರ ಪ್ರಪಂಚ ಬದಲಾಗಲಿತ್ತು. ಅವರ ಆಗಿನ ಪ್ರಪಂಚ ಮಣ್ಣು ಗೂಡಲಿತ್ತು.

ಮೇಜಿನ ಬಳಿಯಿಂದ ಅವರು ಕಿಟಕಿಯ ಸಮೀಪ ಹೋದರು. ಆ ವ್ಯಕ್ತಿಗಳು ಅತ್ತಿತ್ತ ನೋಡದೆ ಕಾರಿನೊಳಗೆ ಕುಳಿತುಕೊಂಡು ಹೋದುದು ಅವರಿಗೆ ಕಾಣಿಸಿತು.

ಕಾರು ಕಣ್ಮರೆಯಾಗುವಾಗ ಇನ್ನಿಬ್ಬರು ಆಸ್ಪತ್ರೆಯ ಹೊರಗಿನ ಅಂಗಣ ದಿಂದ ನಿಧಾನವಾಗಿ ಹೋಗುತ್ತಿರುವುದು ಡಾಕ್ಟರರಿಗೆ ತೋರಿತು. ಅವರು ನೋಡುತ್ತಿದ್ದಂತೆಯೇ ಅವರಿಬ್ಬರೂ ಮತ್ತೆ ಮೆಲ್ಲನೆ ಹಿಂದೆ ಬಂದರು. ಡಾಕ್ಟರ್ ಸ್ವೆಕ್ ತಾನು ಐದು ನಿಮಿಷದಲ್ಲಿ ಹೊರಡುತ್ತೇನೆಂದು ಮಕ್ಕಳಂತೆ ಹೇಳಿದುದನ್ನು ಗುಪ್ತ ರಾಜಕೀಯ ಪೋಲೀಸರು ನಂಬಿರಲಿಲ್ಲ.

ಸ್ವೆಕ್ ನಿಟ್ಟುಸಿರು ಬಿಡುತ್ತಾ ಹಳೆಯ ಸ್ಟ್ಯಾಂಡಿನ ಬಳಿ ಬಂದು ನಿಂತರು. ಅದು ಅವರ ಮನೆಯಲ್ಲಿದ್ದ ಹಳೆ ಮಾದರಿ ಸ್ಟ್ಯಾಂಡ್. ಅವರ ಹೆಂಡತಿಯು ಆಧುನಿಕ ಮನೆಗಳಲ್ಲಿ ಅದಕ್ಕೆ ಸ್ಥಾನವಿಲ್ಲವೆಂದು ಹೇಳಿ ಅದನ್ನು ಆಸ್ಪತ್ರೆಗೆ ಸಾಗಿಸಿದ್ದಳು. ಸ್ವೆಕ್ ತಮ್ಮ ಮೋಟಾರು ಸವಾರಿಯ ಚರ್ಮದ ಅಂಗಿಯನ್ನೂ ಕಂದು ಬಣ್ಣದ ಹ್ಯಾಟನ್ನೂ ತೆಗೆದುಕೊಂಡರು. ಗಡಿಯಾರ ವನ್ನು ನೋಡುತ್ತ ಅವರು ಚರ್ಮದ ಅಂಗಿಯನ್ನು ತೊಟ್ಟು ಹ್ಯಾಟನ್ನು ತಲೆಗಿಟ್ಟುಕೊಂಡರು.

ಜಗಲಿಯಲ್ಲಿ ಮೇಟ್ರನ್ ಕಾಯುತ್ತಿದ್ದಳು. ಆದರೂ ಅಲ್ಲಿ ಅವಳು ಉದ್ದೇಶಪೂರ್ವಕವಾಗಿ ಬಂದಿಲ್ಲವೆಂದು ನಟಿಸಿದಳು.

"ನಾನು ಹೊರಗೆ ಹೋಗುತ್ತೇನೆ ಮೇಟ್ರ್ನ, ಇಂದು ನಾನು ಸಂದರ್ಶಕರನ್ನು ನೋಡುವುದಿಲ್ಲ... ?

"ಆದೀತು. ಡಾಕ್ಟರ್" ಎಂದವಳು ತಲೆಯಲ್ಲಾಡಿಸಿದಳು. ತನಗೆ ಮೊದಲೇ ತಕ್ಕ ಆಜ್ಞೆ ದೊರಕಿದೆಯೆಂದು ಆಕೆ ಹೇಳಲಿಲ್ಲ.

ಅರ್ಧ ತಾಸಿನ ಬಳಿಕ ಡಾಕ್ಟರ್ ಸ್ಪೆಕ್‌ರ ಹಳೆಯ ಚಿಕ್ಕ ಟಾಟ್ರಾ ಕಾರು ಬಯಲಿನ ಬಳಿ ನಿಂತಿತು. ಅವರನ್ನು ಕರೆದವರು ರಸ್ತೆಯ ಬಳಿ ನಿಂತಿದ್ದರು. ಡಾಕ್ಟರರು ಕಾರು ನಿಲ್ಲಿಸಿದೊಡನೆ ಅವರನ್ನು ಕೆಳಗಿಳಿಯಲು ಅವರು ಸಂಜ್ಞೆ ಮಾಡಿದರು.

ಜೆಕ್ ಜನರು ವಾಚಾಳಿಗಳಲ್ಲ. ತಮ್ಮ ಸಂಕುಚಿತ ಪ್ರವೃತ್ತಿಗಾಗಿ "ಯೂರೋಪ್ ಖಂಡದ ಇಂಗ್ಲೀಷರು" ಎಂದು ಅವರನ್ನು ಆಗಾಗ ಕರೆಯುತ್ತಾರೆ, ಆದರೆ ಆ ಇಬ್ಬರು ಮೌನ ಧಾರಣೆಯಲ್ಲೇ ತಮ್ಮ ಕಾರ್ಯಾಚರಣೆಯನ್ನು ಮಾಡುತ್ತಿದ್ದುದು ಸ್ಪೆಕ್‌ರಿಗೆ ಅಸ್ವಭಾವಿಕ ಹಾಗೂ ಭಯಾನಕವಾಗಿ ತೋರಿತು. ದಪ್ಪದ ವ್ಯಕ್ತಿ ಬೇಡಿಗಳನ್ನು ತಂದನು; ಎತ್ತರದ ವ್ಯಕ್ತಿಯು— ಸ್ಪೆಕ್ ಅವನಿಗೆ "ತೆಳ್ಳಗಿನ ಮನುಷ್ಯ" ನೆಂದು ಮನಸಿನಲ್ಲೇ ನಾಮಕರಣ ಮಾಡಿದ್ದರು— ತನ್ನ ಪಿಸ್ತೂಲನ್ನು ಡಾಕ್ಟರರ ಮುಂದೊಡ್ಡಿದನು.

ಅಲ್ಲಿ ಆಗ ಮಾತು ಕತೆಯೇನೂ ಇರಲಿಲ್ಲ; ಆ ಪೋಲೀಸರಿಬ್ಬರೂ ಪಕ್ಕನೆ ಮೂಕರಾಗಿ ಹೋದಂತೆ ಭಾಸವಾಗುತ್ತಿತ್ತು.... ಆ ಅಸ್ವಾಭಾವಿಕ ಮೌನದಲ್ಲಿ ಸ್ಪೆಕ್‌ರಿಗೂ ತಮ್ಮ ಮಾತಾಡುವ ಶಕ್ತಿ ತಾತ್ಕಾಲಿಕವಾಗಿ ಕೈಬಿಟ್ಟಂತೆ ತೋರಿತು. ಮೌನವು ಅಂಟು ರೋಗದಂತಿತ್ತು. ದಪ್ಪದ ಮನುಷ್ಯನ ಸಂಜ್ಞೆಯನ್ನನುಸರಿಸಿ ಸ್ಪೆಕ್ ತಮ್ಮ ಕೈಗಳನ್ನು ಮುಂದೊಡ್ಡಿದರು ಆಗ ಮಣಿಕಟ್ಟಿನ ಮೇಲೆ ಅವರಿಗೆ ಉಕ್ಕಿನ ಶೀತಲ ಸ್ಪರ್ಶದ ಅರಿವಾಯಿತು. ದಪ್ಪದ ಮನುಷ್ಯ ಮತ್ತೊಂದು ಸಂಜ್ಞೆ ಮಾಡಿದನು. ಅವರು ತೆಳ್ಳಗಿನ ಮನುಷ್ಯನ ಬದಿಯಲ್ಲಿ ಕಾರನ್ನೇರಿ ಕುಳಿತುಕೊಂಡರು. ತೆಳ್ಳಗಿನ ಮನುಷ್ಯ ಕಾರು ನಡೆಸುತ್ತಿದ್ದನು. ಎಗರ್ ಪಟ್ಟಣಕ್ಕೆ ಹೋಗಬೇಕೆಂಬ ಆಜ್ಞೆಯೂ ಅವನಿಗೆ ಸಂಜ್ಞೆಯ ಮೂಲಕವೇ ಬಂತು— ದಪ್ಪದ ಮನುಷ್ಯನು ಅವನೂ ಭುಜಕ್ಕೆ ಬೆರಳುಗಳಿಂದ ತಟ್ಟಲು ಮುಂದೆ ಬಾಗಿದನು.

ಡಾಕ್ಟರ್ ಸ್ಟೈಕ್‌ರಿಗೆ ವನಭೋಜನಗಳ ನೆನಪಾಗುತ್ತಿತ್ತು...

ಆಸ್ಟ್ ಸುಮಾರು ಇಪ್ಪತ್ತು ಸಾವಿರ ಜನಸಂಖ್ಯೆಯುಳ್ಳ ಪಟ್ಟಣ. ಬಾಲ್ಯ ಮುದಿತನ ಇಲ್ಲವೇ ಕಾಹಿಲೆಗಳ ತೊಡಕಿಲ್ಲದವರಲ್ಲಿ ಹೆಚ್ಚಿನವರು, ಅಲ್ಲಿನ ಅನೇಕ ಉದ್ಯಮಗಳಲ್ಲಿ ದುಡಿಯುತ್ತಿದ್ದರು. ಒಬ್ಬನ ಸಾಮಾಜಿಕ ಸ್ಥಾನಮಾನಗಳೇನೇ ಇರಲಿ ಅವನ ಸಾಂಸ್ಕೃತಿಕ ಹಿನ್ನೆಲೆ ಎಂಥದ್ದೇ ಇರಲಿ, ಅವನು ಅಥವಾ ಅವಳು ಕೆಲಸಗಾರರಾದರೆ ಸಾಕು: ಕಮ್ಯುನಿಸ್ಟರಿಗೆ ತತ್ವಶಃ ಯಾರೊಡನೆಯೂ ಜಗಳವಿಲ್ಲ. ಹಾಗಾಗಿ ಆಸ್ಟ್ ಕಾರ್ಮಿಕರ ಪಟ್ಟಣವಾಗಿತ್ತು.

ಮತ್ತು ಸೈದ್ಧಾಂತಿಕವಾಗಿ ಸರ್ಕಾರದ ಬದಲಾವಣೆಯು ಆಸ್ಟ್ ಪಟ್ಟಣದ ಜನರಿಗೆ ಮೂಲಭೂತವಾಗಿ ಯಾವ ದುಷ್ಟ ಪರಿಣಾಮವನ್ನೂ ಉಂಟು ಮಾಡಬಾರದಾಗಿತ್ತು. ಕಾರ್ಮಿಕರು— ಈಗ "ಕಾರ್ಮಿಕರ ಸರ್ಕಾರದಡಿಯಲ್ಲಿ— ಸ್ವತಂತ್ರ ಮನೋವೃತ್ತಿಯಲ್ಲಿ ತಮಗೆ ಕೆಲಸ ದೊರಕು ತ್ತಿರುವ ತನಕ ತಮ್ಮ ಜೀವನವನ್ನು, ಪ್ರೇಗಿನಲ್ಲಾದ ರಾಜಕೀಯ ಕ್ರಾಂತಿ ಯತ್ತ ಲಕ್ಷ ಕೊಡದೆ—ಅದರ ಪ್ರಜ್ಞೆ ಕೂಡಾ ಇಲ್ಲದೆ—ನಡೆಸಬೇಕಿತ್ತು.

ಆದರೆ ಆಸ್ಟ್ ಗಡಿನಾಡಿನಲ್ಲಿರುವ ಪಟ್ಟಣ. ಈ ಗಡಿಯನ್ನು ಮುಚ್ಚುವ ಮುಂಚೆ ಆಸ್ಟ್ ನಿಲ್ದಾಣದ ಮೂಲಕ ರೈಲು ಬಂಡಿಗಳು ಹೊರ ದೇಶಗಳಿಗೆ ಹೋಗುತ್ತಿದ್ದುವು.—ಆದರೆ ಆಗ ಅಲ್ಲಿನ ಜನರಿಗೆ ಅವುಗಳಲ್ಲಿ ಕುಳಿತು ಹೊರದೇಶಗಳಿಗೆ ಹೋಗುವ ಮನಸ್ಸಿರಲಿಲ್ಲ.

ಈಗ ಗಡಿಯನ್ನು ಮುಚ್ಚಲಾಗಿತ್ತು. ರೈಲು ಮಾರ್ಗ ಆಸ್ಟ್ ಪಟ್ಟಣ ದಲ್ಲಿ ಅಂತ್ಯವಾಗುತ್ತಿತ್ತು. ಆದ್ದರಿಂದ ಆಸ್ಟ್ ಪಟ್ಟಣದ ಜನರಲ್ಲಿ ಸರ್ವಾಧಿಕಾರೀ ಸರ್ಕಾರಗಳ ಸಿಂಹಸ್ವಪ್ನದಂತಿರುವ" ಗಡಿಯಲ್ಲಿನ ನಿರ್ಬಂಧದ ಪ್ರಜ್ಞೆ" ಬೆಳೆಯುತ್ತಿತ್ತು. ಗೊಟ್ವಾಲ್ಡರ ಸರಕಾರವು ಆ ಗಡಿಯನ್ನು ಮುಚ್ಚಿ ಜನರು ಅದನ್ನು ಹೆಚ್ಚಾಗಿ ಗಮನಿಸುವಂತೆ ಮಾಡಿತ್ತು. ಜರ್ಮನಿಯ ಚಿಕ್ಕ ಹಳ್ಳಿಯಾದ ಸೆಲ್ಬ್ ವರೆಗೆ — ನ್ಯೂರೆಂಬರ್ಗ್ ಅಥವಾ ಅದರ ಹಿಂದೆ ಹೋಗುವ ಸಂಗತಿ ಕೂಡಾ ಹೋಗಲು ಹಿಂಪೆ ಇಚ್ಛಿಸದವರು, ಈಗ ಗಡಿಯನ್ನು ದಾಟಲು ಎಷ್ಟು ಕಷ್ಟವಿದೆಯೆಂದು ಆಶ್ಚರ್ಯಪಡುತ್ತಿದ್ದರು. ಬವೇರಿಯದ ಭಾಗವಾದ ಆಪ್ಪರ್ ಫ್ರಾಂಕೋನಿಯ ಪ್ರದೇಶ ಆಸ್ಟಿನ ಆಚೆಗೆ ಇತ್ತು.

ಅಲ್ಲಿಯ ಜನಜೀವನ ಹೇಗಿದೆಯೋ ಎಂದು ಜನರು ಸೋಜಿಗ ಪಡತೊಡಗಿದರು.

ರಸ್ತೆಗಳಲ್ಲಿ ವಾಹನಗಳು ಇನ್ನೂ ಓಡಾಡುತ್ತಿದ್ದುವು. ರೈಲುಗಳೂ ಗಡಿ ದಾಟುತ್ತಿದ್ದುವು. ಆದರೆ ಆಸ್ಟ್ರೋ ಪೇಟೆಯ ಮೂಲಕ ಜರ್ಮನಿಗೆ ಸಾಗುವ ಲಾರಿಗಳೊಡನೆ ಸೈನಿಕ ಕಾವಲುಗಾರರಿರುತ್ತಿದ್ದರು. ರೈಲುಗಳಲ್ಲಾದರೋ, ಡ್ರೈವರ್, ಫಾಯರ್ ಮೆನ್, ಗಾರ್ಡ್ ಮತ್ತು.... ಸೈನಿಕರಿಲ್ಲದೆ ಬೇರೆ ಯಾರೂ ಇರುತ್ತಿರಲಿಲ್ಲ. ಆಸ್ಟ್ರೋ ಜನರ ಮನಸ್ಸಿನಲ್ಲಿ ಇತ್ತೀಚೆಗೆ ಅಪಾಯಕರ ಭಾವನೆಗಳಿರುತ್ತಿದ್ದುವು. ಕೇವಲ ಗಡಿಯನ್ನು ಮುಚ್ಚಿದುದರಿಂದಾಗಿ ಅವರು ಸ್ವತಃ ಅಪಾಯಕಾರಿಗಳಾದಂತೆ, ಅದರಿಂದಾಗಿಯೇ ಅವರಿಗೆ ಆ ಭಾವನೆಗಳಿಗೆ ಸ್ಫೂರ್ತಿಯೂ ಸಿಕ್ಕಿತ್ತು.

ಜನರು ಹೆಚ್ಚೇನೂ ಮಾತಾಡುತ್ತಿರಲಿಲ್ಲ. ಗುಪ್ತಚಾರರು ಯಾರೆಂಬುದು ಯಾರಿಗೂ ಗೊತ್ತಾಗುತ್ತಿರಲಿಲ್ಲ.

"ನನಗೆ ಗಡಿಯನ್ನು ದಾಟಬೇಕೆಂದಿಲ್ಲ. ನನಗೆ ನನ್ನ ಕೆಲಸವಿದೆ. ನನ್ನ ಕುಟುಂಬವಿದೆ. ನಾನು ಇಲ್ಲೇ ಹುಟ್ಟಿದೆ, ಇಲ್ಲೇ ಬೆಳೆದೆ. ಅವರು ಅಡ್ಡಿ ಮಾಡದಿರುವವರೆಗೆ ನಾನೇಕೆ ಎಂದಿನಂತೆ ದಿನಗಳನ್ನು ಕಳೆಯುತ್ತಿರಬಾರದು? ಎಷ್ಟೆಂದರೂ ನಾನೇನೂ ಮಾಡಿಲ್ಲ" ಎಂದಲ್ಲಿನ ಜನರು ಹೇಳಿಕೊಳ್ಳುತ್ತಿದ್ದರು.

ಜನರು ತಾವು ನಿರ್ದೋಷಿಗಳೆಂದು ಇತರರು ತಮ್ಮನ್ನು ಎಷ್ಟು ಮಟ್ಟಿಗೆ ಪರಿಗಣಿಸುತ್ತಾರೋ ಅಷ್ಟೇ ತಾವು ನಿರ್ದೋಷಿಗಳಾಗಿರುವೆವೆಂದು ತೃಪ್ತಿ ಹೊಂದಿದ್ದೇವೆಯೆಂದು ತಮ್ಮೊಳಗೇ ಚೋದ್ಯಪಡುತ್ತಿದ್ದರು. ಮತ್ತು ಆ ಮೇಲೆ ಗಡಿಯ ಕುರಿತು ಯೋಚಿಸುವುದಾಗಲೀ ಆ ಕಡೆಗೆ ಹೋಗುವುದಾಗಲೀ ಮತ್ತು ಅತ್ತ ನೋಡಲೂ ಕೂಡದೆಂದು ಜನರು, ಪ್ರಯತ್ನಿಸತೊಡಗಿದರು.

ಜರ್ಮನಿಯತ್ತ ನೋಡುವುದನ್ನು ಕೂಡಾ ಬಿಟ್ಟರೆ, ಎಷ್ಟೋ ಸಮಯದಿಂದ ಯೋಚಿಸುತ್ತಿದ್ದ ಗಡಿಯನ್ನೇ ವರ್ಜಿಸಿದಂತಾಗುವುದಲ್ಲವೆಂದು ಅವರು ಒಮ್ಮೊಮ್ಮೆ ಚಕಿತರಾಗುತ್ತಿದ್ದರು. ಆ ಗಡಿಯನ್ನು ದಾಟುವುದು ಎಷ್ಟು ಸುಲಭವೆಂದು ಅವರಿಗೆ ತೋರುತ್ತಿತ್ತು.

ಮತ್ತೊ ಅವರಿಗೊಂದು ಸಮಸ್ಯೆಯಿತ್ತು. ತಾವು ಗಡಿಯ ಕುರಿತು ಮಾತಾಡುವುದನ್ನೇ ಬಿಟ್ಟದ್ದೇವೆಂಬ ಸಂಗತಿಯನ್ನು ಯಾರಾದರೂ ಗಮನಿಸಿರಬಹುದೆಂದು ಅವರು ಆಶ್ಚರ್ಯಪಡತೊಡಗಿದರು.

ಆ ಕಾರು ನೇರವಾದ ರಸ್ತೆಯಲ್ಲಿ ಎಗರ್ ಪಟ್ಟಣದ ಕಡೆಗೆ ವೇಗವಾಗಿ ಬಿಡುತ್ತಿರುವಾಗ ಡಾಕ್ಟರ್ ಸ್ಟೆಕ್‌ರು ಕೂಡಾ ಹಾಗೆಯೇ ಅದರ ವಿಷಯ ಆಶ್ಚರ್ಯಪಡುತ್ತಿದ್ದರು.

ಗುಪ್ತ ಸರ್ಕಾರೀ ಪೋಲೀಸಿನ ಡಿಸ್ಟ್ರಿಕ್ಟ್ ಮುಖ್ಯಾಧಿಕಾರೀ ಕಮಿಸ್ಸಾರ್ ಇರ್ವಾ ಪ್ರಡೆಲ್ಕಾ, ಡಾಕ್ಟರ್ ಸ್ಟೆಕ್‌ರಷ್ಟೇ ತನ್ನ ವೃತ್ತಿಯಲ್ಲಿ ತನ್ನದೇ ಆದ ರೀತಿಯಲ್ಲಿ ನಿಷ್ಠಾವಂತನಿದ್ದನು. ಅವನ ಮೈಯ್ಯಲ್ಲಿ ಕೂದಲಿರಲಿಲ್ಲ. ನೆಪೋಲಿಯನ್‌ನು ಹಿಂದೆ ಎಲ್ಲಾ ಭಾವೀ ಸರ್ವಾಧಿಕಾರಿಗಳೂ ಜನತಾ ಚಳವಳವನ್ನು ಹತ್ತಿಕ್ಕಲು "ಗುಂಡಿಕ್ಕುವ ತಲೆ"ಯನ್ನು ಅರಿತುಕೊಳ್ಳಬೇಕೆಂದು ಶಿಫಾರಸು ಮಾಡಿದ್ದನು. ಆ ಮೂಲಕವೇ ನಿರಂಕುಶ ಪ್ರಭುತ್ವವು ನೆಲೆ ನಿಲ್ಲಬಹುದೆಂದು ಹೇಳಿದ್ದನು. ಆದರೆ ಈ ಕಮಿಸ್ಸಾರ್ ಅಧಿಕಾರಿಯಂಥವರು ನಿರಂಕುಶ ಪ್ರಭುತ್ವಕ್ಕೆ ಗುಂಡಿಗಿಂತಲೂ ಹೆಚ್ಚು ಅವಶ್ಯವಾಗಿದ್ದರೆಂದು ಡಾಕ್ಟರ್ ಸ್ಟೆಕ್ ನಿರ್ಧರಿಸಬಹುದಿತ್ತು. ಆದರೆ ಎಗರ್ ಜೈಲಿನ ಖಾಲಿಯಾಗಿದ್ದ ಹೊಲಸು ಕೋಣೆಯೊಂದಕ್ಕೆ ಅವರನ್ನು ಕೊಂಡು ಹೋದಾಗ ತಮಗೆ ಒದಗಿರುವ ಅಪಾಯ ಕುರಿತು ಮಾತ್ರ ಅವರು ಯೋಚನಾಮಗ್ನರಾಗಿದ್ದರು.

ಯಾಕೆಂದರೆ, ಇಂಥ ಸ್ಥಳೀಕ ವಿಕೃತ ಪ್ರವೃತ್ತಿಯ ಕಮಿಸ್ಸಾರ್ ವರ್ಗವೊಂದಿಲ್ಲದಿದ್ದರೆ, ಯಾವ ರಾಜಕೀಯ ಸರ್ವಾಧಿಕಾರವೂ ರಾಷ್ಟ್ರಕ್ಕೆ ಅಂಟಿಕೊಳ್ಳುವ ಸಂಗತಿ ಅಂತಿರಲಿ; ಅದು ಆರಂಭ ಕೂಡಾ ಆಗಲಾರದು.

ಎಲ್ಲಾ ಅಲ್ಪ ಪಾಕ್ಷಿಕ ಸರ್ವಾಧಿಕಾರಿಗಳಂತೆ, ಕಮಿಸ್ಸಾರನೂ ಪಕ್ಷದ ಶಿಸ್ತನ್ನು ಅಕ್ಷರಶಃ ಪಾಲಿಸಬೇಕಿತ್ತು. ಒಮ್ಮೆ ತನ್ನನ್ನು ಅಧಿಕಾರಕ್ಕೇರಿಸಿ ತನ್ನ ಅಧಿಕಾರ ಕುರಿತು ಭರವಸೆ ಸಿಕ್ಕಿದರೆ ಸಾಕು, ಕಮಿಸ್ಸಾರ್ ಮತ್ತೆ ತನ್ನ ಒಡೆಯರಿಗೆ ವಿಶ್ವಾಸಪೂರ್ವಕ ಸೇವೆ ಗೈಯ್ಯುವನು. ಮೇಲಿನಿಂದ ಯಾವ ಆಜ್ಞೆಯೇ ಬರಲಿ, ಅವನು ಯಾವುದೊಂದೂ ವೈಯುಕ್ತಿಕ ಹಿತಾಹಿತಗಳ ಅಡ್ಡಿಯಿಲ್ಲದೆ ಆ ಆಜ್ಞೆಯನ್ನು ಶಿರಸಾವಹಿಸಿ ಕಾರ್ಯಗತ ಮಾಡು

ವನು. ಹೀಗೆ ಶಾಸನವನ್ನು ಜನರ ಮೇಲೆ ಹೇರಿಸಲು ಯಾವ ಹೇಯವಾದ ಪ್ಪಾಶವೀ ವಿಧಾನವನ್ನು ಪ್ರಯೋಗಿಸಲೂ ಅವನು ಉತ್ಸಾಹಪಡುತ್ತಿದ್ದನು. ಅಂತೆಯೇ ಮೇಲಿನ ಆಜ್ಞೆಯ ಮೇರೆಗೆ ಕೇವಲ ಪ್ರಶ್ನೆಗಳನ್ನು ಕೇಳಿಯೂ ಅವನು ತೃಪ್ತನಾಗುವುದಿತ್ತು. ಆಜ್ಞೆ ದೊರೆತರೆ ಅವನು ಸಂಭಾವಿತನೂ ಆಗ ಬಲ್ಲನು— ಕೆಲವುವೇಳೆ ಹೆಚ್ಚು ಕಡಿಮೆ ಸಾಧುವೂ ಆಗುತ್ತಿದ್ದ.

ಡಾಕ್ಟರ್ ಸ್ಪೆಕ್ ತಮ್ಮ ವೃತ್ತಿಯ ಸ್ವಭಾವದಿಂದಲೋ ಏನೋ ರಕ್ತದ ಭಯವನ್ನು— ಅವರಿಗೆ ಎಂದಾದರೂ ಅದು ಇದ್ದಿದ್ದರೆ— ಕಳಕೊಂಡಿದ್ದರು; ಆದರೆ ಆ ಸಣ್ಣ ಕೋಣೆಯ ಗೋಡೆಗಳಲ್ಲಿದ್ದ ಕಡು ಕಂದು ಬಣ್ಣದ ಬೊಟ್ಟು ಗಳನ್ನು ತೀವ್ರಗ್ರಾಹಿ ದೃಷ್ಟಿಯಿಂದ ನೋಡಿದಾಗ ಅವರ ಹೃದಯ ಕುಗ್ಗಿ ದಂತಾಯಿತು. ಅದಾವುದರ ಬೊಟ್ಟುಗಳೆಂಬುದು, ಶುದ್ಧ ಮೂರ್ಖನಿಗೆ ಮಾತ್ರ ತಿಳಿಯದಿರಬಹುದಿತ್ತು; ಮತ್ತೆ ಆ ಬೊಟ್ಟುಗಳು ಉಂಟಾದ ಸನ್ನಿ ವೇಶಗಳ ಆಗಾಗ ಉದ್ಭವಿಸುತ್ತಿದ್ದ ಒಂದೇ ಒಂದು ಸನ್ನಿವೇಶ— ಭಯಂಕರ ಚಿತ್ರವು ಕೇವಲ ಬುದ್ಧಿಗೇಡಿಗಳಲ್ಲಿ ಮಾತ್ರ ಕಾಣಿಸಿಕೊಳ್ಳದಿರಬಹುದಿತ್ತು.

ಒಂದು ಹಳೆಯ ಕುರ್ಚಿಯ ಮೇಲೆ ಕಮಿಸ್ಸಾರ್ ಪ್ರಡೆಲ್ಕ ಕುಳಿತಿದ್ದ. ಅವನ ಮುಂದೆ ಒಂದು ಅಡುಗೆ ಕೋಣೆಯಲ್ಲಿ ಪ್ರಯೋಗಿಸುವ ಮೇಜು ಇತ್ತು. ಗುಪ್ತಪೋಲೀಸು ಪಡೆಯ ಏಳು ಮಂದಿ ನೌಕರರು ಗೋಡೆಯ ಬದಿ ಯಲ್ಲಿ ಅಡುಗೆ ಕೋಣೆಯ ಕುರ್ಚಿಗಳಲ್ಲಿ ಕುಳಿತಿದ್ದರು. ಎಲ್ಲರೂ— ಕಮಿ ಸ್ಸಾರ್ ಕೂಡಾ— ನಿತ್ಯದ ಉಡುಪುಗಳಲ್ಲಿದ್ದರು; ನಿತ್ಯದ ಉಡುಪುಗಳಲ್ಲಿದ್ದ ಈ ಕೂಟ, ಇನ್ನೂ ಭಯಾನಕವಾಗಿ ತೋರುತ್ತಿತ್ತು. ಕೋಣೆಯ ಗೋಡೆಗಳು ಸಾಮಾನ್ಯವಾಗಿ ತೋರುತ್ತಿದ್ದುವು. ಅವುಗಳ ಮಧ್ಯೆ ಈ ವ್ಯಕ್ತಿಗಳ ಸಾಮಾ ನ್ಯತೆಯು ಇನ್ನೂ ಎದ್ದು ಕಾಣುತ್ತಿತ್ತು. ಗೋಡೆಗಳಲ್ಲಿ ಎತ್ತರವಾದ ಚಿಕ್ಕ ಕಿಟಕಿಗಳಿದ್ದುವು. ಅವುಗಳ ಮಧ್ಯೆ ಸರಳುಗಳಿದ್ದುವು. ಬಾಗಿಲು ಬಹಳ ಬಲವಾಗಿತ್ತು. ನೀಲಿಸೂಟು, ಕಪ್ಪು ಟೈ, ನಿರ್ಮಲವಾದ ಬೂಟ್ಸು ಮತ್ತು ಕಾಲರುಗಳಿಗೂ ರಕ್ತ ಚೆಲ್ಲಿದ ಭಯಾನಕ ಗೋಡೆಗಳಿಗೂ ಇದ್ದ ಭೇದಗಳು ಸುಲಭವಾಗಿ ಕೈಗೆ ಗೋಚರಿಸುತ್ತಿದ್ದುವು. ಅವನ ಮನಸ್ಸು ಅನಿವಾರ್ಯ ವಾಗಿ ಅತ್ತ ಸೆಳೆಯಲ್ಪಡುತ್ತಿತ್ತು. ಹಾಗೆಯೇ ಚೊಕ್ಕಟ ಉಡುಪುಗಳನ್ನು ಧರಿಸಿ ಮೌನವಾಗಿ ಚಿಕ್ಕ ಕತ್ತಲೆಯ ಕೋಣೆಯಲ್ಲಿ ಕೂಡಿದ್ದ ಆ ವ್ಯಕ್ತಿಗಳು

ಉದ್ದೇಶದ ಕುರಿತು ಭಯವೂ ಅಷ್ಟೇ ಅನಿವಾರ್ಯವಾಗಿ ಉದ್ಭವವಾಗುತ್ತಿತ್ತು.

ಡಾಕ್ಟರ್ ಸ್ವಿಕ್ ತಮ್ಮನ್ನು ಆವರಿಸುತ್ತಿದ್ದ ಅಂಜಿಕೆಯಿಂದ ತಪ್ಪಿಸಿಕೊಳ್ಳಲಿಕ್ಕಾಗಿ, ಆ ಕೂಟದ ಉದ್ದೇಶದ ಕುರಿತು ಯೋಚಿಸುವುದನ್ನು ಬಿಡಲು ಯತ್ನಿಸಿದರು. ಆ ವ್ಯಕ್ತಿಗಳು ಅವರು ತೋರುವಂತೆ, ಅವರ ಉಡುಪುಗಳಂತೆ ಅಷ್ಟೇ ಸಾಮಾನ್ಯರೆಂದು ಸ್ವಿಕ್ ತನ್ನೊಳಗೇ ಹೇಳಿಕೊಂಡರು. ಅವರು ಕೇವಲ ಸಾಮಾನ್ಯ ಕಾರಣಗಳಿಗಾಗಿಯೇ ಅಂಥ ಅಮಾನುಷ ಕೃತ್ಯಗಳನ್ನು ಮಾಡುತ್ತಿದ್ದಾರೆಂದು ಭಾವಿಸಿದರು. ಅವೇ ಕಾರಣಗಳು ಇತರರನ್ನು ಲಾರಿ ನಡೆಸುವ ಕೆಲಸಕ್ಕೋ, ಸಾಮಾನು ಕಟ್ಟಿಕೊಡಲಿಕ್ಕೋ, ಲೆಕ್ಕಪತ್ರಗಳನ್ನು ಬರೆಯಲಿಕ್ಕೋ ನೇಮಿಸುತ್ತೇವೆ. ಅವರೆಲ್ಲ ಮನುಷ್ಯರು. ಅವರಿಗೆ ತಿನ್ನಲು ಆಹಾರ ಬೇಕು. ವಿಶ್ರಮಿಸಲು ಸ್ಥಳ ಬೇಕು. ಕುಡಿಯಲು ಮದ್ಯ ಬೇಕು ಮತ್ತು ಸೇದಲು ಸಿಗರೇಟು ಬೇಕು. ಅವರಿಗೆ ಹೆಂಡತಿ ಮಕ್ಕಳಿರುವರು. ಅವರನ್ನು ಸಾಕಿ ಸಲಹಬೇಕು. ಅವರು ಕಾಯಿಲೆ ಬಿದ್ದಾಗ ನೋಡಿಕೊಳ್ಳಬೇಕು.

ಸ್ವಿಕ್‌ರ ಧೈರ್ಯ ಪೂರ್ಣ ಕೈಬಿಟ್ಟಿರಲಿಲ್ಲ. ಅವರು ಇನ್ನೂ ಯೋಚಿಸುತ್ತಿದ್ದರು: ಈ ವ್ಯಕ್ತಿಗಳು ತನ್ನನ್ನು ನೋಡಲು ಆಸ್ಪತ್ರೆಯಲ್ಲಿ ಕಾಯುವ ರೋಗಿಗಳಾಗಿರುತ್ತಿದ್ದರೆ, ತನಗೆ ಇವರು ಹೇಗೆ ಕಾಣುತ್ತಿದ್ದರು ?

ಅವರನ್ನೆಲ್ಲ ಪುನಃ ಸ್ವಿಕ್ ಪರಿಶೀಲಿಸಿದರು. ಅವರ ರೋಗದ ಚಿಹ್ನೆಗಳನ್ನು ಶೋಧಿಸಿದರು. ತನ್ನ ವೃತ್ತಿ ಅವರಿಗೆ ಆ ಅಧಿಕಾರ ಕೊಟ್ಟಿತ್ತು: ತಾನು ಡಾಕ್ಟರನೆಂಬುದನ್ನು ಪ್ರತಿಕ್ಷಣವೂ ಪ್ರಯತ್ನಪೂರ್ವಕ ನೆನಪಿಗೆ ತಂದುಕೊಂಡರೆ ಮಾತ್ರ ತನ್ನ ಜೀವಕ್ಕೆ ಬಂದೊದಗಿದ ಈ ಅಪಾಯಕರ ಸನ್ನಿವೇಶವನ್ನು ಹತೋಟಿಗೆ ತರುವ ಆಸೆ ಇರಬಹುದಿತ್ತು.

ಕಮಿಸ್ಸಾರ್ ಮೂತ್ರಾಶಯದ ಬಲಿತ ಬೇನೆಯಿಂದ ನರಳುತ್ತಿದ್ದನೆಂದು ಸ್ವಿಕ್‌ರಿಗೆ ತೋರಿತು. ಮೂಲೆಯಲ್ಲಿ ಕುಳಿತಿದ್ದ ನರೆದ ಕೆಂಪು ಕೂದಲಿನ ವ್ಯಕ್ತಿಯು ಹೃದಯ ರೋಗಕ್ಕೆ ಬಲಿಯಾಗಿದ್ದನೆಂದು ತೋರುತ್ತಿತ್ತು. ಕಮಿಸ್ಸಾರನ ಸಮೀಪದಲ್ಲಿ ಕುಳಿತಿದ್ದ ಎತ್ತರದ ತರುಣನಿಗೆ ಕ್ಷಯರೋಗವು ಸುಪ್ತಾವಸ್ಥೆಯಲ್ಲಿ ಪೀಡಿಸುತ್ತಿದೆಯೆಂದು ಅವರಿಗೆ ಮನವರಿಕೆಯಾಯಿತು.

ಆ ರಕ್ತವಿಲ್ಲದ ಚರ್ಮ, ಉಬ್ಬಿದ ದವಡೆಗಳ ಕೆಂಪು ಛಾಯೆ... ಓಹೋ, ಸರಿ.... ಬೆರಳುಗಳ ತುದಿಯನ್ನು ಮೀರಿದ ಅರ್ಧ ಚಂದ್ರಾಕಾರದ ಉಗುರುಗಳು.... ಅಲ್ಲಿ ಕೂತಿದ್ದವರೊಡನೆ ತಮಗಿರುವ ಹೆಚ್ಚಿನ ಸ್ವಾಭಾವಿಕ ಸಂಬಂಧವನ್ನು ಕಲ್ಪಿಸಿದಾಗ ಅವರ ಭಯವೆಲ್ಲ ಕರಗಿ ಹೋಯಿತು. ಹಾಗೆಯೇ ಆ ಕುಳಿತಿದ್ದ ವ್ಯಕ್ತಿಗಳಿಗೆ ತನ್ನೊಡನಿರುವ ಸ್ವಾಭಾವಿಕ ಸಂಬಂಧವನ್ನು ಸ್ಪೈಕ್ ಕಲ್ಪಿಸಿದರು.

ಆದರೆ ಈ ಮನಸ್ಸಿನ ಸ್ಥಿಮಿತಕ್ಕೆ ಒಂದು ಕೊರತೆಯಿತ್ತು. ಮನುಷ್ಯರು, ತಮ್ಮ ಅಸೌಖ್ಯ ಮತ್ತು ಮರಣಗಳ ಭಯದಿಂದ ಪೀಡಿತರಾಗಿ ತಾವು ಉಚ್ಚಸ್ಥಾನಕ್ಕೇರಿಸಿರುವ ಡಾಕ್ಟರರನ್ನು, ದೇವರ ದ್ವೇಷದಿಂದ ತಮ್ಮನ್ನು ರಕ್ಷಿಸುವ ಏಕಮಾತ್ರ ಕವಚವನ್ನಾಗಿ ನಂಬುತ್ತಾರೆ, ಎಂಬ ನಿಜ ಸಂಗತಿಯನ್ನು ಮಾತ್ರ ಅವರಿಗೆ ಮರೆಯಲಾಗಲಿಲ್ಲ. ತಮಗೆ ಒದಗಿದ ಯಾವುದೇ ಗಂಡಾಂತರಗಳಿಂದ ಪಾರುಮಾಡಲು ಮನುಷ್ಯರು ಡಾಕ್ಟರರನ್ನು, ಅಪೇಕ್ಷಿಸುತ್ತಾರೋ ಆ ಗಂಡಾಂತರಗಳ ಸಂಕೇತವಾಗಿ ಡಾಕ್ಟರರು ಇದ್ದಾರೆ. ಭಯಗ್ರಸ್ಥರಾಗಿರುವ ಎಲ್ಲರಿಗೂ ಡಾಕ್ಟರರು ಕಾಯಿಲೆ ಮತ್ತು ಮರಣಗಳ ಜೀವಂತ ಮೂರ್ತಿಯೆಂದು ತೋರುತ್ತಾರೆ— ಮತ್ತೆ ಜನ ಯಾವಾಗ ಡಾಕ್ಟರರು ತಮ್ಮನ್ನು ರಕ್ಷಿಸಲಾರರೆಂದು ನಂಬುತ್ತಾರೋ, ಡಾಕ್ಟರರ ಅವಶ್ಯ ತಮಗಿಲ್ಲವೆಂದು ಭಾವಿಸುತ್ತಾರೋ, ಡಾಕ್ಟರರು ಸೂಚಿಸುವ ಮತ್ತು ವಕ್ತಿಕರಿಸುವ ರೋಗ ಮತ್ತು ಮರಣಗಳ ವಿರುದ್ಧ ಜನರಲ್ಲಿ ತಮ್ಮ ಸೇಡನ್ನು ತೀರಿಸಿಕೊಳ್ಳುತ್ತಾರೆಂದು ಡಾಕ್ಟರರೇ ಸ್ವತಃ ಭಯಪಡಬೇಕು.

ಡಾ|| ಸ್ಪೈಕ್ ತಮ್ಮ ಪಳಗಿದ ಇಚ್ಛಾ ಶಕ್ತಿಯನ್ನು ಪ್ರಯೋಗಿಸಿ ಹೆದರಿಕೆಯ ಆವೇಶವನ್ನು ಅಡಗಿಸಲು ಸಮರ್ಥರಾದರು; ತಮ್ಮ ಮನಸ್ಸನ್ನು ಅವರು ಸ್ಥಿಮಿತದಲ್ಲಿಟ್ಟುಕೊಂಡರೂ, ಇನ್ನೂ ಅವರಿಗೆ ಆ ಜನರ ಅಂಧದ್ವೇಷದ ಮೇಲೆ ಹೆದರಿಕೆಯಿತ್ತು. ಮನುಷ್ಯರ ಸಹಜ ಸ್ವಭಾವವನ್ನನುಸರಿಸಿ, ಎಲ್ಲರಲ್ಲಿಯೂ ದ್ವೇಷಾಸೂಯೆಗಳು ಎಂಥವರ ಪಾಂಡಿತ್ಯವನ್ನೂ ಕಡೆಗಣಿಸಬಲ್ಲುದೆಂಬುದು ಮನಃಶ್ಶಾಸ್ತ್ರದ ಮುಖ್ಯ ಸೂತ್ರ.

ಸ್ಪೈಕ್ ಆ ಜನರನ್ನು ಹೇಗೆ ಪರಿಶೀಲಿಸುತ್ತಿದ್ದರೋ, ಅವರೂ ಅದೇ ಸ್ಪೈಕ್‌ರನ್ನು ಅಷ್ಟೇ ಜಾಗರೂಕತೆಯಿಂದ ಪರಿಶೀಲಿಸುತ್ತಿದ್ದರು. ಸ್ಪೈಕ್

ಯೋಚಿಸುತ್ತಿದ್ದ ಯಾವುದೋ ಭಾವನೆ ಅವರ ಮುಖ್ಯದಲ್ಲಿ ಪ್ರತಿ ಬಿಂಬಿತವಾದಂತೆ ತೋರುತ್ತಿತ್ತು. ಯಾಕೆಂದರೆ ಕಮಿಸ್ಸಾರ್ ಪ್ರಡೆಲ್ಕನು ಫಕ್ಕನೆ ಹಲ್ಗಡೆಯುತ್ತ,

"ಡಾಕ್ಟರ್ ! ನಿಮ್ಮ ತಪ್ಪುಗಳನ್ನು ನಿಮಗೆ ತಿಳಿಸಲು ನಾವು ಇಲ್ಲಿಗೆ ನಿಮ್ಮನ್ನು ಬರಮಾಡಿದ್ದೇವೆ".... ಎಂದು ಮೆಲ್ಲನೆ ಪಿಸುಗುಟ್ಟಿದನು.

ಸ್ವೆಕ್‌ರ ಮುಖ ಕೆಂಪಾಯಿತು. ಕಮಿಸ್ಸಾರನ ಕೆಲವು ಸಹಾಯಕರು ಅರ್ಥರಹಿತವಾದ ನಸುನಗೆಯನ್ನು ನಕ್ಕರು. "ಡಾಕ್ಟರ್ ಸ್ವೆಕ್" ನೀವು ಸರ್ಕಾರದ ವಿರುದ್ಧ ಕೆಲಸಮಾಡುವ ಸಂಸ್ಥೆಯೊಂದಕ್ಕೆ ಸೇರಿರುವಿರೆಂದು ಪ್ರಬಲವಾದ ಸಂದೇಹವು ಮೂಡಿ ಬಂದಿದೆ ಎಂದು ಕಮಿಸ್ಸಾರ್ ಇನ್ನೂ ಅದೇ ಇಂಪಿನ ಸಂಮೋಹಿಸೀ ಧ್ವನಿಯಲ್ಲೇ ಮುಂದರಿಸಿದನು.

ಸ್ವೆಕ್ ತಮ್ಮ ಭುಜಗಳನ್ನು ನೇವರಿಸಿಕೊಂಡು ಬಹಳ ಮೆಲ್ಲಗೆ ಸಿಟ್ಟು ಸಿರು ಬಿಟ್ಟರು. ಪುರಾತನದ ಆರೋಪ. " ಕಮಿಸ್ಸಾರ್ ಈ ಆರೋಪವನ್ನು ನೀವು ಹೇಗೆ ಸಮರ್ಥಿಸುವಿರೆಂದು ನಾನು ಕೇಳಬಹುದೇ .... .....?"

ಕಮಿಸ್ಸಾರ್‌ನ ಹುಬ್ಬು ಹಾರಿತು. ತನ್ನ ಮೇಲಿನ ಆರೋಪವನ್ನು ಸಿದ್ಧ ಪಡಿಸುವ ತೊಂದರೆಯನ್ನು ಯಾರಾದರೂ ಅನುಭವಿಸಬೇಕೆಂದಲ್ಲಿ ಆರೋಪಿಯು ಯಾಕೆ ಯೋಚಿಸಬೇಕೆಂಬ ಕಾರಣ ಕಮಿಸ್ಸಾರ್‌ನಿಗೆ ಬಹುಶ ಗೊತ್ತಾಗಲಿಲ್ಲ.

" ಡಾಕ್ಟರ್ ನೀವು ಜಾಗ್ರತೆಯಲ್ಲಿರಬೇಕು. ನಿಜವಾಗಿಯೂ ಹೆಚ್ಚು ಜಾಗ್ರತೆ ವಹಿಸಬೇಕು. ನೀವು ಈಗಾಗಲೇ ಅನೇಕಮಂದಿ ಬಹಳ ಹೆಚ್ಚು ಮಂದಿ ರಾಷ್ಟ್ರದ ಶತ್ರುಗಳಿಗೆ ಸಹಾಯವನ್ನು ಮಾಡಿದ್ದೀರಿ ಎಂದು ಪ್ರಡಲ್ಕನು ಉದ್ಗರಿಸಿದನು. ಸ್ವೆಕ್‌ರ ಮುಖದಲ್ಲಿ ಉಗ್ರವಾದ ನಿರಾಕರಣೆಯ ಭಾವನ್ನು ಕಂಡು ಅವನು ಮತ್ತೆ, " ನೀವು ನ್ಯಾಯಾಲಯದಲ್ಲಿ ಒಪ್ಪಿಸಿರುವ ಕೆಲವು ವೈದ್ಯಕೀಯ ಪುರಾವೆಗಳನ್ನು ನಾವು ಪರಿಷ್ಕರಿಸಿದ್ದೇವೆ. ಆದರೆ.... ಅವುಗಳಲ್ಲಿ ಹೆಚ್ಚಿನವುಗಳಲ್ಲಿ ಏನೂ ಪರಿಷ್ಕಾರಕ್ಕೆ ಸಿಗಲಿಲ್ಲ ಅಷ್ಟೇ!" ಎಂದನು.

" ನೀವು ನನ್ನ ಇಡೀ ವೃತ್ತಿಯ ಮೇಲೆಯೇ ಅವಿಶ್ವಾಸವನ್ನು ಸೂಚಿಸುತ್ತಿದ್ದೀರೆಂಬುದು ನಿಮಗೆ ತಿಳಿದಿದೆಯೇ...?" ಎಂದು ಸ್ವೆಕ್ ಉಗ್ರವಾಗಿ ಪ್ರಶ್ನಿಸಿದರು.

ಕಮಿಸ್ಸಾರ್ ಇತರರನ್ನು— ಎಡಬಲಗಳಲ್ಲಿ— ನೋಡಿ ಸಾವಧಾನವಾಗಿ ತುಂಟ ನಗುವೊಂದನ್ನು ನಕ್ಕ.

" ಹೌದು ಡಾಕ್ಟರ್ ಅದು ನನಗೆ ತಿಳಿದಿದೆ. ನಾನೂ ಅದನ್ನೇ ಹೇಳುತ್ತಿದ್ದೇನೆ... "

ಕಿಟಕಿಯ ಹೊರಗೆ ತೋರುತ್ತಿದ್ದ ಶುಭ್ರವಾದ ನೀಲಾಕಾಶವನ್ನ ಡಾ|| ಸ್ವೆಕ್ ಎವೆಯಿಕ್ಕದೆ ನೆಟ್ಟ ದೃಷ್ಟಿಯಿಂದ ನೋಡಿದರು. ಅವರಿಗೆ ತಾವೇನು ಹೇಳಿದರೂ ಉಪಯುಕ್ತವಾಗದೆಂಬುದು ಸ್ಪಷ್ಟವಾಗಿತ್ತು. ಆದರೆ ಆ ಮೌನವು ಅಸಹನೀಯವಾಗಿತ್ತು. ತಮ್ಮಪರವಾಗಿ ಏನನ್ನು ಹೇಳಬೇಕೆಂಬುದೇ ಅವರಿಗೆ ತೋಚಲಿಲ್ಲ.

" ನಿಮಗೆ ಅಂಥಹ ಸಂಗತಿಯನ್ನು ಸಾಧಿಸಲಸಾಧ್ಯ ಎಂದು ಸ್ವೆಕ್‌ರು ಹೇಳಿದರು. ಕಮಿಸ್ಸಾರ್ ತಮ್ಮ ಬದಿಯಲ್ಲಿದ್ದ ಅಂದವಾದ ತಲೆಕೂದಲುಗಳಿದ್ದ ತರುಣನಿಗೆ,

" ಟಾಬೊರ್: ಡಾಕ್ಟರರಿಗೆ ನಿನ್ನ ಕುರ್ಚಿಯನ್ನು ಕೊಡು. ದಯವಿಟ್ಟು ಕುಳಿತುಕೊಳ್ಳಿ ಡಾಕ್ಟರ್..."

ಎಂದುಹೇಳಿದ.

ಸ್ವೆಕ್ ತರುಣನ ಕುರ್ಚಿಯಲ್ಲಿ ಕುಳಿತುಕೊಂಡರು. ಕಮಿಸ್ಸಾರ್‌ನ ಸಿಗರೇಟ್ ಪೆಟ್ಟಿಗೆಯಿಂದ ಒಂದು ಸಿಗರೇಟನ್ನು ತೆಗೆದು ಸ್ವೀಕರಿಸಿದರು. ಎಲ್ಲ ತಮಗಾಗಿ ತಂತ್ರ ಹೂಡಿದ್ದಾರೆಯೋ ಎಂದು ಸ್ವೆಕ್ ಜಾಗೃತರಾಗಿದ್ದರು. ಕಮಿಸ್ಸಾರ್‌ನಿಂದ ಸಿಗರೇಟು ಪಡೆದಾದ ಬಳಿಕ, ಅದನ್ನು ಉರಿಸಿ ಡಾಕ್ಟರರು ಬಹಳ ಉಪಕಾರ " ಎಂದರು ; ಅಷ್ಟೇ ಹೇಳಿದ್ದರೂ ತಾವು ಹೇಳಿದ್ದೇ ಹೆಚ್ಚಾಗಲಿಲ್ಲವೆ ಎಂದು ಅವರಿಗೆ ತೋರದಿರಲಿಲ್ಲ.

ಈ ಬೆಕ್ಕು-ಮತ್ತು-ಇಲಿ ನಾಟಕದಮುಂದಿನ ಅಂಕವನ್ನು ಅವರು ಮೌನದಿಂದ ನಿರೀಕ್ಷಿಸಿದರು. ಸರ್ವಾಧಿಕಾರಕ್ಕಿಂತ ಹೆಚ್ಚು ಕಲ್ಪನಾತೀತವಾದುದು. ಹಾಗಾಗಿ ಅದರಷ್ಟು ಸಂಪ್ರದಾಯ ಬದ್ಧವಾದುದು ಬೇರೇನೂ ಇಲ್ಲವೆಂದು ಅವರಿಗೆ ಆಗ ನೆನಪಾಯಿತು. ಅದನ್ನು ನೆನೆದು ಅವರ ಮನಸ್ಸು ಒಳಗಿಂದೊಳಗೆ ಕಂಪಿಸುತ್ತಿತ್ತು.

" ಕಮಿಸ್ಸಾರ್ ವಿನಯ ಪೂರ್ವಕವಾಗಿ, ಒರಗಿ ಕುಳಿತು ಕೊಂಡು ಬಾಯಿಂದ ಮೇಲಕ್ಕೆ ಹೊಗೆಯನ್ನುಗುಳುತ್ತ, " ಕಾಮ್ರೇಡ್‌ಸ್ವೆಕ್,"

ನಾನು ನಿಮ್ಮೊಡನೆ ಪ್ರಾಮಾಣಿಕವಾಗಿ ವರ್ತಿಸುತ್ತೇನೆ ಎನ್ನುತ್ತಾ ಅವನು ತನ್ನ ತಲೆಯನ್ನು ಸ್ವಲ್ಪ ತಗ್ಗಿಸಿ ಡಾಕ್ಟರರನ್ನು ನೋಡಿ ಪುನಃ ಸರಿಯಾಗಿ ಕುಳಿತುಕೊಂಡು ಮೇಲೆ ನೋಡುತ್ತ, ನಾನು ಹೇಳಿದ್ದನ್ನು ನಾನು ರುಜುಪಡಿಸ ಬಲ್ಲೆನೇ ಎಂದು ನೀವು ಈಗ ಕೇಳಿದಿರಿ ಯಥಾರ್ಥವಾಗಿ ನನಗೆ ಅದು ಸಾಧ್ಯವೋ ಅಸಾಧ್ಯವೋ ಎಂದು ಹೇಳಲಾಗದು, ಈತನಕ ಯಾವ ಒಂದು ದಾಖಲೆಯೂ ನನಗೆ ದೊರೆತಿಲ್ಲವೆಂದು ಮಾತ್ರ ನಾನು ಈಗ ಹೇಳ ಬಯಸುತ್ತೇನೆ...." ಎಂದು ಹೇಳಿದನು.

ಸ್ಪೆಕ್‌ರು ಆಗ ತಡೆಯಲಾರದ ದೀರ್ಘಶ್ವಾಸವೊಂದನ್ನು ಬಿಟ್ಟುಬಿಟ್ಟರು.

" ನಿಮಗೆ ವಿಮೋಚನೆಯಾಯಿತು. ಡಾಕ್ಟರ್......? ನಾನು ಪ್ರಾಮಾಣಿಕವಾಗಿ ವರ್ತಿಸುವೆನೆಂದಿದ್ದೆ: ಆದ್ದರಿಂದ ನಿಮ್ಮನ್ನು ಇಲ್ಲಿಗೆ ಕರೆಸಿದ ಕಾರಣ ವನ್ನು ಹೇಳುತ್ತೇನೆ. ನಿಮ್ಮ ಮೇಲೆ ಆರೋಪವನ್ನು ಹೊರಿಸಿದ್ದಾರೆ. "

" ಓಹೋ! ಸರಿ.. " ಹಾಗಾದರೆ ಇನ್ನು ಅವಕಾಶವಿದೆ ; ಸಿದ್ಧಗೊಳಿಸಿದ ಆರೋಪಗಳಷ್ಟೆ ಬರೇ ಆರೋಪ ಹೊರಿಸಲ್ಪಡುವುದು ಈ ಕಾಲದಲ್ಲಿ ಅಪಾಯಕರವೆಂಬುದು ಎಲ್ಲರಿಗೂ ಗೊತ್ತಿರುವ ವಿಷಯ" ನಿಮ್ಮೊಡನೆ ಪುರಾವೆ ಯಿಲ್ಲವೆಂಬುದು ನನಗೆ ಗೊತ್ತಿತ್ತು....

" ಇಲ್ಲ...? ಸರಿ .... ಅದು ಹಾಗಿರಲಿ. ಪುರಾವೆ ಇಲ್ಲದೇ ಹೋಗಲಿ ಎಂದು ನಾನು ನಿಮ್ಮ ಪರವಾಗಿ ಆಶಿಸುತ್ತೇನೆ, ಪ್ರಿಯ ಡಾಕ್ಟರ್. ಏಕೆಂದರೆ ದಾಖಲೆ ಇದ್ದರೆ ನಾವು ಅದನ್ನು ಖಂಡಿತ ಹುಡುಕಬಲ್ಲೆವು ಎಂದು ಮಾತ್ರ ಖಚಿತಮಾಡಿ ಕೊಳ್ಳಿರಿ "

" ದಾಖಲೆ ಇಲ್ಲ "

" ಸರಿ ಆಬಗ್ಗೆ ನನಗೆ ಸಂತೋಷವಾಗುವುದು " ಎಂದು ಮೃದುವಾಗಿ ಹೇಳಿದನು. ಡಾ|| ಸ್ಪೆಕ್‌ರು ಒಂದಿಷ್ಟೂ ಅಲ್ಲಾಡದೆ ಸುಮ್ಮನಿದ್ದರೂ " ಇಲ್ಲ, ಇಲ್ಲ ಡಾಕ್ಟರ್.... ನಿಮ್ಮನ್ನು ಈಗ ಹೋಗಗೊಡುವುದಿಲ್ಲ. ಇನ್ನು ನಿಮ್ಮೊಡನೆ ಒಂದೆರಡು ಚಿಕ್ಕ ಸಂಗತಿಗಳನ್ನು ವಿಚಾರಿಸಲಿದೆ.... ಡಾಕ್ಟರ್ ನೀವು ಆಸ್ಪತ್ರೆ ಯಿಂದ ನೇರವಾಗಿ ಬಂದಿರೇನು...ಓಹೋ, ಹೌದು ನೀವು ಹಾಗೆಯೇ ಬಂದಿರಿ. ಹಾಗಾದರೆ ನನಗೆ ತೋರುತ್ತದೆ.... ಟಾಬೊರ್: ಡಾಕ್ಟರರಿಗೂ ನನಗೂ ಸ್ವಲ್ಪ

ಕಾಫಿಯನ್ನು ತಯಾರಿಸಿ ಕೊಡಲು ಹೇಳುವೆಯಾ ? ನಮಗೆ ಇನ್ನುಸ್ವಲ್ಪ ಸಮಯ ಬೇಕಾಗಬಹುದೆಂದು ತೋರುವುದು... "

ಸ್ವೈಕ್‌ರಿಗೆ ಉಸಿರು ಕಟ್ಟಿದಂತಾಗಿತ್ತು. ಇನ್ನೊಂದು ದೀರ್ಘಶ್ವಾಸ ಬಿಡಲು ಅವರು ಯತ್ನಿಸುತ್ತಿದ್ದರು. ತನ್ನ ಎದೆಯ ಸುತ್ತಲೂ ಉಕ್ಕಿನ ಕವಚ ವನ್ನು ತೊಡಿಸಿದ್ದಂತೆ ಅವರಿಗೆ ಆಗ ಭಾಸವಾಗುತ್ತಿತ್ತು. ಆ ಕಮಿಸ್ಸಾರ್ ಮತ್ತು ಅವನ ಸಹಾಯಕ ಹುಚ್ಚನಗೆಯಿಂದ ಕೂಡಿದ ದೃಷ್ಟಿಯನ್ನು ಕಂಡು ಅವರಿಗೆ ತಮ್ಮ ಅಂಗಾಂಗಳನ್ನು ಚಲಿಸುವುದು ಕೂಡಾ ಅಸಾಧ್ಯವಾಗಿ ಹೋಗಿತ್ತು. ಆ ಜನರ ನೀಲವಾದ ಕಣ್ಣುಗಳು ತಿಳಿಯಾಗಿದ್ದವು. ಎಲ್ಲರ ಕಣ್ಣು ಗಳೂ ಹಾಗೆಯೇ ಸ್ವೈಕ್ ಹೇಗೆ ಪ್ರಯತ್ನ ಪೂರ್ವಕ ತಮ್ಮ ಅಂಗಿಯ ಕಿಸೆ ಯಿಂದ ಚಿಕ್ಕದಾದ ಔಷಧಿ ತೂಕಮಾಡುವಂತಹ ತೂಕದ ಕಲ್ಲೊಂದನ್ನು ಹೊರಗೆ ತೆಗೆದರು. ತಮ್ಮ ಬೆರಳುಗಳ ಸುತ್ತ ಅದನ್ನು ಹಾರಿಸುತ್ತ ಅದರೊಂದಿಗೆ ಆಡತೊಗಿದರು.

ಕಮಿಸ್ಸಾರ್ ಆ ತೂಕದ ಕಲ್ಲನ್ನು ನೋಡಿದ. ಅದು ಏನೆಂಬುದು ಅವನಿಗೆ ತಿಳಿಯಿತು. ಡಾಕ್ಟರರ ಮನಸ್ಸಿನಲ್ಲಿ ಕುತೂಹಲ ಪ್ರವೃತ್ತಿಯುಂಟಾ ಗಿದೆಯೆಂದು ಅವನು ಸಂತೋಷಪಟ್ಟ.

" ಡಾಕ್ಟರ್' ಈಗ ನೀವೆಂದುದು ಸತ್ಯವಾಗಿರಬಹುದು—ನಮ್ಮೆಲ್ಲರ ಬಗ್ಗೆ ನಾನು ಹಾಗೆ ನಂಬುತ್ತೇನೆ—ನೀವು ನೂತನ ಜನತಾ ರಾಜ್ಯದ ವಿರುದ್ಧ ಏನೂ ಮಾಡಿರಲಿಕ್ಕಿಲ್ಲ "

" ನಿಮಗೆ ಭರವಸೆ ಕೊಡುತ್ತೇನೆ, ಸ್ವಾಮಿ ನಾನು.... "

"ಹೌದು, ಹೌದು, ಕಾಮ್ರೇಡ್, ಸರಿ ..ನೀವು ರಾಜ್ಯದ ವಿರುದ್ಧ ಏನೂ ಮಾಡಿಲ್ಲವೆಂಬುದನ್ನು ನಾವು ಒಪ್ಪಿಕೊಳ್ಳೋಣ. ನೀವು ಅಲ್ಲವೆನ್ನುವಿರಲ್ಲ ? ಹೌದು: ಸರಿ ಅದು ಸತ್ಯವಾಗಿರಲೂ ಬಹುದು. ನನಗೆ ಆರೋಪವು ದೊರೆತಾಗ (ಎಲ್ಲಾ ಆರೋಪಗಳನ್ನು ಕೇವಲ ಔಪಚಾರಿಕವಾಗಿ ನಾವು ಶೋಧನೆ ಮಾಡುವೆವೆಂಬುದು ನಿಮಗೆ ಗೊತ್ತಿದೆಯಲ್ಲ ? ಸರಿ) ನನ್ನಷ್ಟಕ್ಕೆ ಹೇಳಿ ಕೊಂಡೆ, ಸರಿ ಇದು—ಸಂಪೂರ್ಣ ಕಲ್ಪನೆಯೆಂದು ಹೇಳಲಿಲ್ಲ : ಹಾಗಲ್ಲ : ಇದು ಅಸಾಧಾರಣ ಸಂಗತಿಯೆಂದು ಯೋಚಿಸಿದೆ. ಅದನ್ನು ನಾನು ಒಪ್ಪು ತ್ತೇನೆ ಖಂಡಿತ. ಸರಿ, ಆಗ ನಾನೇನಂದಿದ್ದೆ ? ಈಗ ನೆನಪಾಗುತ್ತಿದೆ. ಸರಿ

ಈ ಡಾಕ್ಟರರಿಗೆ ದೇಶದ್ರೋಹಿ ಚಟುವಟಿಕೆಗಳಲ್ಲಿ ಭಾಗವಹಿಸಲು ಎಲ್ಲಿ ಸಮಯದೊರಕುತ್ತದೆ ? ನಿಮಗೆ ಆಸ್ಪತ್ರೆಯಲ್ಲಿ ಕೆಲಸವಿದೆ. ನಿಮ್ಮ ಖಾಸಗಿ ಚಿಕಿತ್ಸೆಯಿದೆ. ಮತ್ತೆ ಡಿಸ್ಟ್ರಿಕ್ಟ್ ಕೋರ್ಟಿನಲ್ಲಿ ನಿಮಗೆ ಕೆಲಸವಿದೆ. ನಾನು ಯಥಾರ್ಥವಾಗಿ ಒಪ್ಪಿ ಕೊಳ್ಳುತ್ತೇನೆ. ನನಗೆ ಆಗ ನಿಮ್ಮ ಮೇಲಿನ ಆರೋಪ ಸಂಭವನೀಯವೆಂದು ತೋರಲಿಲ್ಲ "

" ನಿಮಗೆ ಧನ್ಯವಾದ " ಎನ್ನುತ್ತ ಡಾಕ್ಟರ್ ಸ್ವಿಕ್ ತಾನು ಹಾಗೆಂದುದಕ್ಕೆ ನಾಚಿಕೆ ಪಟ್ಟರು.

" ನಿಮಗೆ ಇಚ್ಛೆ ಪ್ರಕಾರ ಬಂದು ಹೋಗಲು ಕೆಲವು ಸಂದರ್ಭಗಳಿವೆಯೆಂಬುದು ನಿಜ" ಕಮಿಸ್ಸಾರ್ ಇನ್ನೂ ವಿನಯ ಪೂರ್ವಕವಾಗಿಯೇ ನುಡಿದ " ನೀವು (ನಾನು ಉದಾಹರಣೆಗಾಗಿ ಹೇಳುತ್ತೇನೆ. ತಿಳಿಯತೆ ?) ಪರೀಕ್ಷಿಸುವ ಇಲ್ಲವೇ ಚಿಕಿತ್ಸೆ ಮಾಡುವ ನೆವನದಿಂದ ಎಲ್ಲಾ ರೀತಿಯ ಜನರನ್ನು ಕಾಣಬಲ್ಲಿರಿ. ನೀವು ಹಾಗೆ ಮಾಡಿಯೇ ಇದ್ದಿರಬಹುದು. ನೀವು ಹಾಗೆ ಮಾಡಿದ್ದೀರೆಂದು ನಾನು ಹೇಳುವುದಿಲ್ಲ...

" ನಾನು ಹಾಗೆ ಮಾಡಿಲ್ಲವೆಂದು ಭರವಸೆ ಕೊಡುತ್ತೇನೆ. "

" ಇಲ್ಲ. ಓಹೋ ಕಾಫಿ ! ಟಾಬೊರ್ ನಿನಗೆ ಧನ್ಯವಾದ ಅದನ್ನು ಇಲ್ಲಿ ಇಡುವೆಯಾ ? ಇಲ್ಲಿ ಇವರು ಒಳ್ಳೆಯ ಕಾಫಿ ಮಾಡುತ್ತಾರೆ ಡಾಕ್ಟರ್ : ಪೋಲೀಸರು ಯಾವಾಗಲೂ ಉತ್ತಮ ಕಾಫಿಯನ್ನು ಸಿದ್ಧ ಪಡಿಸಬಲ್ಲರೆಂಬುದನ್ನು ನಾನು ತಿಳಿದಿದ್ದೇನೆ. ಅವರು ನಿಜವಾದ ಕಾಫಿಯಿಂದ ತಮ್ಮ ತಂತ್ರವನ್ನು ಆರಂಭಿಸುವರೆಂದು ನನಗೆ ತೋರುತ್ತದೆ—ಪಾಪ ಅವರಿಗೆ ಬೇರೇನೂ ಕೆಲಸವಿಲ್ಲ .... ಸಾಮಾನ್ಯವಾಗಿ... "

" ಇದು ಒಳ್ಳೆಯ ಕಾಫಿ " ಎಂದು ಡಾ|| ಸ್ವಿಕ್ ನುಡಿದರು.

" ಇದು ಉತ್ಕೃಷ್ಟಕಾಫಿ, ಕಾಮ್ರೇಡ್, ನೀವೆನ್ನುವ ಹಾಗೆ ಈಗ.... ನಾವು ಹಿಂದೆ ಮಾತಾಡಿದ ವಿಷಯಕ್ಕೆ ಹೋಗೋಣ ನೀವು ರಾಜ್ಯದ ವಿರುದ್ಧ ಏನನ್ನು—ಖಚಿತವಾಗಿ ಕಾರ್ಯರೂಪದಲ್ಲಿ ಮಾಡಿಲ್ಲವೆಂದು ನಾವು ಒಪ್ಪಿದ್ದೆವು. ನೀವು ದ್ವೇಷ ಪೂರಿತವಾದ ಸುಳ್ಳು ಆರೋಪಣೆಗೊಳಗಾಗಿದ್ದೀರೆಂದು ನನಗೆ ಹೆಚ್ಚುಕಡಿಮೆ ಖಚಿತವಾಗಿದೆಯೆಂದು ನಿಮಗೆ ತಿಳಿದಿದೆಯೆ, ಕಾಮ್ರೇಡ್.... "

" ಸಂಪೂರ್ಣವಾಗಿ ಸುಳ್ಳು ಆರೋಪ ಸ್ವಾಮಿ"

" ಅಷ್ಟೆ ಆದರೆ—ನಾವು ಆರೋಪಿಸಿದವನಿಗೂ ತಕ್ಕ ಬೆಲೆಕೊಡೋಣ—ನಾನು ಈ ಆರೋಪಣೆಯಲ್ಲಿ ಒಂದು ವಿಧದ ನ್ಯಾಯವನ್ನು ಕಾಣಬಲ್ಲೆ ನನಗೆ ಅದು ಸಾಧ್ಯವಿದೆಯಲ್ಲವೆ ?.... ನಿಮಗೆ ತಿಳಿಯದೆ ಕಾಮ್ರೇಡ್ ?" " ಎಂದು ಕಮಿಸ್ಸಾರ್ ಡಾಕ್ಟರರ ಮುಖವನ್ನು ಪರಿಶೀಲಿಸುತ್ತ ಹೇಳಿದನು.

" ಇಲ್ಲ ಕಮಿಸ್ಸಾರ್ ನನಗೆ ತಿಳಿಯದು. ದ್ವೇಷಿಗಳು ಕೊಡುವ ಪೀಡೆಗಳನ್ನು ತಿಳಿಯಲು ಮನೋರೋಗದ ವೈದ್ಯ ಬೇಕಾಗಿಲ್ಲ. "

" ಓಹೋ...ನನಗೆ ಅಷ್ಟು ತಿಳಿಯದು ಕಾಮ್ರೇಡ್. ನೀವು ಇದು ಕೇವಲ ದ್ವೇಷ ಪೂರಿತವಾದುದೆಂಡೇ ಹೇಳುತ್ತೀರೆ ? ನನಗೇಕೋ ಆಶ್ಚರ್ಯ ವಾಗುವುದು ... "

" ಅದು ಬೇರೇನಾಗಬಹುದು.... ? "

" ಸರಿ ನೀವು ಹೇಳುವಂತೆ ದ್ವೇಷವೇ ಅದಕ್ಕೆ ಕಾರಣವಾಗಿರಬಹುದು ಆದರೆ......ನನಗೆ ತಿಳಿಯದು. ಅದು ಪರಿಶೀಲಿಸಲ್ಪಟ್ಟ ಸಂಗತಿಗಳಿಗೆ ಅಪಾರ್ಥ ಕಲ್ಪಿಸಿದುದರಿಂದಲೂ ಉಂಟಾಗಿರಬಹುದೆಂದು ನನಗನಿಸುತ್ತದೆ ಕಾಮ್ರೇಡ್"

ಸ್ಟೈಕ್ ಹುಬ್ಬು ಗಂಟಿಕ್ಕಿದರು. ಅವರಿಗೆ ಇದು ಸಮಸ್ಯಾತ್ಮಕವಾಯಿತು. ಆ ಕಳವಳವನ್ನು ಅವರು ತೋರ್ಪಡಿಸಿದರು.

" ಪರಿಶೀಲಿಸಿದ ಸಂಗತಿಗಳು, ಕಮಿಸ್ಸಾರ್...? ನಾನು ಪರಿಶೀಲಿಸಲ್ಪಡುತ್ತಿದ್ದೆನೆ ? "

ಕಮಿಸ್ಸಾರ್ ತನ್ನ ದಪ್ಪ ಬೆರಳುಗಳನ್ನು ಒಟ್ಟುಗೂಡಿಸಿ ಕುರ್ಚಿಯಲ್ಲಿ ಹಿಂದಕ್ಕೆ ಒರಗಿಕೊಂಡು.

" ಉದಾಹರಣೆಗೆ ..ನಿಮ್ಮ ಕಾರ್ಯಶೂನ್ಯತೆ ಕಾಮ್ರೇಡ್...? ಎಂದು ಮೃದುವಾಗಿ ಹೇಳಿದನು.

" ಕಾರ್ಯಶೂನ್ಯತೆ... ? ಕಮಿಸ್ಸಾರ್ ತನ್ನ ಅಸಂತೋಷವನ್ನು ವ್ಯಕ್ತಪಡಿಸುವ ಧಾಟಿಯಲ್ಲಿ ನಗುತ್ತ : ಕಾಮ್ರೇಡ್ ನೀವು ನೂತನ ಜೆಕೋಸ್ಲೋವಾಕಿಯಾದ ವಿರುದ್ಧ ಎಂದು ಏನನ್ನು ಮಾಡಲಿಲ್ಲವೆಂಬುದು ಸತ್ಯವಾಗಿರಬಹುದು. ಆದರೆ " ಕಣ್ಣರಳಿಸುತ್ತಾ ನೀವು ಅದರ ಪರವಾಗಿ ಏನನ್ನಾದೂರ ಮಾಡಿರುವಿರೆ ....? ಹ್ಞ, ನೋಡಿರಿ.........? "

ಸ್ವೈಕ್‌ರಿಗೆ ಈ ನ್ಯಾತಿನ ತಂತ್ರಗೊತ್ತಿದ್ದರೂ ಅವರಿಗೆ ಯೋಚನೆಗಳನ್ನು ತಡೆಯಲಾಗುತ್ತಿದ್ದಿಲ್ಲ. ಅದಕ್ಕೆ ಸುಲಭವಾಗಿ ಉತ್ತರವನ್ನೀಯಬಹುದು. ಅವರಲ್ಲಿ ಆಗ ಉಂಟಾದ ವಿಮೋಚನೆಯ ಭಾವ ಅವರ ಮುಖದಲ್ಲಿ ನಲಿದಾಡಿತು. ಅವರು ತುಸು ಕೋಪದಲ್ಲೇ, (ಏಕೆಂದರೆ ಅವರ ತಲೆಯ ಭಾರ ಸ್ವಲ್ಪ ಇಳಿದಂತಾಗಿತ್ತು.)

"ನಾನು ಅದಕ್ಕಾಗಿ ಏನನ್ನೂ ಎಂದೂ ಮಾಡಿಲ್ಲ, ಕಮಿಸ್ಸಾರ್ ! ನಾನು ರಾಜಕಾರಣಿಯೆಂದು ನಟಿಸುವುದಿಲ್ಲ. ಆದರೆ ಡಾಕ್ಟರರು ಯಥಾರ್ಥವಾಗಿ ತಮ್ಮ ಕರ್ತವ್ಯವನ್ನು ಪೂರೈಸಿದರೆ ಅದರಿಂದ ಪ್ರಗತಿಗೆ ಹಾನಿಯಾಗದು ಎಂಬುದು ಖಂಡಿತವಲ್ಲವೆ...?" ಎಂದು ಹೇಳಿದರು. ಕಮಿಸ್ಸಾರ್ ಡಾಕ್ಟರರ ಮೊಣಕಾಲಿನ ಮೇಲೆ ಒಂದು ಕೈಯ್ಯನ್ನಿಟ್ಟ.

"ಆದರೆ.... ನಿಮಗೆ ಸಾಧ್ಯವಿತ್ತು (ಈಗ ಅದನ್ನು ಒಪ್ಪಿ !)....ನೀವು ಇನ್ನೂ ತುಂಬಾ ಸಹಾಯ ಮಾಡಬಹುದಿತ್ತು ಅಲ್ಲವೆ...?"

"ಹೌದೆಂದು ನನಗೆ ತೋರುತ್ತದೆ" ಎಂದರು ಸ್ವೈಕ್. ಆಗ ಅವರು ಗಡಿಯಾರದ ಕಡೆಗೆ ನೋಡಿ, ತಾನು ಮನೆಗೆ ಮಧ್ಯಾಹ್ನದ ಊಟಕ್ಕೆ ಹೋಗಬಹುದೆಂದು ಅರ್ಥಹೀನವಾಗಿ ಯೋಚಿಸಿದರು. ಕಮಿಸ್ಸಾರ್ ನಸುನಕ್ಕು ತನ್ನ ಕೈಗಳೆರಡನ್ನೂ ತಿಕ್ಕಿದ.

"ಅದೇ ! ನೀವು ಒಪ್ಪುತ್ತೀರಿ ! ಈಗ ಸರಿ: ಕಾಮ್ರೇಡ್, ನಿಮಗೆ ಈಗ ಒಂದು ಅವಕಾಶವಿದೆ. ಎಗರ್ ಸೆರೆಮನೆಯಿಂದ ಸ್ವತಂತ್ರವಾಗಿ ಹೊರಗೆ ಹೋಗಲಿಕ್ಕೆ ಮಾತ್ರವಲ್ಲ—ಅದಕ್ಕಿಂತಲೂ ಸ್ವಲ್ಪ ಹೆಚ್ಚಿಗೆ. ಆ ನಗು ಅವನ ದಪ್ಪ ತುಟಿಗಳೆಡೆಯಲ್ಲಿ ಮಾಯವಾಯಿತು. ಡಾಕ್ಟರರನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತ ಅವನು "ಕಾಮ್ರೇಡ್; ನೀವು ಈಗ ನಿರ್ದೋಷಿಯೆಂದು ನಾನು ನಂಬಬೇಕಾದರೆ ನೀವು ನಿಮ್ಮ ಉಪಯುಕ್ತತೆಯನ್ನು ತೋರ್ಪಡಿಸಬೇಕಾಗುವುದು. ನೀವು ಇಲ್ಲಿ ನಮ್ಮೊಡನೆ ಕೆಲಸ ಮಾಡಬೇಕು...."

ಎಂದನವ.

"ಇಲ್ಲಿ? ಸೆರೆಮನೆಯೊಳಗೆ....? ಸ್ವೈಕ್ ಆಶ್ಚರ್ಯದಿಂದ ಕಣ್ಣರಳಿಸಿ ಕೇಳಿದರು.

"ನಾನು 'ಇಲ್ಲಿ' ಎನ್ನುವಾಗ.... ಸರಿ : ನಾನು ಇಲ್ಲಿ ಸೆರೆಮನೆಯೊಳಗೆಂದು ಹೇಳುವುದಿಲ್ಲ. ನನ್ನ ಹತೋಟಿಯಲ್ಲಿರುವ ಜಿಲ್ಲೆಯೊಳಗೆ ಎಂದರ್ಥ" ಎಂದು ಕಮಿಸ್ಸಾರ್ ಒರಟಾಗಿ ನುಡಿದನು.

ಮುಖ್ಯಾಂಶವನ್ನು ಹೇಳುವ ಮೊದಲು ಅವನು ತುಸು ನೋಡಿದ. "ಕಾಮ್ರೇಡ್, ನೀವು ನಮ್ಮ ಸಹಾಯಕರಾಗಬೇಕು. ನಾವು— ನಾನು ನಿಮಗೆ ಭರವಸೆಯಿಯಾಯುತ್ತೇನೆ – ನಿಮ್ಮ ಬುದ್ಧಿ ಶಕ್ತಿಗೆ ಬೆಲೆ ಕೊಡುತ್ತೇವೆ. ಹೌದು...." ಮತ್ತೆ ಸ್ವಲ್ಪ ಒತ್ತಿ ಮತ್ತೆ ನಿಮಗಿರುವ ಸಂಪರ್ಕಗಳಿಗೂ" ಈ ಕೊನೆಯ ಮಾತು ಡಾಕ್ಟರ್ ಸ್ವಿಕ್‌ರಿಗೆ ಅರ್ಥವಾಯಿತೋ ಇಲ್ಲವೋ ಎಂಬುದನ್ನು ಪರಿಶೀಲಿಸಲು ಅವನು ಅವರ ಮುಖವನ್ನೇ ತುಸು ಹೊತ್ತು ನೋಡಿದ. ಡಾಕ್ಟರರಿಗೆ ಅದು ಅರ್ಥವಾಗಿತ್ತು. ಆದರೆ ಅವರ ಮನಸ್ಸು ಆಗ ಸ್ಥಿಮಿತದಲ್ಲಿತ್ತು. ಆದ್ದರಿಂದ ಯಾವ ಅಪರಾಧ ಮಾಹಿತಿಯನ್ನೂ ಅಲ್ಲಿ ಹೇಳುವ ಗೊಡವೆಯನ್ನೇ ಅವರು ಮಾಡಲಿಲ್ಲ. ಕಮಿಸ್ಸಾರ್ ತುಸು ನಿರಾಶೆಯ ಧ್ವನಿಯಲ್ಲೇ ನೀವು ಯು. ಯೆ. ಆರ್. ಆರ್. ಎ. (ಸಂಯುಕ್ತ ರಾಷ್ಟ್ರ ಸಂಘದ ಸಂತ್ರಸ್ಥರಿಗೆ ಪರಿಹಾರವನ್ನೊದಗಿಸುವ ಒಂದು ವಿಭಾಗ) ಯಲ್ಲಿ ದುಡಿದಿದ್ದೀರೆಂದು ನಮಗೆ ಗೊತ್ತಿದೆ. ನಿಮಗೆ ಹೊರದೇಶಗಳಲ್ಲಿ ಸ್ನೇಹಿತರೂ ಪರಿಚಿತರೂ, ವೃತ್ತಿ ಬಾಂಧವರೂ ಇದ್ದಾರೆ. ಅಲ್ಲದೆ ಅಲ್ಲಿ, ಅವನು ಉತ್ಸಾಹ ಪೂರ್ವಕ ನಸುನಕ್ಕು (ಜೆಕೊಸ್ಲೋವಾಕಿಯದ ಹೊರಗೆ ನಿಮಗೆ ಉಚಿತವಾಗಿ— ಪ್ರವಾಸ ಮಾಡಿದ್ದೂ ಇರಬಹುದು. ನೀವು ಏನೆನ್ನುತ್ತೀರಿ ಆದರೆ") ಡಾಕ್ಟರರು ಉತ್ತರ ಕೊಡುವ ಅವಶ್ಯಕತೆಯನ್ನೊದಗಿಸುವ ಮೊದಲೇ "ನೀವು ನಿಮ್ಮ ಉಪಯುಕ್ತತೆಯನ್ನು ತೋರ್ಪಡಿಸಿದರೆ ಮಾತ್ರ...." ಎಂದು ಮತ್ತೆ ಮುಂದುವರಿಸಿದನು.

ಮಧ್ಯಾಹ್ನ ಈ ವಿಚಾರಣೆ ಆರಂಭವಾಗಿತ್ತು. ಅದು ರಾತ್ರಿ ಎಂಟು ಗಂಟೆಗೆ ಮುಕ್ತಾಯವಾಯಿತು.

ಕಮಿಸ್ಸಾರ್ ಊಟ ಮಾಡುವಾಗಲೂ ಮಾತಾಡಿದ್ದ. ಆರುಗಂಟೆಗೆ ಮಾತ್ರ ಅವನು ತುಸು ವಿಶ್ರಾಂತಿ ತೆಗೆದುಕೊಂಡಿದ್ದ. ಆತನಕ ಡಾಕ್ಟರ್ ಸ್ವಿಕ್ ಹೆಚ್ಚು ಕಡಿಮೆ ನಿರ್ದೋಷಿಯೆಂಬ ಸ್ನೇಹ ಭಂಗಿಯನ್ನೇ ಅವನು ತೋರ್ಪಡಿಸಿದ್ದ. ಆದರೂ ಸ್ವಿಕ್‌ರನ್ನು ಯಾವ ಉಗ್ರ ಸ್ವಭಾವದ ಆರೋಪದ ಮೇಲೆ ಎಗರ್ ಸೆರೆಮನೆಗೆ ತರಲಾಗಿತ್ತೆಂಬುದನ್ನು ಅವನು ಅವರಿಗೆ ಮರೆಯಲು ಬಿಡುತ್ತಿದ್ದಿಲ್ಲ. ಆಗಾಗ್ಗೆ ಅವನು ಆ ಆರೋಪದ ಸುದ್ದಿಯನ್ನೆತ್ತುತ್ತಿದ್ದ: "ಈಗ, ನಾವು ನೋಡೋಣ: ಈ ಆರೋಪದಲ್ಲಿ ಹುರುಳಿಲ್ಲವೆಂದು ನೀವು ಹೇಳುತ್ತಿದ್ದೀರಿ, ಹುಂ....?" ಹಾಗೆಯೇ, ಎಲ್ಲ ಮರಳಿ ಆರಂಭವಾಗುವುದು....

ಆದರೆ ಏಳು ಗಂಟೆಗೆ ಕಮಿಸ್ಸಾರ್‌ನ ಧಾಟಿ ಬದಲಿತು. ಡಾಕ್ಟರರು ಆಡುತ್ತಿದ್ದ ತೂಕದ ಕಲ್ಲೂ ಅವನ ಒರಟು ಸ್ವಭಾವಕ್ಕೆ ಕೊಟ್ಟಿದ್ದ ಕೃತಕ ಮೆರಗನ್ನು, ಅವನ ಉದ್ದೇಶ ಸಾಧನೆಗಾಗಿಯೋ ಒಡೆದಂತಾಯಿತು ಪ್ರಡೆಲ್ಕನ ವರ್ತನೆ ಒಮ್ಮೆಲೇ ಬದಲಾಗಿ ಉಪದ್ರಕರವಾದ ರೂಪವನ್ನು ತಾಳಿತು.

ಅವನು ತನ್ನ ಕೈಗಡಿಯಾರವನ್ನು ನೋಡಿ ಕುರ್ಚಿಯಲ್ಲಿ ನೆಟ್ಟಗೆ ಕುಳಿತು,

"ಈಗ ಕೇಳಿ ಸ್ಪೆಕ್," ನಿಮಗೆ ಏನು ಸಂಭವಿಸುವುದೆಂಬದನ್ನು ಆರಿಸುವವರು ನೀವೇ, ಎಂದು ಗರ್ಜಿಸಿದನು. ಅವನು ಸಮೀಪದಲ್ಲಿ, ಬೇಸರಗೊಂಡು ನಿದ್ರೆಯೊಡನೆ ಹೋರಾಡುತ್ತಿದ್ದ. ತನ್ನ ಕೂಟದವರನ್ನು ನೋಡಿದ. "ನಮಗೆ ಅವಶ್ಯ ಬಿದ್ದರೆ ನಾವು ಬೇರೆ ರೀತಿಯಲ್ಲಿ ವರ್ತಿಸಬಲ್ಲೆವೆಂಬುದು ನಿಮಗೆ ಚೆನ್ನಾಗಿ ತಿಳಿದಿದೆ. ಆದರೆ ನೀವು ಅದಕ್ಕೆ ನಮಗೆ ಒತ್ತಾಯಪೂರ್ವಕ ಅವಕಾಶ ಕೊಟ್ಟರೆ ಮಾತ್ರ. ಸ್ಪೆಕ್, ನಿಮಗೆ ತುಂಬಾ ಕರುಣೆ ತೋರಿಸಿದ್ದೇನೆ; ತುಂಬಾ ತಾಳ್ಮೆಯಿಂದಲೇ ಇದ್ದೆ. ಇಷ್ಟು ಕರುಣೆ ಮತ್ತು ತಾಳ್ಮೆಗಳನ್ನು ತೋರಿಸಲು ನನಗೆ ಈ ಹಿಂದೆ ಎಂದೂ ಅವಶ್ಯವಾಗಿರಲಿಲ್ಲ, ನಿಮಗೆ ಅದು ಗೊತ್ತಿದೆ...." ಅದು ನಿಜವಾಗಿದ್ದುದರಿಂದ– ಅನ್ಯಕ್ತ ಯಾವ ಕಾರಣದಿಂದ ಅಷ್ಟು ತಾಳ್ಮೆಯನ್ನು ವಹಿಸಿದ್ದರೂ—ಡಾಕ್ಟರರು ವಂದಿಸಿ,

"ಹೌದು ಕಮಿಸ್ಸಾರ್...ನೀವು ತುಂಬಾ ತಾಳ್ಮೆಯಿಂದಿದ್ದಿರಿ." ಎಂದರು ಪ್ರಡೆಲ್ಕ ಗಂಟಲು ಕೆರೆಯುತ್ತ.

"ಸಹನೆ....ಹೌದು ಆದರೆ....ಸರಿ: ನಾನು ಹೇಳಿದಂತೆ ಅದು ನಿಮ್ಮ ಕೈಯ್ಯಲ್ಲಿದೆ, ಕಾಮ್ರೇಡ್!" ಎಂದು ಹೇಳಿದ.

ಆಬಳಿಕ, ಇನ್ನೊಂದು ತಾಸಿನಲ್ಲಿ ಕಮಿಸ್ಸಾರ್‌ನು ತನ್ನ ಅದ್ವಿತೀಯ ಹಾಗೂ ಅಪೂರ್ವ ಸಹನೆಯ ಉದ್ದೇಶವನ್ನು ವಿವರಿಸಿದ. ಉಳಿದ ಏಳು ಮಂದಿ ತಮ್ಮ ಆಕಳಿಕೆಯನ್ನು ತಡೆಯುತ್ತ ಇಂಥಹ ನೀರಸ ವಿಚಾರಣೆಯು ಯಾವಾಗಲಾದರೂ-ಅಂತ್ಯಕ್ಕೂ ಬರಲೇಬೇಕೆಂದು ನೆನೆದು ಸಾಧ್ಯವಿದ್ದಷ್ಟು ಸಮಾಧಾನ ಪಡುತ್ತಿದ್ದರು. ಹೆಚ್ಚಿನ ವಿಚಾರಣೆಗಳು, ಹೇಗಿದ್ದರೂ ಬಹಳ ಸರಳವಾಗಿದ್ದವು— ಮತ್ತು ಸಾವಿರ ಪಾಲು ಹೆಚ್ಚು ಉತ್ತೇಜಕವಾಗಿದ್ದವು.

ಎಂಟು ಗಂಟೆಗೆ ಎರಡು ನಿಮಿಷ ಉಳಿದಿರುವಾಗ ಕಮಿಸ್ಸಾರ್ ಗಂಭೀರವಾಗಿ,

" ಸರಿ : ನೀವು ನಮಗೆ ಸಹಾಯವಮಾಡದಿದ್ದರೆ ನಾವು ನಿಮಗೆ ಏನು ಮಾಡಬಲ್ಲೆವೆಂಬುದು ನಿಮಗೆ ಗೊತ್ತಿದೆ. ಆದರೆ ನಾನು ಈವರಿಗೆ ಹೇಳಿದಂತೆ ಅದು ನಿಮ್ಮ ಕೈಯ್ಯಲ್ಲೇ ಇದೆ. ನಾನು ತುಂಬಾ ತಾಳ್ಮೆ ವಹಿಸಿದ್ದೇನೆ. ನಾನು ಅಷ್ಟೇ ಉದಾರತೆಯನ್ನು ತೋರಿಸುತ್ತೇನೆ. ನೀವು ಮತ್ತೆ ದುಃಖ ಪಡಬಹುದಾದ ಯಾವ ಕೆಲಸವನ್ನೂ ನೀವು ಮಾಡಲೂ ನಾನು ಒತ್ತಾಯ ಪಡಿಸುವುದಿಲ್ಲ. ಆದರೆ, ನಿಮಗೆ ಇದನ್ನು ಯೋಚಿಸಲಿಕ್ಕೆ ಸಾಕಷ್ಟು ಸಮಯವನ್ನು ಕೊಡಲಿಲ್ಲವೆಂದು ಮತ್ತೆ ನೀವು ಯೋಚಿಸಬಾರದು. ಆದ್ದರಿಂದ," ಡಾಕ್ಟರರನ್ನು ಕಠೋರ ದೃಷ್ಟಿಯಿಂದ ನೋಡುತ್ತ " ಮುಂದಿನ ಬುಧವಾರದವರೆಗೆ ನಿಮಗೆ ಸಮಯ ಕೊಡುತ್ತೇನೆ. ಅಂದು ೧೨ನೇ ತಾರೀಕು. ಆದರೊಳಗೆ ಆಗದಿದ್ದರೆ........ " ಕೊನೆಯ ಮಾತುಗಳನ್ನು ಸುರಿದನು.

ಡಾಕ್ಟರರು ತೂಕದ ಕಲ್ಲನ್ನು ತಮ್ಮ ಜೇಬಿನೊಳಗೆ ಸೇರಿಸಿದರು. ಈ ನಿರ್ಧಾರಕ್ಕೆ ಬರಲು ಕಮಿಸ್ಸಾರ್ ಎಂಟು ತಾಸುಗಳನ್ನು ವ್ಯಯ ಮಾಡಿದ್ದ. ಡಾಕ್ಟರರು ತಮ್ಮ ನಿರ್ಧಾರಕ್ಕೆ ಬರಲು ಒಂದು ನಿಮಿಷ ಸಮಯವನ್ನು ಅವನೊಡನೆ ಕೇಳಲಿಲ್ಲ. ಡಾಕ್ಟರ್ ಫಕ್ಕನೆ ಎದ್ದು ನಿಂತು,

" ಕಮಿಸ್ಸಾರ್, ನಿಮಗೆ ಧನ್ಯವಾದ ! ಆದರೆ, ನನಗೆ ನಿರ್ಧಾರಕ್ಕೆ ಬರಲು ಏನೂ ಸಮಯ ಬೇಕಾಗಿಲ್ಲ. ನೀವು ಹೇಳಿದುದರ ಕುರಿತು ನಾನು ಮುಂಚೆಯೇ ಯೋಚಿಸಿದ್ದೇನೆ. ನೀವು ಹೇಳಿದ್ದು ಸರಿ. " ಕಮಿಸ್ಸಾರ್‌ನ ಕಣ್ಣುಗಳು ಅರಳಿದುವು. " ನಮ್ಮ ಹೊಸರೀತಿಯ ಜೀವನ ಕುರಿತು ನನ್ನ ಅಭಿಪ್ರಾಯವೇನೆಂಬುದನ್ನು ಜನರು ತಿಳಿದುಕೊಂಡಾರೆಂದು ನಾನು ಯೋಚಿಸಿದ್ದೆ ; ಆದರೆ ಅದನ್ನು ಅವರು ತಿಳಿದುಕೊಂಡಿದ್ದಾರೆಂದು ನಿರೀಕ್ಷಿಸುವುದು ತಪ್ಪೆಂದು ನನಗೆ ಈಗ ತೋರುತ್ತದೆ. ಅಂದರೆ ನಾನೇನನ್ನಾದರೂ ಮಾಡದೆ ಅವರು ತಿಳಿದುಕೊಳ್ಳಲಿಕ್ಕಿಲ್ಲವೆಂದಲ್ಲ. ನೀವು ನನಗೆ ವ್ಯಕ್ತಪಡಿಸಿದಂತೆ ನನ್ನ ಯಥಾರ್ಥಭಾವನೆಗಳು ಸಾಕಷ್ಟು ಪ್ರಸಿದ್ಧವಾಗಿಲ್ಲವೆಂಬುದು ಸ್ಪಷ್ಟವಾಗಿದೆ... " ಎಂದು ಹೇಳಿದರು.

ಪ್ರಡೆಲ್ಕನ ಕಣ್ಣುಗಳು ಹೊಳೆಯುತ್ತಿದ್ದುವು : ವಿಜಯದ ಮತ್ತಿನಲ್ಲಿ ? ವಿನೋದದಲ್ಲಿ ? ಕ್ರೌರ್ಯದಿಂದಾಗಿಯೆ ?

" ಹಾಗಾದರೆ ನಾನೆಂದುದನ್ನು ನೀವು ಒಪ್ಪುತ್ತೀರೀ, ಕಾಮ್ರೇಡ್ ಡಾಕ್ಟರ್ ? "

" ಕಮಿಸ್ಸಾರ್, ನನ್ನನ್ನು ತಿಳಿಯದುದಕ್ಕಾಗಿ ನಮ್ಮ ಸರ್ಕಾರವನ್ನು ದೂರಿ ಫಲವಿಲ್ಲವೆಂದು ನನಗೆ ತೋರುತ್ತದೆ ... "

" ಓಹೋ ಕಾಮ್ರೆಡ್ ಡಾಕ್ಟರ್, ಮತ್ತೆ ಹಾಗಾದರೆ........? " ಎಂದು ಕಮಿಸ್ಸಾರನೆಂದನು.

" ಸರಿ, ಕಮಿಸ್ಸಾರ್....ಸ್ಟೇಟ್ ಪೋಲೀಸಿನ ಡಿಸ್ಟ್ರಿಕ್ಟ್ ಅಧಿಕಾರಿಗಳಾದ ನೀವು ನಾನು ಸಹಾಯ ಮಾಡಬೇಕೆಂದು ಬಯಸಿದರೆ, ನಾನು ಹಾಗೆ ಮಾಡಲು ಸಂತೋಷಪಡುವೆನು..."

ಕಮಿಸ್ಸಾರ್ ಮೆಲ್ಲನೆ ಎದ್ದು ನಿಂತ. ಡಾಕ್ಟರರ ಬಲಗೈಯನ್ನು ಅವನ ತಣ್ಣಗಿನ ಎರಡೂ ಕೈಗಳೂ ಕುಲುಕಿದುವು. ಆ ಬಳಿಕ ಪ್ರಡೆಲ್ಕ ತನ್ನ ಕೈಯನ್ನು ಡಾಕ್ಟರ್ ಸ್ಟೆಕ್‌ರ ಭುಜದ ಮೇಲಿರಿಸಿದ. ಅಲ್ಲಿ ಕಾಯುತ್ತಿದ್ದ ಸಹಾಯಕರ ಮುಖಗಳಲ್ಲಿ ಆದಿನದ ಕೆಲಸ ಮುಗಿಯಿತೆಂಬ ವಿಮೋಚನೆಯ ಭಾವನೆ ಬೆಳಗಿತು. ಆದರೆ ಅವರಿಗೂ ಕಮಿಸ್ಸಾರ್ ಚಿಕ್ಕಕೆಲಸ ಕೊಡಲಿದ್ದ. ಅದಕ್ಕೆ ಮುಂಚೆ ಡಾಕ್ಟರರನ್ನು ಸೌಹಾರ್ದ ಪೂರ್ವಕನೋಡಿ ನಗುತ್ತ,:

" ಬಹಳ ಒಳ್ಳೆಯದು ಡಾಕ್ಟರ್ ! ನನಗೆ ತುಂಬ ಸಂತೋಷ " ಎಂದು ಹೇಳಿದನು.

ಡಾಕ್ಟರ್ ಸ್ಟೆಕ್‌ರಿಗೆ ಪ್ರಡೆಲ್ಕರಂಥಹ ವ್ಯಕ್ತಿಗಳೊಡನೆ ವ್ಯವಹರಿಸಿ ಒಳ್ಳೆಯ ಅನುಭವವಿತ್ತು. ಪ್ರಡೆಲ್ಕನನ್ನು ಹಿಂದೆ ಹಲವು ಬಾರಿ ಅವರು ಕಂಡಿದ್ದರು. ಆದ್ದರಿಂದ ಅವನ ಮನಸ್ಸಿನಲ್ಲಿ ಯಾವ ಯೋಚನೆಯಿತ್ತೆಂಬುದನ್ನು ತಿಳಿಯುವುದು ಅವರಿಗೆ ಕಷ್ಟವಾಗಿರಲಿಲ್ಲ. ರಾಜಧಾನಿ ಪ್ರೇಗಿನಲ್ಲಿದ್ದ ಸ್ಟೇಟ್ ಪೋಲೀಸ್ ಮುಖ್ಯ ಕಚೇರಿಯಿಂದ ಪ್ರಡೆಲ್ಕನಿಗೆ ಬಂದಿದ್ದ ಕಾಗದಗಳಲ್ಲಿ ಅವನ ಕಾರ್ಯ ನಿರ್ವಹಣೆಯ ಕುರಿತು ಅತೃಪ್ತಿಯನ್ನು ಸೂಚಿಸಲಾಗಿತ್ತು. ಆದ್ದರಿಂದ ಅವನಿಗೆ ಸಿದ್ದೆ ಕೂಡಾ ಸರಿಯಾಗಿ ಬರುತ್ತಿದ್ದಿಲ್ಲವೆಂಬ ಸಂಗತಿ ಡಾಕ್ಟರರಿಗೆ ತಿಳಿದಿರಲಿಲ್ಲ. ಪ್ರತಿಭಟನಾದಳವೊಂದು ರಹಸ್ಯದಲ್ಲಿ ಕೆಲಸಮಾಡುತ್ತಿದೆ ; ಮುಖ್ಯವಾಗಿ ಆ ದಳವನ್ನು ಬಂಧಿಸುವುದು ಹಾಗಿರಲಿ, ಅಷ್ಟರವರೆಗೆ ಪತ್ತೆ ಕೂಡ ಹಚ್ಚಲಿಲ್ಲವೆಂಬ ವಿಷಯ, ರಾಜಧಾನಿಯಿಂದ ಬಂದ ಕಾಗದಗಳಲ್ಲಿ ಅತೃಪ್ತಿಯನ್ನು ಸೂಚಿಸಿತ್ತು. ತನ್ನನ್ನು ಒಂದು ಸಾಧನವನ್ನಾಗಿ ಉಪಯೋಗಿಸಬಹುದೆಂಬ ಉದ್ದೇಶದಿಂದಲೇ ಕಮಿಸ್ಸಾರ್ ತನ್ನನ್ನು

ಬಿಟ್ಟು ಬಿಟ್ಟನೆಂಬುದು ಡಾಕ್ಟರ್ ಸ್ವೆಕ್‌ರಿಗೆ ಸ್ಪಷ್ಟವಾಗಿತ್ತು. ಆ ಸಾಧನವಾದರೂ ಇತರರನ್ನು ವಂಚಿಸಲಿಕ್ಕಾಗಿ ಪ್ರಯೋಗಿಸಲ್ಪಡಬಹುದೆಂಬುದರಲ್ಲೂ ಅವರಿಗೆ ಸಂಶಯವಿರಲಿಲ್ಲ.

"ನಿಮ್ಮನ್ನು ನಿಮ್ಮ ಮೋಟಾರು ಕಾರಿಗೆ ಕರೆದೊಯ್ಯಲು ನಾನು ಟಾಬೊರ್ ನೊಡನೆ ಹೇಳುತ್ತೇನೆ. ನೀವು ನಿಮ್ಮ ಟೆಲಿಫೋನನ್ನು ಉಪಯೋಗಿಸಲೂ ನನ್ನ ಅಡ್ಡಿಯಿಲ್ಲ. ಆದರೆ " ಬಹಳ ಸಂಭಾವಿತತನದ ಕಪಟ ನಟನೆಯೊಡನೆ ಮೆಲ್ಲಗೆ, "ನಿಮ್ಮ ಹೆಂಡತಿಗೆ ಇದನ್ನು ಹೇಳದಿದ್ದರೆ ಒಳ್ಳೆಯದು ಹುಂ? ಹೆಂಗಸರು ದಿಗಿಲು ಬೀಳುತ್ತಾರೆ. ತಪ್ಪಾಗಿ ತಿಳಿದುಕೊಳ್ಳುತ್ತಾರೆ. ನೀವು ಒಪ್ಪುವಿರೋ... ?" ಎಂದು, ಕಮಿಸ್ಸಾರ್ ತನ್ನ ಸಿಗರೇಟು ಪೆಟ್ಟಿಗೆಯನ್ನು ಡಾಕ್ಟರರ ಮುಂದೊಡ್ಡುತ್ತ, ಗೊಣಗುಟ್ಟಿದನು.

"ಸರಿ, ಕಮಿಸ್ಸಾರ್......." ಡಾಕ್ಟರರು ಸಿಗರೇಟನ್ನು ತೆಗೆದುಕೊಳ್ಳುತ್ತ ನುಡಿದರು.

ಕಮಿಸ್ಸಾರ್ ಉಳಿದವರನ್ನು ನೋಡಿದ.

"ಟಾಬೊರ್ ನಿಲ್ಲಲಿ. ಉಳಿದವರು ಹೋಗಬಹುದು" ಎಂದು ಅವನು ಡಾಕ್ಟರ್ ಸ್ವೆಕ್‌ರ ಭುಜವನ್ನು ತಟ್ಟುತ್ತ, ಅವರು ಎಷ್ಟರಮಟ್ಟಿಗೆ ತನ್ನ ತಕ್ಕ ಜನರಲ್ಲಿ ಒಬ್ಬರು ಎಂದು ಸೂಚಿಸಿದ—ಮತ್ತು ಅವನನ್ನು ಕಾಯಲು ಇನ್ನು ಮುಂದೆ ಏಳು ಮಂದಿ ಸಾದಾ ವಸ್ತ್ರಧಾರಿಗಳಾದ ಗುಪ್ತಾಚಾರರ ಅವಶ್ಯಕತೆಯೂ ಇಲ್ಲವೆಂದು ಹೀಗೆ ತೋರ್ಪಡಿಸಿದನು. "ಸರಿ, ನೀವು ಸ್ವಲ್ಪ ಉಂಡು ವಿಶ್ರಮಿಸಿ ಎಂದಿನಂತೆ ಸಮಯಕ್ಕೆ ಸರಿಯಾಗಿ ಇಲ್ಲಿಗೆ ಬನ್ನಿರಿ"

ಆದರೆ ಡ್ರೋಬ್ನಿ, ಮೊಲ್ನಾರ್, ಚೆಬ್ ಮತ್ತಿತರರು, ರಾತ್ರಿ ಏನನ್ನು ಉಣ್ಣುವರೆಂಬುದನ್ನು ಕಮಿಸ್ಸಾರ್ ಆಗ ಯೋಚಿಸುತ್ತಿರಲಿಲ್ಲ. ಅವನು ಡಾಕ್ಟರ್ ಸ್ವೆಕ್‌ರನ್ನು ಸ್ಟೇಟ್ ಪೋಲೀಸ್ ಪಡೆಯ ಸಹಾಯಕರನ್ನಾಗಿ ಮಾಡಿದುದರಿಂದ ಆಗಬಹುದಾದ ಲಾಭವನ್ನು ಅವನು ಸಂಶಯ ದೃಷ್ಟಿಯಿಂದ ಪರ್ಯಾಲೋಚಿಸುತ್ತಿದ್ದ. ಡಾಕ್ಟರರ ಮೇಲೆ ಜನರು ಬಹಳ ವಿಶ್ವಾಸವಿಡುತ್ತಾರೆ. ಪೋಲೀಸರು ಕೂಡಾ ವಿಚಾರಣೆ ಮಾಡಲು ಹಿಂಜರಿಯುವಲ್ಲಿ ಡಾಕ್ಟರರು ಪ್ರಶ್ನೆಗಳನ್ನು ಕೇಳಬಲ್ಲರು. ಕೆಲವು ಸಲ ಪಾದ್ರಿಗಳೊಡನೆ ಕೂಡಾ ಹೇಳದ ರಹಸ್ಯವನ್ನು ಜನರು ಡಾಕ್ಟರರೊಡನೆ ಹೇಳುವರು.... ಮತ್ತೆ

ಸರ್ವಾಧಿಕಾರೀ ರಾಜ್ಯವಾದರೂ ಸಾರ್ವಜನಿಕಾಭಿಪ್ರಾಯವನ್ನು ಮನ್ನಿಸಬೇಕಾದುದರಿಂದ, ಡಾಕ್ಟರರು ಮರಣದಂಡನೆಯನ್ನು ಜನರಿಗೆ ತಿಳಿಯದ ಹಾಗೆ ರಹಸ್ಯದಲ್ಲೆ ವಿಧಿಸಬಲ್ಲರು. ಆದುದರಿಂದ ಜನರಲ್ಲಿ ವಿರೋಧಾಭಿಪ್ರಾಯ ಉಂಟಾಗದು. ಕಮಿಸ್ಸಾರ್‌ನ ಮನಸ್ಸಿನಲ್ಲಿ ಆಗಲೇ ನಾಲ್ಕು ಜನ ಮರಣ ದಂಡನೆಗೆ ಅರ್ಹರಾದ ವ್ಯಕ್ತಿಗಳಿದ್ದರು. ದಿನಕ್ಕೆ ಮೂರು ಬಾರಿ ಊಟವಾದ ಮೇಲೆ ಸೇವಿಸತಕ್ಕದ್ದು" ಎಂದು ಬರೆದಿದ್ದ ಬಾಟ್ಲಿಯನ್ನು ಅವರಿಗೆ ಡಾಕ್ಟರರಿಂದ ಕೊಡಿಸಿ ಚಾತುರ್ಯದಿಂದ ಆ ನಾಲ್ವರನ್ನು ಸಂಹರಿಸಬಹುದೆಂದು ಅವನಿಗೆ ತೋರುತ್ತಿತ್ತು

"ಡಾಕ್ಟರ್, ಬನ್ನಿ. ನಿಮ್ಮ ಕಾರಿನ ತನಕ ನಾನು ನಿಮ್ಮೊಡನೆ ಬರುತ್ತೇನೆ...." ಎಂದ ಕಮಿಸ್ಸಾರ್. ಟಾಬೊರ್ ಕಮಿಸ್ಸಾರ್‌ನಿಗೂ ಈ ಪರಿವರ್ತನೆಗೊಂಡವನಿಗೂ ಬಾಗಿಲನ್ನು ತೆರೆದು ಹಿಡಿದ. ಬಹಳ ಆಹ್ಲಾದ ಕರವಾದ ದಿನವಲ್ಲವೇ ಡಾಕ್ಟರ್? ನಾವು ದುರ್ದೈವದಿಂದ ಅದನ್ನು ಗಮನಿಸಲಿಲ್ಲ. ಆದರೆ ನಿಮ್ಮ ಮುಂದೆ ಇನ್ನು ಆಹ್ಲಾದಕರವಾದ ಸಂಜೆಯಹೊತ್ತು ಉಳಿದಿದೆ . . . . . . . ."

ಹಾಸ್ಪೊವಿನ ಹೊರಗೆ ರಾಜಮಾರ್ಗದಿಂದ ಡಾಕ್ಟರರ ಕಾರನ್ನು ತರಲಾಗಿತ್ತು. ಅದರ ಬಳಿನಿಂತಿದ್ದವನು ಕಮಿಸ್ಸಾರ್‌ನ ಮುಖವನ್ನು ನೋಡಿ, ಕೆಳಗೆ ನೆಗೆದು ಕಾರಿನ ಬಾಗಿಲನ್ನು ತೆರೆದ. ಡಾಕ್ಟರರು ಅದರಲ್ಲಿ ಕುಳಿತ ಬಳಿಕ ಮೆಲ್ಲನೆ ಅದನ್ನು ಮುಚ್ಚಿದ.

ನಿಮ್ಮೊಡನೆ ಸಂಪರ್ಕದಲ್ಲಿರುವ ಬಗೆ ಹೇಗೆ, ಕಮಿಸ್ಸಾರ್? ಎಂದು ಡಾಕ್ಟರರು ಉದ್ದೇಶಕ ಪೂರ್ವಕವಾಗಿಯೇ ಪ್ರಶ್ನಿಸಿದರು.

"ಪ್ರಿಯ ಕಾಮ್ರೇಡ್ : ಅದೆಲ್ಲವನ್ನು ನಾನು ನಿಮಗೇ ಪೂರ್ಣ ಬಿಡುತ್ತೇನೆ ಸಂಪೂರ್ಣವಾಗಿ . . . . . . . ." ಎಂದು ಪ್ರಡಲ್ಕನು ಕೈಯಲ್ಲಿ ಬೀಳ್ಕೊಡುವ, ಸೂಚನೆಯನ್ನು ಮಾಡುತ್ತ ಅಸ್ಪಷ್ಟವಾಗಿ ಹೇಳಿದನು. ಎಲ್ಲ ಕಡೆಗಳಲ್ಲೂ ನಗು, ಎಲ್ಲ ಕಡೆಗಳಲ್ಲೂ, ಹಸ್ತಲಾಘುವ.

"ಸರಿ . . . . . . . . ."

ಹೌದು. ಆರಂಭದಲ್ಲಿ ಕಲ್ಪಿಸಿದ ತಪ್ಪು ತಿಳುವಳಿಕೆಗಳಿಗೆ, ವ್ಯಥೆಪಡುತ್ತೇನೆ . . ."

"ಓಹೋ, ಅದು ಚಿಂತಿಲ್ಲ . . ."

ಆದರೂ, ಕೊನೆಗೆ ಅದು ಒಳ್ಳೆಯದೇ ಆಗಿ ಪರಿಣಮಿಸಿತು... "

'ಹೌದು...ಸಾಧಾರಣ. ಸರಿ...ನಮಸ್ಕಾರ ಕಮಿಸ್ಸಾರ್ ! ನಿಮಗೆ ಬರೆಯುತ್ತಿರುತ್ತೇನೆ..........."

ಹಾಗೋ! ಬಹಳ ಒಳ್ಳೆಯದು, ಕಾಮ್ರೇಡ್ ಡಾಕ್ಟರ್ !"

ಡಾಕ್ಟರ್, ಸ್ಟೆರ್ ಗೇರ್ ಹಾಕಿ ಕ್ಲಚ್ ಬಿಟ್ಟರು. ಅವರು ಮುಖ್ಯದ್ವಾರದಿಂದ ಹೋಗುವಾಗ ಕಾವಲುಗಾರನು ಅವರಿಗೆ ನಮಸ್ಕರಿಸಿದ. ಅವರಿಗೆ ಆಗ ದೊಡ್ಡ ರಜೆಯಲ್ಲಿ ಹೋಗುವಾಗ ಆತ್ಮೀಯ ಗೆಳೆಯರು ಬೀಳ್ಕೊಳ್ಳುತ್ತಿರುವಂತೆ ತೋರಿತು.

ಹೊರಗಿನ ಬಾಗಿಲುಗಳನ್ನು ದಾಟಿ, ಎಗರ್ ಪಟ್ಟಣದ ಕೇಂದ್ರವನ್ನು ಹಾದುಹೋದೊಡನೆ, ಅವರು ಆಸ್ಟ್ರ ರಸ್ತೆಯನ್ನು ಬಿಟ್ಟು ಮರಳಿ ಎಗರ್ ಪಟ್ಟಣಕ್ಕೆ ನೇರವಾದ ಬೇರೆ ರಸ್ತೆಗಳ ಮೂಲಕ ಹಿಂತಿರುಗಿ ಬಂದರು.

* * *

ಒಂಭತ್ತು ಗಂಟೆಯಾಗಿತ್ತಾಗ ಎಗರ್ ಪಟ್ಟಣದ ರೈಲ್ವೆಸಂಚಾರದ ನಿಯಂತ್ರಣಾಧಿಕಾರಿ ಕರೆಲ್ ಟ್ರೆಕ್ಸಾ ಬೀಗಗಳನ್ನು ಹಾಕುತ್ತಿದ್ದ. ಆಗ ದೀಪವಿಲ್ಲದ ಒಂದು ಕಾರು ಎಗರ್ ನಿಲ್ದಾಣದ ಸರದ್ದಿನ ಅಂಗಣದ ಬಳಿ ನಿಂತಿತು. ಟ್ರೆಕ್ಸಾ ತನ್ನ ಯುನಿಫಾರ್ಮಿನ ಟೊಪ್ಪಿಯನ್ನು ತೋಳಿನ ಪಟ್ಟಿಯನ್ನು ಅವುಗಳ ಗೂಟಕ್ಕೆ ತೂಗಹಾಕಿದ್ದ. ಈ ಇಪ್ಪತ್ತು ವರ್ಷಗಳಲ್ಲೂ ದಿನಾಲೂ ಆದಿನದ ಕೆಲಸವಾದ ಬಳಿಕ ಅವುಗಳನ್ನು ಅದರಲ್ಲೇ ತೂಗಹಾಕುತ್ತಿದ್ದ. ಅವನು ಕಾಫಿ ಕುಡಿಯುತ್ತಿದ್ದಾಗ ದೂಳಿನಿಂದ ತುಂಬಿದ ಅವನ ಆಫೀಸಿನ ಬಾಗಿಲನ್ನು ತಟ್ಟಿದ ಶಬ್ದ ಕೇಳಿಸಿತು.

ಒಳಗೆ ಬನ್ನಿ!" "ಏನು.........ಡಾಕ್ಟರ್! ಈ ರಾತ್ರಿಗೆ ನೀವು ಇಲ್ಲಿಗೇಕೆ ಬಂದಿರಿ! " ಎಂದು ಟ್ರೆಕ್ಸಾನು ಕೇಳಿದನು.

ಸ್ವೆಕ್ ಮೊದಲು ಒಂದು ಸನ್ನೆ ಮಾಡಿದರು. ಆ ಸನ್ನೆ ಇಂದು ಪೂರ್ವ ಯುರೋಪಿನಲ್ಲಿ ಬಹಳ ಪ್ರಾಧಾನ್ಯ ಪಡೆದಿದೆ. ಗಟ್ಟಿಯಾಗಿ ಮಾತಾಡುವುದು ಅಪಾಯ ರಹಿತವೇ? ಎಂಬುದು ಅದರ ಅರ್ಥ. ಅವಸರವಾದ ಸಣ್ಣ ಚಲನೆಯಿಂದ ಆಸನ್ನೆಯನ್ನು ಮಾಡಬಹುದು. ಎಂಥಹ ವಿಷಯವನ್ನೂ

ಮಾತಾಡುವುದಕ್ಕಿಂತ ಮೊದಲು ಆಸನ್ನೆಯನ್ನು ಮಾಡುವುದು ಯೋಚನೆ ಮಾಡದ, ಅಭ್ಯಾಸ ಬಲದಿಂದ ಬಂದ ಪೀಠಿಕೆಯಾಗಿದೆ.

ಟ್ರ್ರಕ್ಸಾ ಬಾಗಿಲನ್ನು ತೆರೆದು ಆಕಾಶವನ್ನು ನೋಡಿದ. ಅದನ್ನು ಮರಳಿ ಮುಚ್ಚಿ ಬೀಗಹಾಕಿದ.

ಏನದು, ಡಾಕ್ಟರ್ ತೊಂದರೆ..........? ”

ಡಾಕ್ಟರರು ಎತ್ತರದ ಪೀಠದ ಮೇಲೆ ಆರಾಮವಾಗಿ ಕುಳಿತರು. ಕರವಸ್ತ್ರವನ್ನು ತೆರೆದು ತಮ್ಮ ಮುಖ ಮತ್ತು ಕುತ್ತಿಗೆಯ ಹಿಂಭಾಗವನ್ನು ಅದರಿಂದ ಉಜ್ಜಿದರು. ಪ್ರತಿಕ್ರಿಯೆ ಆಗಲೇ ಆರಂಭವಾಗಿತ್ತು: ಏನೋ ಒಂದು ವಿಧದ ಆಯಾಸ, ಒಂದು ವಿಧದ ಬೇಸರ ಅವರಲ್ಲಿ ಉಂಟಾಗಿತ್ತು. ದೀರ್ಘಕಾಲದ ವೈದ್ಯಕೀಯ ಅನುಭವದಿಂದಾಗಿ ಅವರಿಗೆ ಅದನ್ನು ತಡೆಹಿಡಿಯಲು ಸಾಧ್ಯವಾಯಿತು.

ತನ್ನ ಕೈಯ್ಯಲ್ಲಿ ಕೋಟನ್ನು ಹಿಡಿದುಕೊಂಡು ತಲೆಯಲ್ಲಿ ಹ್ಯಾಟನ್ನು ಧರಿಸಿ, ಟ್ರ್ರಕ್ಸಾ ಡಾಕ್ಟರರನ್ನು ಹೆದರಿಕೆಯಿಂದ ಅವಲೋಕಿಸಿದ. ಇದರಲ್ಲಿ ಅವರೆಲ್ಲರೂ ಒಟ್ಟಿಗಿದ್ದರು: ಒಬ್ಬನಿಗೆ ಅಪಾಯ ಬಂತೆಂದರೆ, ಎಲ್ಲರಿಗೂ ಅಪಾಯ ಬರುವಂತ್ತಿತ್ತು, ಆದರೆ ಅವನು ಸಹನಾಶೀಲ, ರೈಲುಗಳು ಹೋಗುವುದನ್ನು ನೋಡುವುದಕ್ಕೂ, ಜೀವನವು ಅನಿವಾರ್ಯವಾಗಿ ಹೋಗುವುದನ್ನು ನೋಡುವುದಕ್ಕೂ ಒಂದು ವಿಧದ ಸಾಮ್ಯವಿದೆ: ಗಡಿಯಾರವನ್ನು ಕೈಯಲ್ಲಿ ಹಿಡಿದುಕೊಂಡು ರೈಲ್ವೇಯವನೂ, ಡಾಕ್ಟರನೂ ತಾಳ್ಮೆಯಿಂದಿರುವುದಕ್ಕೆ ಅಭ್ಯಸಿಸುತ್ತಾರೆ.

ಕೊನೆಗೆ ಡಾಕ್ಟರ್ ಸ್ವೆಕ್ ದೀರ್ಘಶ್ವಾಸವೊಂದನ್ನು ಬಿಡುತ್ತ :

‘ಕರೆಲ್ : ನನಗೆ ಇಲ್ಲಿಂದ ಹೋಗಬೇಕಾಗಿದೆ....ಕೂಡಲೇ ನಿಮಗೆ ತಿಳಿಯಿತೆ....?” ಎಂದರು.

ಟ್ರ್ರಕ್ಸಾ ತಲೆಯಲ್ಲಾಡಿಸಿದ. ಕೆಂಪು ಜೆಕೋಸ್ಲೊವಾಕಿಯಾದಲ್ಲಿ ಅದನ್ನರಿಯದಿದ್ದವರಾರು ?

“ ಅವರು ...ಅವರು ಇಂದು ನನ್ನನ್ನು ಎಂಟು ತಾಸುಗಳತನಕ ಪ್ರಶ್ನಿಸಿದರು. ನನ್ನನ್ನು ಆಸ್ಪತ್ರೆಯಿಂದ ತರಲು ಅವರು ಬಂದು ಹನ್ನೆರಡು ತಾಸುಗಳಾದುವು. ”

ಟ್ರುಕ್ಸಾ ಏನನ್ನೂ ಹೇಳಲಿಲ್ಲ: ಆದರೆ ಅವನ ಜಾಗೃತವಾಗಿದ್ದ ಕಣ್ಣುಗಳು ತನ್ನ ಸ್ನೇಹಿತನಲ್ಲಿ ಅವಿಶ್ವಾಸವನ್ನು ಕಾಣಲಿಲ್ಲ.

"ಕರೆಲ್, ಈ ಸಲ ನಾನು ಪಾರಾದೆ....ಅವರೊಡನೆ ಕೆಲಸಮಾಡುವೆನೆಂದು ನಟಿಸಿದೆ"

"ಅದೊಂದೇದಾರಿ," ಟ್ರುಕ್ಸಾನುಡಿದ.

"ಹೌದು ಆದರೆ....ಸರಿ: ಇದೊಂದು ತಾತ್ಕಾಲಿಕ ವಿಮೋಚನೆ. ನಾನು ಅವರನ್ನು ವಂಚಿಸಿದ್ದೇನೆಂದು ತಿಳಿದೊಡನೆ ಅವರು ಬಹಳ ಶೀಘ್ರದಲ್ಲೆ ಬೆನ್ನಟ್ಟಿ ಬರುವರು...."

ಆ ಕೋಣೆಯ ಗೋಡೆಗಳಿಗೆ ಬಣ್ಣ ಬಳಿದಿತ್ತು; ಅದರ ಮೇಲೆ ರೈಲ್ವೇ ನೋಟೀಸುಗಳನ್ನೂ, ಸಮಯ ಸೂಚಿಸುವ ಪಟ್ಟಿಗಳನ್ನು ಅಂಟಿಸಲಾಗಿತ್ತು; ಉರಿಸಿದ ಬೆಂಕಿ ಕಡ್ಡಿಗಳು ಮತ್ತು ಸಿಗರೇಟು ಸೇದಿ ಎಸೆದ ತುಂಡುಗಳಿಂದ ಮರದ ನೆಲವು ತುಂಬಾ ಕೊಳಕಾಗಿತ್ತು. ಮೇಲೆ ಒಂದಡಿ ಸರಿಗೆಯಲ್ಲಿ ಕ್ಷೀಣಶಕ್ತಿಯ ವಿದ್ಯುದ್ದೀಪವೊಂದು ಉರಿಯುತ್ತಿತ್ತು. ರೈಲ್ವೆ ಕೆಲಸಗಾರನ ಮುಖದ ಮೇಲೆ ಒಂದು ನಗುವಿನ ಛಾಯೆ ಮಿಂಚುವುದು ಡಾಕ್ಟರಿಗೆ ಆ ಬೆಳಕಿನಲ್ಲಿ ಕಾಣಿಸಿತು.

"ನಿಮ್ಮನ್ನು ಕಮಿಸ್ಸಾರ್ ಪ್ರಡೆಲ್ಕ ವಿಚಾರಿಸಿದನೆ? ಅವನು ಎಲ್ಲರನ್ನೂ ತಿಳಿದುಕೊಳ್ಳುವ ಮನುಷ್ಯ!" ಸ್ವಿಕ್ ತಲೆಯಲ್ಲಾಡಿಸಿದರು ಆಗ ಅವನ ನಗು ಮಾಯವಾಯಿತು: "ಹಾಗಾದರೆ ನಮ್ಮನ್ನು ನೀವು ಅಗಲುವಿರಿ....ಬೇಗನೆ. ಶ್ರೀಮತಿ ಸ್ವಿಕ್‌ರಿಗೆ ನೀವು ಇದನ್ನು ಹೇಳಿರುವಿರೆ?"

ಇಲ್ಲ ನಾನು ಪ್ರಡೆಲ್ಕನಲ್ಲಿಂದ ಇಲ್ಲಿಗೆ ನೇರವಾಗಿ ಬಂದೆ"

ಟ್ರುಕ್ಸಾ ಕೋಪಗೊಂಡು,

"ಇದು ಜಾಣತನವೆಂದು ಭಾವಿಸುವಿರಾ, ಡಾಕ್ಟರ್" ಎಂದು ಕೇಳಿದನು.

"ನೀವೇನೆನ್ನುತ್ತಿರಾ....ನನ್ನನ್ನು ಹಿಂಬಾಲಿಸಿದ್ದಾರೆನ್ನುವಿರಾ?" ಸ್ವಿಕ್ ತಲೆಯಲ್ಲಾಡಿಸುತ್ತ ಕೇಳಿದರು "ಈಗ ನನ್ನನ್ನು ಯಾರೂ ಹಿಂಬಾಲಿಸಲಿಲ್ಲ ನನಗೆ ದೈವಭಯವನ್ನುಂಟು ಮಾಡಿದ್ದೆವೆಂದು ಅವರು ಯೋಚಿಸಿದ್ದಾರೆ. ಅದು ಸರಿಯೆಂದೂ ನನಗೆ ತೋರುತ್ತದೆ. ಇಂದು ರಾತ್ರಿಯ ಮಟ್ಟಿಗೆ ಅವರು

ನನ್ನನ್ನ ನಂಬುತ್ತಾರೆ. ನಾಳೆ ಅವರು ತಮ್ಮ ಮನಸ್ಸನ್ನು ಬದಲಾಯಿಸಲು ಆರಂಭಿಸಿದರೂ ಕೂಡಾ ನಾನು ಹೇಗೆ ಪಾರಾಗ ಬಹುದು, ಕರೆಲ್.... . ?"

ಟ್ರುಕ್ಸಾ ಕುಳಿತುಕೊಂಡು ತನ್ನ ಪೈಪನ್ನೂ ಹೊಗೆ ಸೊಪ್ಪನ್ನು ಹುಡುಕಾಡಿದ "ಈಗಿನ ಮಟ್ಟಿಗಾದರೂ ರೈಲುಗಾಡಿಗಳು ನಿಷ್ಪ್ರಯೋಜಕ..''

ಕಲ್ಲಿದ್ದಲ ರೈಲಿನಲ್ಲಿ ಆಗಬಹುದು ನಾನು ಅದರಲ್ಲಿ ಎಷ್ಟು ಕೊಳಕಾದರೂ ಚಿಂತಿಲ್ಲ; ಜರ್ಮನಿಯಲ್ಲಿ ಕಲ್ಲಿದ್ದಲನ್ನು ತೊಳೆಯಬಲ್ಲೆ........ ಅಲ್ಲವೆ ? ''

ಟ್ರುಕ್ಸಾ ತನ್ನ ಪೈಪಿಗೆ ಕಳ್ಳಸಾಗಾಟದ ಆಸ್ಟ್ರಿಯನ್ ರೇಜಿ ಹೊಗೆ ಸೊಪ್ಪನ್ನು ಜಾಗ್ರತೆಯಿಂದ ತುಂಬಿಸುತ್ತ, ತಲೆಯಲ್ಲಾಡಿಸಿದ.

"ಅದು ಪ್ರಯೋಜನವಿಲ್ಲ. ಏನೂ ಪ್ರಯೋಜನವಿಲ್ಲ, ಡಾಕ್ಟರ್ ಮೊನ್ನೆ ಮೊನ್ನೆ ಏನಾಯಿತೆಂಬುದನ್ನು ನೀವು ಕೇಳಿಲ್ಲವೆ ? ಇಲ್ಲ...? ಐದು ಗಂಟೆಯ ನೀರನ್ನೊಯ್ಯುವ ಬಂಡಿಯಲ್ಲಿ ನಮ್ಮವರಲ್ಲಿ ಒಬ್ಬನನ್ನು ಕಳುಹಿಸಲು ಒಳಸಂಚುಮಾಡಿದೆವು. ಡ್ರೈವರನನ್ನು ನಮ್ಮ ಕಡೆಗೆ ಸೇರಿಸಿಕೊಂಡೆವು. ಅವನೂ ನಮ್ಮವನೇ. ಯಂತ್ರವು ಗಡಿಯಾರದಂತೆ ನಡೆಯಿತು... ಗಡಿಯಾರ ನಿಲ್ಲುವ ತನಕ........"

ಏನಾಯಿತು ? ''

ಟ್ರುಕ್ಸಾ ಪೈಪನ್ನು ಬಾಯಿಯಿಂದ ತೆಗೆದು ಅಗ್ಗಿಷ್ಟಿಕೆಗೆ ನಿರಾಸಕ್ತನಾಗಿ ಉಗುಳಿದ " ನಾವು ಸಾಗಿಸಬೇಕೆಂದಿದ್ದ ವ್ಯಕ್ತಿ ಹೇಗೋ ತಾನು ಐದು ಗಂಟೆಯ ಬಂಡಿಯಲ್ಲಿರುವುದನ್ನು ಬಿಟ್ಟು ಎಂಟುಗಂಟೆಯ ಬಂಡಿಯಲ್ಲಿ ಕಾಣಿಸಿಕೊಂಡ....... ಆಸ್ಟ್ಚನಲ್ಲಿ ಅವನ ಬಂಧನವಾಯಿತು. ಹೌದು ಗಡಿಯಲ್ಲೇ ಡಾಕ್ಟರ್ ನಮ್ಮತಂತ್ರ ಹೇಗೆ ಬಯಲಾಯಿತೆಂದು ನಿಮಗೆ ಗೊತ್ತೇ ? ಇಲ್ಲವೆ........? ನಾನು ಹೇಳುತ್ತೇನೆ ನಮ್ಮ ಪಕ್ಷದಲ್ಲಿದ್ದ ಡ್ರೈವರ್.... ಅವರ ಪಕ್ಷದಲ್ಲಿಯೂ ಇದ್ದ, " ಎನ್ನುತ್ತ ಅವನು ಪೈಪಿನ ಬೂದಿಯನ್ನು ಅಗ್ಗಿಷ್ಟಿಕೆಗೆ ಸುರಿದ '' ಆದ್ದರಿಂದ .. ನಾವು ಈಗ ರೈಲುಗಳನ್ನು ಉಪಯೋಗಿಸುವುದಿಲ್ಲ. ನಾನಿಲ್ಲಿ ಇಷ್ಟು ನಿಸ್ಸಹಾಯಕನಾಗಿ ತೋರ್ಪಡಿಸಿಕೊಳ್ಳಲು ವಿಷಾದಪಡುತ್ತೇನೆ; ಆದರೆ ನಾನು ಏನು ಹೇಳುತ್ತಿದ್ದೇನೆಂಬುದು ನನಗೆ ಗೊತ್ತಿದೆ. ಇದಕ್ಕಿಂತ ಹೆಚ್ಚು ಇನ್ನೇನಿದೆ ? ನನಗೊ ಊರು ಬಿಡುವ ಕಾಲ ಬಂದಿದೆಯೆಂದು ತೋರು

ತ್ತಿದೆ. ನಿಮ್ಮ ವಿಷಯದಲ್ಲಿ ಅವರಿಗೆ ಆಸಕ್ತಿಯಿದ್ದರೆ, ನನ್ನ ಸರದಿಯೂ ಬೇಗನೆ ಬರಬಹುದು.... "

ಡಾಕ್ಟರರೂ ಹಾಗೆಯೆ ಎಣಿಸಿದರು. ಒಂದು ಸಿಗರೇಟನ್ನು ತೆಗೆದು ಅವರು ಅದಕ್ಕೆ ಬೆಂಕಿ ಹಚ್ಚಿಸಿದರು. ಆ ಇಬ್ಬರೊಳಗೆ ಒಂದು ಬಗೆಯ ಸ್ನೇಹವು ಬೆಳೆದಿತ್ತು. ಅವರಲ್ಲಿದ್ದ ಮೂಲ ಭೂತ ಭೇದಗಳು ಅದಕ್ಕೆ ವಿರೋಧವಾಗಿರದೆ, ಸಹಾಯಕವಾಗಿದ್ದು ಅವರ ಸ್ನೇಹ ಭಾವವನ್ನು ಬಲಪಡಿಸುತ್ತಿತ್ತು. ಮನೆತನ, ಶಿಕ್ಷಣ, ವಯಸ್ಸು ಮತ್ತು ಮನೋಪ್ರವೃತ್ತಿಗಳು ಪರಸ್ಪರ ಭಿನ್ನವಾಗಿದ್ದುವು. ಅವರಿಬ್ಬರೂ ಮೊಗೇರರಿದ್ದರು. ಎಗರ್ ನದಿಯ ದಡದಲ್ಲಿ ಅವರು, ಮೊದಲಬಾರಿ ಒಬ್ಬರನ್ನೊಬ್ಬರು ಸಂಧಿಸಿದರು. ಈ ಸಂಬಂಧವೇ ಅವರಿಬ್ಬರನ್ನೂ ಒಂದು ಗೂಡಿಸಿದ ಸ್ನೇಹ ಪಾಶ.

ಮೀನುಹಿಡಿಯುವವರು ಮೌನಪ್ರಿಯರು. ಎಷ್ಟೋ ತಿಂಗಳತನಕ ಅವರು ಜಾಗ್ರತೆಯಿಂದ ಶಬ್ದಗಳನ್ನು ಪ್ರಯೋಗಿಸಿ ಮೆಲ್ಲಮೆಲ್ಲನೆ ಸಂಭಾಷಣೆ ಮಾಡುತ್ತ ಕೊನೆಗೆ ತಾವಿಬ್ಬರೂ ಜೆಕೊಸ್ಲೋವಾಕಿಯಾದ ನೂತನ ಪ್ರಭುತ್ವವನ್ನು ಮೆಚ್ಚುವುದಿಲ್ಲವೆಂದೂ, ಹಿಂದಿನ ಜೀವನವೇ ಅದಕ್ಕಿಂತ ಎಷ್ಟೋ ಉತ್ತಮವಿತ್ತೆಂದೂ ಒಪ್ಪಿಕೊಂಡಿದ್ದರು.

ಟ್ರ್ರಿಕ್ಸಾನಿಗೆ ಡಾಕ್ಟರರೊಡನೆ ಇಷ್ಟು ಅನ್ಯೋನ್ಯತೆ ಬೆಳೆಯಲು ಒಂದು ಕಾರಣವಿತ್ತು. ಅವರು ಮೊದಲು ಸಂಧಿಸಿದ ಕೆಲತಿಂಗಳುಗಳ ಬಳಿಕ ಡಾಕ್ಟರ್ ಸ್ಪೆಕ್ ಹೇಳಿದ ಒಂದು ಮಾತು, ಮೌನಧಾರಿಯಾದ ಟ್ರ್ರಿಕ್ಸಾನಿಗೆ ಮೆಚ್ಚುಗೆಯಾಗಿತ್ತು. ಡಾಕ್ಟರರಿಗೆ ಅಪರೂಪವಾಗಿ ಡಾನ್ಯೂಬ್ ನದಿಯಲ್ಲಿ ಸಿಗುವ ಒಂದು ಮೀನು ಸಿಕ್ಕಿ ಅವರು ಬಹಳ ಉಲ್ಲಾಸಭರಿತರಾಗಿದ್ದರು. ಅವರು ಆಗ ಟ್ರ್ರಿಕ್ಸಾನ ಬಳಿಗೆ ಹೋಗಿ ಹೆಮ್ಮೆಪಡುತ್ತ,

" ನಮ್ಮ ದೇವತಾ ಸಮಾನವಾದ ತಾಳ್ಮೆಯು ಅದು ಇಂದಿನ ಜನರಲ್ಲಿ ಮೀನುಹಿಡಿಯುವವರಿಗೆ ಮಾತ್ರ ಪರಿಶುದ್ಧವಾಗಿ ಇದೆ—ಕಾಡುಮನುಷ್ಯನಲ್ಲಿ ತನಗೆ ತಿನ್ನಲಿಕ್ಕಾಗಿ ಏನಾದರೂ ಬೇಕೆಂಬ ಉದ್ದೇಶದಲ್ಲಿ ಉಂಟಾಗಿರಬೇಕೆಂದು ನಿಮಗೆ ತೋರುತ್ತಿಲ್ಲವೇ ? ದೂರಕ್ಕೆ ಎಸೆಯಬಹುದಾದ ಶಸ್ತ್ರಗಳಲ್ಲದೆ ಅವನಿಗೆ ತನಗಿಂತ ಹೆಚ್ಚು ಶಸ್ತ್ರಸಜ್ಜಿತ ಹಾಗೂ ತೀಕ್ಷ್ಣವಾದ ಪ್ರಾಣಿಯನ್ನು ಹಿಡಿಯಲು ಗಂಟೆಗಟ್ಟಲೆ, ದಿನಗಟ್ಟಲೆ—ತನ್ನ ಕೊಳ್ಳೆಯು ಸಂಶಯವಿಲ್ಲದೆ,

ಸಾಕಷ್ಟು ಸಮೀಪ ಬರುವವರೆಗೆ ತಾಳ್ಮೆಯಿಂದ ಕಾಯುತ್ತಿದ್ದ. ನೀವು ಯೋಚಿಸಿ. ತನ್ನ ಹಸಿವಿನಂಥಹ ಕ್ಷುದ್ರದಾಹದಿಂದ, ಮನುಷ್ಯನೊಬ್ಬನು ಚಿಕ್ಕನಾಣ್ಯದ ಆಸೆಯಿಂದ ಬೈಬಲನ್ನು ಬರೆಯುತ್ತ ಜೀವಮಾನವನ್ನು ಕಳೆಯುತ್ತಿದ್ದಾನೆ. ಅಥವಾ . . . ನಿರಂಕುಶ ಪ್ರಭುತ್ವದ ಅವಧಿಯಲ್ಲಿಲ್ಲಾ ತನ್ನ ಆದರ್ಶವನ್ನು ಉಳಿಸಿಕೊಳ್ಳುತ್ತಾನೆ.''

" ನೀವು ಅಂಥ ಒಳ್ಳೆಯ ಮೀನುಹಿಡಿಯುತ್ತೀರಿ.'' ರೈಲ್ವೆಕಾರ್ಮಿಕನು ನಸುನಕ್ಕ. ಆದರೆ ಸ್ವೆಕ್ "ನಿರಂಕುಶ" ಎಂಬ ಪದವು ಸಂಭಾಷಣೆಯಲ್ಲಿ ಬಂದಾಗ ಅವನ ಮುಖವನ್ನು ಡಾಕ್ಟರರು ನಿರೀಕ್ಷಿಸಿದ್ದರು.

ಆ ಬಳಿಕ ಅವರು ಸಾಮಾನ್ಯ ವಿಷಯವನ್ನೇ ಮಾತಾಡುತ್ತಿದ್ದರೂ ಅವರೊಳಗಿನ ಸ್ನೇಹ ಬಲವಾಗಿತ್ತು. ಅದನ್ನು ಪರೀಕ್ಷಿಸಲು ಒಂದು ಸುಸಂದರ್ಭವೂ ದೊರಕಿತು—

ಟ್ರುಕ್ಸಾನ ಬಂಧನವಾಗಿತ್ತು. ಡಾಕ್ಟರರು ನದಿಯಬಳಿಗೆ ಹೋದಾಗ ಅವನು ಅಲ್ಲಿರಲಿಲ್ಲ. ರೈಲ್ವೇ ನಿಲ್ದಾಣದಲ್ಲಿ ವಿಚಾರಿಸುವಾಗ ಟ್ರುಕ್ಸಾ ನೂತನ ಪ್ರಭುತ್ವವನ್ನು ವಿರೋಧಿಸುತ್ತಾನೆಂಬ ಸಂದೇಹದಿಂದ ಬಂಧಿಸಲ್ಪಟ್ಟಿದ್ದಾನೆಂದು ತಿಳಿಯಿತು. ಆದರೆ ಅದರ ವಿರುದ್ಧ ಕೆಲಸಮಾಡುತ್ತಾನೆಂಬ ಸಂದೇಹ ವಿರಲಿಲ್ಲ. ಅಂದು ಬೆಳಗ್ಗೆ ಇಬ್ಬರು ಬಂದು ಎಗರ್ ನಿಲ್ದಾಣದಿಂದ ಟ್ರುಕ್ಸಾನನ್ನು ಕಾರಿನಲ್ಲಿ ಕೊಂಡುಹೋಗಿದ್ದರೆಂದು ಭಯಗೊಂಡ ಕೂಲಿಗಾರರಿಬ್ಬರು ಡಾಕ್ಟರ್ ಸ್ವೆಕ್‌ರಿಗೆ ಹೇಳಿದರು.

ಡಾಕ್ಟರರಿಗೆ ಒಮ್ಮೆಲೇ ಟ್ರುಕ್ಸಾನಿಗೆ ಸಹಾಯಮಾಡುವ ಮನಸ್ಸಾಯಿತು. ಇದರಿಂದ ತಮ್ಮ ಮೇಲೆ ಸಂಭವಿಸಬಹುದಾದ ದುಷ್ಪರಿಣಾಮದ ಯೋಚನೆಯೂ ಅವರಿಗಿರಲಿಲ್ಲ. ಅವರು ಕೂಡಲೇ ಕಾರಿನಲ್ಲಿ ಸೆರೆಮನೆಯಕಡೆಗೆ ಹೋದರು.

" ನಮ್ಮ ಸೆರೆಯಾಳು ಟ್ರುಕ್ಸಾ ನಮ್ಮ ನೂತನ ಜನತಾ ಪ್ರಜಾಸತ್ತೆಯ ರಾಜ್ಯಕ್ಕೆ ವಿಧೇಯನಾಗಿದ್ದಾನೆಂದು ನಾವು ಒಪ್ಪಲಿಕ್ಕೆ, ನಿಮ್ಮೊಡನೆ ಯಾವ ಪುರಾವೆ ಇದೆ ಡಾಕ್ಟರ್ ? "

" ಅದೇ—ಅದೇ ಪುರಾವೆ," "ನಾನು ವಿಧೇಯನಾಗಿದ್ದೇನೆಂದು ತೋರಿಸಲು ಇರುವ ಪುರಾವೆಯೇ ಅವನ ಪುರಾವೆ . . ." ಎಂದು ನಸುನಗುತ್ತ ಡಾಕ್ಟರರು ಹೇಳಿದರು.

(ಈ ಮಾತು ಜ್ಞಾಪಕದಲ್ಲಿಟ್ಟುಕೊಂಡು, ಮತ್ತೆ ಡಾಕ್ಟರರ ವಿರುದ್ಧವಾಗಿ ಉಪಯೋಗಿಸಲ್ಪಟ್ಟಿತ್ತು. ಆದರೆ ಈ ಸಲ ಡಾಕ್ಟರರು "ನಂಬಿಗಸ್ಥ"ರೆಂದು ನೂತನ ಪ್ರಭುತ್ವವು ಪರಿಗಣಿಸಿತ್ತು.)

"ಅದು ಯಾವ ಪುರಾವೆ, ಡಾಕ್ಟರ್?" ಎಂದು ಅಧಿಕಾರಿಯು ಡಾಕ್ಟರರ ಅರ್ಥಗರ್ಭಿತ ವರ್ತನೆಯಿಂದ ಪ್ರೇರೇಪಿಸಲ್ಪಟ್ಟು ಕೇಳಿದ್ದ. "ಮೊದಲನೆಯದಾಗಿ, ಒಬ್ಬ ಅಪರಾಧಿಯ ಮನಸ್ಸಿನಲ್ಲಿ ಏನಾದರೊಂದು ಉದ್ದೇಶವಿರುವುದೆಂಬುದನ್ನು ನೀವು ಒಪ್ಪುವಿರಾ? ಒಪ್ಪಿದಿರಾ..? ಮತ್ತೆ ಎರಡನೆಯದಾಗಿ, ಪ್ರಜಾರಾಜ್ಯದ ವಿರುದ್ಧ ಚುರುಕಾಗಿ ಕೆಲಸಮಾಡುವವನಿಗೆ ತನ್ನ ಹೇಯ ಯೋಜನೆಗಳನ್ನು ಕಾರ್ಯಗತಮಾಡಲು ಸ್ವಲ್ಪ ಸಮಯ ಬೇಡವೆ? ಒಪ್ಪಿದಿರಾ...-?"

"ಸರಿ... ಹೌದು"

"ನಾನೊಂದು ಹೇಳುತ್ತೇನೆ. ಮನಸ್ಸಿನಲ್ಲಿ ಏನಾದರೊಂದು ಯೋಚನೆ ಇರುವ ಮನುಷ್ಯನು ಎಂದಿಗೂ ಮೀನುಹಿಡಿಯುವವನಾಗಲಿಕ್ಕಿಲ್ಲ. ಅದೂ ನನ್ನ ಸ್ನೇಹಿತ ಈ ಕರೆಲ್‌ಟ್ರ್ರಿಕ್ಸಾನಷ್ಟು ಒಳ್ಳೆಯ ಮೀನು ಹಿಡಿಯುವನೆಂದೂ ಆಗಲಿಕ್ಕಿಲ್ಲ. ನಾನು ತಮಾಷೆ ಮಾಡುತ್ತೇನೆಂದು ಗ್ರಹಿಸಬೇಡಿ! ನನ್ನ ಜೀವನದಲ್ಲಿ ಇದಕ್ಕಿಂತ ಹೆಚ್ಚು ನಾನು ಎಂದೂ ಗಂಭೀರನಾಗಿದ್ದಿಲ್ಲ! ಮತ್ತೆ ಎರಡನೆಯ ವಿಚಾರ: ಟ್ರ್ರಿಕ್ಸಾ ಯಾವಾಗಲೂ ನನ್ನೊಡನೆ ಮೀನುಹಿಡಿಯುತ್ತಿರುತ್ತಾನೆ. ಇಲ್ಲವಾದರೆ ರೈಲ್ವೇ ಕೆಲಸಮಾಡುತ್ತಾನೆ ಅಥವಾ ಮನೆಯಲ್ಲಿ ಹೆಂಡತಿ ಮಕ್ಕಳೊಡನಿರುತ್ತಾನೆ. ಹಾಗಿರುವವನಿಗೆ ಕ್ರಾಂತಿಕಾರಕ ಉಪದ್ರವನ್ನು ಮಾಡಲು ಸಮಯ ಹೇಗೆ ಸಿಗುವುದೋ ಎಂಬ ಪ್ರಶ್ನೆಯನ್ನು ನನಗೆ ಉತ್ತರಿಸಲು ಸಾಧ್ಯವಿಲ್ಲ—ನಿಮ್ಮಿಂದಲೂ ಅದು ಸಾಧ್ಯವಿಲ್ಲವೆಂದು ನನಗೆ ತೋರುತ್ತದೆ!" ಎಂದು ಡಾಕ್ಟರರು ಗಂಭೀರಧ್ವನಿಯಿಂದ ಹೇಳಿದರು.

ಟ್ರ್ರಿಕ್ಸಾನನ್ನು ಬಿಟ್ಟುಬಿಟ್ಟರು. ಜನರ ತಾರತಮ್ಯವನ್ನು ತಿಳಿದ, ಕಮಿಸ್ಸಾರ್ ಪ್ರಡೆಲ್ಕ ಟ್ರ್ರಿಕ್ಸಾನನ್ನು ಸಂಪೂರ್ಣವಾಗಿ ಬಿಡುಗಡೆಮಾಡಿದನೆಂದು ಹೇಳಲಾಗದು. ಟ್ರ್ರಿಕ್ಸಾನಿಗೆ ಅವನು ಇನ್ನೊಮ್ಮೆ ಸಂದೇಹಕ್ಕೆ ಎಡೆಗೊಡಬಾರದೆಂದು—ಅವಿಧೇಯತೆಯ ವಿರುದ್ಧವಲ್ಲ (ಯಾಕೆಂದರೆ ಆ ತನಕ ಅವನು ಅವಿಧೇಯನಾಗಿರಲಿಲ್ಲ—ಅಧಿಕೃತವಾಗಿ) ಕಠಿಣವಾದ ಎಚ್ಚರಿಕೆಯನ್ನಿತ್ತ. ಅದೂ ಈ ನೂತನ ಪ್ರಜಾ ಪ್ರಭುತ್ವಗಳಲ್ಲಿ ಘೋರ ಅಪರಾಧವೇ ಸೈ.

"ಈಗ ಡಾಕ್ಟರ್, ನಾನು ಒಂದು ಸಂಗತಿ ಹೇಳಿಬಿಡುತ್ತೇನೆ." ಅದು, ಅವನು ಮುಂದರಿಸಿದ, "ನನಗೂ ನಿಮಗೂ ಈ ಹಳೆಯ ರೈಲುದಾರಿಯ ಬದಲು ಬೇರೊಂದು ದಾರಿ ಹುಡುಕಬೇಕಾಗಿದೆ. ನೀವು ನಿರಾಶರಾಗಬೇಡಿರಿ. ಹೌದು, ಡಾಕ್ಟರರು ಆಶ್ಚರ್ಯ ಪಡುತ್ತಿದ್ದಂತೆಯೇ," ನಾನು ಒಬ್ಬ ಅಪರಾಧಿಯೇ ಹೌದು, ಡಾಕ್ಟರ್ . . . ಎಂದನು.

"ನಾನು ಸಂಜೆ ನಿಮ್ಮೊಡನೆ, ಏಕೆ ಕುಡಿಯವುದಿಲ್ಲವೆಂದು ನೀವು ಸೋಜಿಗ ಪಡುತ್ತಿರಬೇಕೆಂದು ನಿರೀಕ್ಷಿಸುತ್ತೇನೆ; ಮೀನು ಹಿಡಿಯುವಾಗಲೂ ನಾನು ಆಗಾಗ್ಗೆ ಏಕೆ ನಿದ್ದೆಮಾಡುತ್ತಿದ್ದೇನೆ ಎಂದೂ ನಿಮಗೆ ಆಶ್ಚರ್ಯವಾಗಿಲ್ಲವೆ? ಹೌದು . . . ನನ್ನ ಆ ಭಾರವಾದ ಮೋಟರ್ ಸೈಕಲನ್ನು ಯಾಕೆ ಪ್ರೀತಿಸುತ್ತೇನೆ? ಕೆಲಜನರು ನಾನು ಅದನ್ನು ನನ್ನ ಹೆಂಡತಿ ಮಕ್ಕಳಿಗಿಂತಲೂ ಹೆಚ್ಚಾದ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದೇನೆ ಎನ್ನುತ್ತಾರೆ...." ಎಂದು ಮಾತು ಮುಂದುವರಿಸಿದನು:

ಡಾಕ್ಟರರು ಇದೆಲ್ಲವನ್ನು ನೋಡಿದರು. ಆದರೆ ಅವುಗಳ ಅರ್ಥವನ್ನು ಗಮನಿಸಿರಲಿಲ್ಲ ಹೌದು........

ಟ್ರುಕ್ಸಾ ತಲೆಯಲ್ಲಾಡಿಸಿದ.

"ಈಗ ನಿಮಗೆ ಗೊತ್ತಾಯಿತೇ, ಡಾಕ್ಟರ್." ಟ್ರುಕ್ಸಾ ತನ್ನ ಇಂಗಿತವನ್ನು ಬಯಲು ಮಾಡುವಾಗ, ಅವನ ಧ್ವನಿ ನಡುಗುತ್ತಿತ್ತು. "ಹಗಲಲ್ಲಿ ನಾನು ಇಲ್ಲಿ ಕೆಲಸಮಾಡುತ್ತೇನೆ. ರಾತ್ರಿ ಪ್ರತಿಭಟನೆಗೆ ಕೆಲಸಮಾಡುತ್ತಿದ್ದೇನೆ........"

ಡಾಕ್ಟರ್ ಸ್ಪೈಕ್‌ರ ಕಣ್ಣುಗಳಲ್ಲಿ ನೀರು ಉಕ್ಕಿ ಬಂತು. ನೂತನ ಜೆಕೊಸ್ಲೋವಾಕಿಯಾದಲ್ಲಿ ಇಂಥ ರಹಸ್ಯವನ್ನು ಒಬ್ಬನೊಡನೆ ಹೇಳುವುದೆಂದರೆ ಅವನೊಡನೆ ತನ್ನ ಸಾವಿನ ಹಕ್ಕನ್ನು ಕೊಟ್ಟಂತೆ. ಸ್ನೇಹ, ವಿಶ್ವಾಸಗಳೆಲ್ಲವೂ ಅದರೆದುರು ತೃಣಸಮಾನ.

ಮೌನವಾಗಿ ಡಾಕ್ಟರರು ಎದ್ದು ಆ ಕೊಳಕು ಕೋಣೆಯನ್ನು ದಾಟುತ್ತ ಮುಂದೆ ಬಂದು ಟ್ರುಕ್ಸಾನಿಗೆ ತಮ್ಮ ಕೈಯನ್ನು ನೀಡಿದರು. ಅವನು ಅದನ್ನು ಮೌನವಾಗಿ ತನ್ನ ಕೈಯ್ಯಲ್ಲಿ ಹಿಡಿದುಕೊಂಡ.

ಅವರು ಮುಂಚೆಯೂ ಸ್ನೇಹಿತರಾಗಿದ್ದರು; ಈಗಲಾದರೋ ಅದು ಮನುಷ್ಯ ಮಾತ್ರದಿಂದ ನಾಶಮಾಡದಷ್ಟು ಬಲವಾದ ರೂಪವನ್ನು ತಾಳಿತ್ತು.

ಡಾಕ್ಟರರು ಪುನಃ ಕುಳಿತಬಳಿಕ ಟ್ರ್ರಿಕ್ಸಾನು "ಹೌದು, ನಾನೂ ಅಪಾಯ ಕ್ಕೊಳಗಾಗಿದ್ದೇನೆ. ಎಗರ್ ಪೋಲೀಸರೊಡನಿರುವ ನಮ್ಮ ಗುಂಪಿನವನೊಬ್ಬ ನನಗೆ ಈದಿನ ಈ ಸಂಗತಿಯನ್ನು ಹೇಳಿದ್ದ. ನನ್ನನ್ನು ಬಾಧಿಸಲು ಈಗಾಗಲೇ ಆಜ್ಞೆ ಹೊರಟಿದೆಯೆಂದು ನನಗೆ ಅವನು ಎಚ್ಚರಿಸಿದ್ದಾನೆ. ಇನ್ನು ಮೂರು ವಾರಗಳಲ್ಲಿ ನನ್ನನ್ನು ಅವರು ಬಂಧಿಸುವರೆಂದು ಅವನು ತಿಳಿಸಿದ್ದಾನೆ. ಆದ್ದ ರಿಂದ ನೋಡಿ," ಅವನು ಕೊಂಕು ನಗುವಿನೊಡನೆ, "ನನಗೂ ಅಷ್ಟೇ ಅದಕ್ಕಿಂತ ಹೆಚ್ಚಿಗೆ ಇಲ್ಲದಿದ್ದರೂ—ಓಡಿಹೋಗಲಿಕ್ಕೆ ಕಾರಣವಿದೆ" ಎಂದು ಹೇಳಿದನು.

"ನನಗೆ ಕಾರಣವಿದೆ. ಆದರೆ ನಿಮಗೂ ಇದೆಯೆಂದು ನನಗೆ ತಿಳಿದಿರಲಿಲ್ಲ........"

ಟ್ರ್ರಿಕ್ಸಾ ಎದ್ದು ಮೇಜಿನ ಬಳಿಗೆ ಸರಿದ. "ನಾವು ಇಲ್ಲಿ ಕುಳಿತು ಇದಕ್ಕೆ ಏನಾದರೂ ಉಪಾಯ ಹುಡುಕಲಿಕ್ಕಾಗುವುದೋ ಎಂದು ನೋಡೋಣ ಡಾಕ್ಟರ್." ಡಾಕ್ಟರರೂ ಮೇಜಿನಬಳಿ ಬಂದು ಕುಳಿತುಕೊಂಡರು. "ರೈಲು ಬಂಡಿ ಪ್ರಯೋಜನವಿಲ್ಲವೆಂದು ಈಗ ನಿಮಗೆ ಹೇಳಿದೆ. ಆದರೆ ನಾನು.... ಕೇವಲ ಒಬ್ಬ ವ್ಯಕ್ತಿಯ ಪಲಾಯನದ ಕುರಿತು ಹಾಗೆಂದೆ..." ಅವನು ಹುಬ್ಬು ಗಂಟಿಕ್ಕಿ, ಗಲ್ಲವನ್ನು ತಿಕ್ಕುತ್ತ ಮೌನದಿಂದ ಗಾಢವಾಗಿ ಚಿಂತಿಸುತ್ತಿದ್ದನು. "ನಿಮ್ಮೊಡನೆ ಏನಾದರೂ ಉಪಾಯವಿದೆಯೆ, ಕರೆಲ್...?" ಎಂದು ಡಾಕ್ಟರು ಕುತೂಹಲದಿಂದ ಪ್ರಶ್ನಿಸಿದರು.

ಅವನು ಸ್ವಾತಂತ್ರ್ಯದ ಅಸಾಧ್ಯವಲ್ಲದ ಕನಸನ್ನು ನೋಡುತ್ತಿರುವಂತೆ, ಮೇಜಿನಕಡೆಗೆ ನೆಟ್ಟ ದೃಷ್ಟಿಯಿಂದ ನೋಡುತ್ತ, "ಹ ಹ........ಹೌದು ಒಂದು ಉಪಾಯ ಮಾಡಬಹುದೆಂದು ನನಗೆ ತೋರುತ್ತದೆ. ಅವನು ಡಾಕ್ಟರರನ್ನು ಕಣ್ಣೆತ್ತಿ ನೋಡಿ, ಆದರೆ ಹಾಗೆ ಮಾಡಿದರೆ ಅದನ್ನು ಒಂದೇ ಸಲ ಮಾಡಬಹುದು ವಿನಾ ಮತ್ತೊಮ್ಮೆ ಅದು ಆಗದು. ಆದದ್ದಾಗಲಿ ಎಂದು ಮಾಡುವ ಒಂದೇ ಒಂದು ಉಪಾಯವದು ತಿಳಿಯಿತೆ?"

"ಸರಿ."

"ಆದ್ದರಿಂದ ಡಾಕ್ಟರ್, "ನಿಮ್ಮೊಡನೆ ನಾನು ಮೊದಲು ಅದನ್ನು ಹೇಳಿಲ್ಲ: ಅದು ಸಾಧ್ಯವಾಗಬಹುದಾದರೆ ನಮ್ಮಲ್ಲಿ ಅನೇಕರು ಪಲಾಯನ

ಮಾಡಬೇಕು—ಏಕೆಂದರೆ ಆ ಉಪಾಯವನ್ನು ಮರಳಿ ಪ್ರಯೋಗಿಸುವುದು ಸಾಧ್ಯವಿಲ್ಲ." ಎಂದವನು ತನ್ನ ಒರಟುಧ್ವನಿಯಲ್ಲಿ ನಮ್ರ ಭಾವದಿಂದ ಹೇಳಿದನು.

"ಸರಿ, ಕರೆಲ್, ಆದರೆ ನನಗೆ ಅದಕ್ಕಾಗಿ ಯಾವ ಸಹಾಯಮಾಡಲೂ ಸಾಧ್ಯವಿಲ್ಲವೆ? ಆ ಉಪಾಯವೇನು....... ?" ಎಂದರು ಡಾಕ್ಟರ್.

"ನಾನು ಈಗ ಯೋಚಿಸಿರುವ ಮಟ್ಟಿಗೆ ನಾವು ಒಂದು ಎಂಜಿನ್ ಮತ್ತು ಸಾಮಾನಿನ ಗಾಡಿಯೊಡನೆ ಪಲಾಯನಮಾಡಬಹುದು. ಇಲ್ಲಿ ಓಡಿ ಹೋಗಬೇಕೆಂದು ನಾವು ಅನೇಕ ಜನ ಇಚ್ಛಿಸುತ್ತೇವೆ; ಕೆಲವರು ಅಡಗಿ ಕುಳಿತಿದ್ದಾರೆ, ಕೆಲವರು—ನಿಮ್ಮ ಮತ್ತು ನನ್ನ ಹಾಗೆ ಡಾಕ್ಟರ್—ಎಚ್ಚರಿಲ್ಪಟ್ಟಿದ್ದಾರೆ. ನಿಜವಾಗಿ ಅವರಲ್ಲಿಬ್ಬರು ನನ್ನ ಮನೆಯಲ್ಲೇ ಅಡಗಿ ಕುಳಿತಿದ್ದಾರೆ. ಡಾಕ್ಟರರ ಮುಖದಲ್ಲಿ ವಿಸ್ಮಯ ಮತ್ತು ದಿಗಿಲನ್ನು ಕಂಡು, "ಒಹೋ, ಹೌದು ಜಾರ್ಡಾ ಲೊಸ್ಕೊಟ್ ಅವನು ವಾಸ್ತುಶಿಲ್ಪಿ. ಅವನು ಚತುರ ಆದರೆ ತುಂಬಾ ಧೈರ್ಯಹೀನ—ಮತ್ತೆ ರೆನೆಸ್ಕಾಲ್ಕಿ ಅವನೊಬ್ಬ ವಿದ್ಯಾರ್ಥಿ; ಅವನನ್ನು ಹೊರಗೆ ಕಳಿಸದಿದ್ದರೆ ನನ್ನ ಧೈರ್ಯವೇ ಕುಸಿಯಬಹುದು. ಅವನು ಹುಚ್ಚ. ಅವರಿಬ್ಬರನ್ನೂ ನೀವು ಸಂಧಿಸಬೇಕು.... ..." ಎಂದವನು ಹೇಳಿದನು.

* * * *

ಒಂದು ತಾಸಿನವರೆಗೆ ಅವರಿಬ್ಬರೂ ಮಾತಾಡಿದರು. ಗಡಿಯನ್ನು ಮುಚ್ಚಿದ್ದುದರಿಂದ, ಜೆಕೋಸ್ಲೋವಾಕಿಯಾದಲ್ಲಿ ತಡವಾಗಿ ರೈಲು ಬಂಡಿಗಳು ಹೋಗುವುದಿಲ್ಲ. ಎಲ್ಲೋ ಅಪರೂಪದಲ್ಲಿ ಒಮ್ಮೊಮ್ಮೆ ಅವು ಹೋಗುತ್ತಿದ್ದುವು. ಟ್ರುಕ್ಸಾ ತನ್ನ ಕಚೇರಿಗೆ ಬೀಗ ಹಾಕಿ ಹೊರಡುವಾಗ ರೈಲ್ವೆ ನಿಲ್ದಾಣದಲ್ಲಿ ಯಾರೂ ಇರಲಿಲ್ಲ. ಅವನು ಡಾಕ್ಟರರೊಡನೆ ಹೊರಗೆ ಹೋದನು.

ಗೇಟಿನಬಳಿ ಡಾಕ್ಟರರು ಟ್ರುಕ್ಸಾನೊಡನೆ ಹಸ್ತಲಾಘವ ಮಾಡುವಾಗ, ಟ್ರುಕ್ಸಾನಿಗೆ ಯಾರದೋ ನೆರಳು ಸರಿದಂತೆ ತೋರಿತು. ಅವನು ಅದು ಯಾರದೆಂದು ನೋಡುತ್ತ ಡಾಕ್ಟರರೊಡನೆ "ಡಾಕ್ಟರ್, ಅವರು ನಿಮ್ಮನ್ನು ನಂಬಿದರೆಂದು ನನ್ನೊಡನೆ ಹೇಳಿದಿರಿ, ಪಾಪ"........ಎಂದು ಪಿಸುಗುಟ್ಟಿದ.

ದೀಪದಡಿಯಲ್ಲಿ ಚರ್ಮದ ಅಂಗಿಯನ್ನು ಧರಿಸಿದ್ದ ಒಬ್ಬ ವ್ಯಕ್ತಿಯು

ತನ್ನ ಪುಸ್ತಕದಲ್ಲಿ ಬರೆದುಕೊಳ್ಳುತ್ತಿದ್ದ.

ಆದರೆ ಡಾಕ್ಟರರು ಬರೆಯುತ್ತಿರುವ ವ್ಯಕ್ತಿಯನ್ನು ನೋಡಿ ನಸುನಕ್ಕು ಟ್ರಿಕ್ಸಾನ ಕೈಯ್ಯನ್ನು ಹಿಂಡಿದರು.

"ಕರೆಲ್, ತುಸು ದೂರ ಬನ್ನಿ. ನಾನು ಹೇಳುತ್ತೇನೆ . . ." ಇಬ್ಬರೂ ಮುಂದೆ ಹೆಜ್ಜೆ ಹಾಕಿದರು. ಸ್ವಲ್ಪ ದೂರ ಹೋದೊಡನೆ ಡಾಕ್ಟರರು, "ಅದು ವ್ಲಾಸ್ಟ್ಸ್ ಡ್ವಾರ್ಸ್ಕಿ ಎಂದು ನನಗನ್ನಿಸುತ್ತದೆ. ಈ ಬೆಳಕಿನಲ್ಲಿ ಅವನ ಹಾಗೆಯೇ ಕಾಣುತ್ತದೆ. ಅವನು ಗುಪ್ತ ಪೋಲೀಸು ದಳದವನು" ಎಂದರು.

"ಆದರಲ್ಲಿ ಏನೋ ವಿಶೇಷ.........? ಎಂದು ಟ್ರಿಕ್ಸಾ ಪಕ್ಕನೆ ಡಾಕ್ಟರರ ಮೇಲೆಯೇ ಸಂದೇಹಗೊಂಡು, ತಾನು ಮೋಸ ಹೋದೆನೆಂಬ ಭಯದಲ್ಲಿ ಗೊಣಗುಟ್ಟಿದ.

"ಕರೇಲ್, ನಾನೂ ಈ ಸಂಜೆ ಒಬ್ಬ ಸಹಾಯಕನಾಗಿದ್ದೇನೆಂಬುದನ್ನು ಮರೆಯಬೇಡಿ. ನಿಮ್ಮನ್ನು ನಾನು ನೋಡ ಬೇಕೆಂದು ಅವರು ನಿರೀಕ್ಷಿಸುತ್ತಾರೆ ನಿಮ್ಮನ್ನು ಬಲೆಗೆ ಹಾಕಲಿಕ್ಕಾಗಿ. ಹಾಗೇಯೇ ನಾನು ನಿಮ್ಮನ್ನು ಭೇಟಿಯಾಗುತ್ತೇನೆ. ಆಗಾಗ ಭೇಟಿಯಾದರೆ ಮತ್ತೂ ಉತ್ತಮ.

ಇಬ್ಬರೂ ನಿಂತು, ಕೈಕುಲುಕಿಸಿ, ಹೊರಟುಹೋದರು. ಕಾದು ನಿಂತವ ತನ್ನ ಪುಸ್ತಕದಲ್ಲಿ, ಡಾಕ್ಟರ್ ಸ್ವೆಕ್ ಮತ್ತು ಟ್ರಿಕ್ಸಾ ಅಪರಾಹ್ನ 10–11 ಕ್ಕೆ ಒಬ್ಬರನ್ನೊಬ್ಬರು ಬೀಳ್ಕೊಂಡರು. ಎಂದು ಬರೆದು ಕೊಂಡನು.

ಬಹಿರಂಗ ವಾಗಿ ನೋಡುವರಿಗೆ ಫ್ರಾಂಜೆನ್ಸ್ ಬಾಡಾನಲ್ಲಿದ್ದ ಟ್ರಿಕ್ಸಾನ ಮನೆಯ ಮಳಿಗೆಯಲ್ಲಿ 1951 ನೇ ಸೆಪ್ಟೆಂಬರ 3ರ ರಾತ್ರಿ ಯಾರೂ ಇರಲ್ಲಿಲ್ಲ. ಫ್ರಾಂಜೆನ್ಸ್ ಬಾಡ್ 2,500 ಜನಸಂಖ್ಯೆಯುಳ್ಳ ರೈಲುಗಳಿಗೆ ನೀರುತುಂಬಿಸುವ ಸ್ಥಳವಾಗಿತ್ತು.

ಕರೆಲ್ ಹೊರಗೆ ಹೋಗಿದ್ದ—ಬಹುಶ: ಡಾಕ್ಟರ್ ಸ್ವೆಕ'ರನ್ನು ಬಿಟ್ಟ ಬಳಿಕ ಎಗರ್ ಸ್ಟೇಷನ್ನಿಂದ ಮೋಟರ್ ಸೈಕಲಿನಲ್ಲಿಯೇ ಎಲ್ಲೋ ಹೋಗಿದ್ದ. ಆದಿನಗಳು ಅವನು ಮನೆಗೆ ಬೇಗನೆ ಮರಳುವುದಿಲ್ಲವೆಂಬುದು ಅವನ ನೆರೆಕರೆಯವರಿಗೂ ಗೊತ್ತಿತ್ತು. ಶ್ರೀಮತಿ ಟ್ರಿಕ್ಸಾ ಮತ್ತು ಮಕ್ಕಳು ಪಿಲ್ಸೆನ್ ನಲ್ಲಿದ್ದ ಅವನ ತಂದೆಯನ್ನು ನೋಡಲು ಹೋಗಿದ್ದರು.

ಟ್ರಿಕ್ಸಾನ ಮನೆಯಿಂದ ಬೆಳಕುಕಾಣದಿದ್ದರೂ ಅದು ಖಾಲಿಯಾಗಿರಲಿಲ್ಲ, ಯುದ್ಧಕಾಲದಲ್ಲಿ ಬೆಳಕು ನಿಂದಿಸಿ ಅವಿತುಕೊಳ್ಳವಂತೆ ವಾಸ್ತು

ಶಿಲ್ಪಿಯು ಜಾರ್ಡ್ ಲೊಸ್ಕೊಟ್–ಇಡೀ ಜೆಕೋಸ್ಲೋವಾಕಿಯದ ಗೌಪ್ಯವಾಗಿ ಕೆಲಸನಡೆಸುವ ಚಳವಳಿಗಾರರು. ಅವನನ್ನು "ಅದೃಷ್ಟ ಹೀನ ಲೊಸ್ಕೊಟ್" ಎನ್ನುತ್ತಿದ್ದರು—ಅಡುಗೆ ಕೋಣೆಯ ಮೇಜಿನ ಬಳಿ 6.35 ಮಿಲಿ ಮಿಾಟರಿನ ಬೆಲ್ಜಿಯನ್ ಆಟೊಮೆಟಿಕ್ ಪಿಸ್ತೂಲನ್ನು ಸುಮ್ಮನೆ ಗುರಿಯಿ ಡುತ್ತಿದ್ದ. ಅದರಿಂದ ಗುಂಡು ಹೊಡೆಯುವಷ್ಟು ಧೈರ್ಯ ತನಗೆ ಎಂದೂ ಇರಲ್ಲಿಲ್ಲ ವೆಂದು ಅವನಿಗೆ ಗೊತ್ತಿತ್ತು.

ಅವುಗಳಿಂದ ತೋಟೆಗಳನ್ನು ಹೊರಗೆ ತೆಗೆದು ಮೇಜಿನ ಮೇಲೆ ಇಟ್ಟಿದ್ದ ಪಿಸ್ತೂಲಿನಿಂದ ಕೋಣೆಯಲ್ಲಿದ್ದ ಅನೇಕ ವಸ್ತುಗಳತ್ತ ಗುರಿಯಿಡುತ್ತಿದ್ದ ಮ್ಯೂನಿಚ್ಚಿಗೆ ಕರೆಲ್ ಹೋಗಿದ್ದಾಗ ತಂದಿದ್ದ ಬವೇರಿಯನ್ ಪಾತ್ರೆಗಳಿ ದ್ದುವು; ಸ್ವಿಸ್ ಗಡಿಯಾರ (ಅದರಲ್ಲಿ ಗಂಟೆ ಹೊಡೆಯುವಾಗ ಕುಕ್ಕೂ ಹಕ್ಕಿಯ ಗೊಂಬೆಯೊಂದು ಕೂಗುತ್ತಿತ್ತು. ಅದನ್ನು ಕೇಳುವಾಗ ಅವನಿಗೆ ಭಯವಾಗುತ್ತಿತ್ತು. ಆದ್ದರಿಂದ ಅದನ್ನು ನಾಶ ಮಾಡಬೇಕೆಂದು ಅವನಿಗನ್ನು ಸುತ್ತಿತ್ತು) ; ಪಿಂಗಾಣಿಯ ಒಲೆ—ಆರು ಗುಂಡುಗಳಳೊಳಗೆ ಕೂಡಾ ಅವನು ಅದನ್ನು ಒಡೆಯುದಷ್ಟು ದೊಡ್ಡದಾಗಿತ್ತು—ವಸಂತದ ಹೂಗಳನ್ನು ಇಟ್ಟಿದ್ದ ಹಳದಿ-ಕಂದು ಬಣ್ಣದ ಪಾತ್ರೆ; ಫ್ರಾಂಜೆನ್ಸ್ ಬಾಡ್‌ಸ್ಬಾದ ಒಂದು ಅಂಗಡಿಯ, ಹದಿನೈದು ವರ್ಷಗಳ ಹಿಂದಿನ ವರ್ಣರಂಜಿತ ಜಾಹೀರಾತು. ಅವನು ಒಬ್ಬಂಟಿ ಗನಾಗಿದ್ದು ಜಿಗುಪ್ಸೆಪಟ್ಟಿದ್ದ; ಹೀಗೆಯೇ ರಾತ್ರಿಗಳನ್ನು ಒಬ್ಬಂಟಿಗನಾಗಿಯೇ ಕಳೆದರೂ ಅವನಿಗೆ ಬೇಸರ ಕೂಡಾ ಆಗುತ್ತಿರಲಿಲ್ಲ.

ಲೊಸ್ಕೊಟ್‌ನ ಬೇಸರಪಡುವಷ್ಟು ಮನಶ್ಶಾಂತಿಯಿರಲಿಲ್ಲ. ಅವನ ನರಸಮೂಹವು ತೀವ್ರಗಾಹಿಯಾಗಿದ್ದುದರಿಂದ, ಹೆಚ್ಚುಕಡಿಮೆ, ದೈಹಿಕ ಹಾಗೂ ಮಾನಸಿಕ ವೇದನೆಗಳಿಂದ ವಿಮೋಚನೆ ಹೊಂದಿದರೆ ಹೇಗಾಗುವು ದೆಂಬುದು ಅವನಿಗೆ ಗೊತ್ತಿರಲಿಲ್ಲ— ಎಂದೂ ಗೊತ್ತಾಗುತ್ತಿರಲಿಲ್ಲ.

ಅವನಿಗೆ ಕಳವಳವಾಗುತ್ತಿತ್ತು; ಆದರೆ ಅವನ ಪರಿಸ್ಥಿತಿ ಗೊತ್ತಿದ್ದವರಿಗೆ ಕೂಡಾ ಅವನ ಕಳವಳಕ್ಕೆ ಸಹಾನುಭೂತಿ ತೋರಿಸಲು ಏಕೆಂದರೆ ಕಾರಣವಿ ರಲ್ಲಿಲ್ಲ. ಗುಪ್ತ ಪೋಲೀಸರು ತನ್ನನ್ನು ಹುಡುಕುತ್ತಿದ್ದಾರೆಂಬ ಕಳವಳವನ್ನು ಅವನು ಒಮ್ಮೆ ಬಿಟ್ಟರೆ, ಇನ್ನುಯಾವುದಾದರೂ ಒಂದು ವಿಷಯದಲ್ಲಿ ಕಾತರ ಗೊಳ್ಳುತ್ತಿದ್ದ. ಚಿಕ್ಕಂದಿನಿಂದಲೂ ಅವನು ಹೀಗೆಯೇ ಕಳವಳಪಡುತ್ತಲೇ ಇದ್ದ.

ಶಾಲೆಯಲ್ಲಿ ತನಗೆ ಪಾಠಗಳನ್ನು ಕಲಿಯಲು ಸಾಧ್ಯವಾಗುವುದಿಲ್ಲವಲ್ಲ ಎಂದು ಕಳವಳಪಟ್ಟಿದ್ದ, ಅವನ್ನು ಕಲಿತಬಳಿಕ ತಾನು ಅವುಗಳನ್ನು ಎಲ್ಲಿ ಮರೆತು ಬಿಡುವೆನೋ ಎಂದು ದಿಗುಲುಗೊಳ್ಳುತ್ತಿದ್ದ.

ವಿಶ್ವವಿದ್ಯಾಲಯದಲ್ಲಿ ಅವನು ತನ್ನ ಕೊನೆಯ ವಾಸ್ತು ಶಿಲ್ಪದ ಪರೀಕ್ಷೆಯಲ್ಲಿ ಉತ್ತೀರ್ಣನಾಗಲಿಕ್ಕಿಲ್ಲವೆಂದು ಅವನು ಚಿಂತಿಸಿದ್ದ. ಆದರೆ ತಾನು ಉತ್ತಮವಾಗಿ ಉತ್ತೀರ್ಣನಾದೆನೆಂದು ತಿಳಿದಾಗ ಇನ್ನು ತಾನು ಹೇಗೆ ಆ ವೃತ್ತಿಯನ್ನು ಅಭ್ಯಾಸ ಮಾಡುವೆನೋ ಎಂದು ಕಳವಳಪಟ್ಟಿದ್ದ.

ಅವನು ನೂತನ ಸರ್ಕಾರದ ಆಕ್ರೋಶಕ್ಕೆ ಗುರಿಯಾದ ಸಂದರ್ಭ ತೀರ ಕ್ಷುಲ್ಲಕವಾಗಿತ್ತು. ಯಾರೂ—ಅವನ ನೆಚ್ಚಿನ ಸ್ನೇಹಿತರುಕೂಡಾ— ಅದನ್ನು ತಿಳಿದಿರಲಿಲ್ಲ.

ಅವನನ್ನು ಕೈದು ಮಾಡಲು ಆಜ್ಞೆ ಹೊರಟಿದೆಯೆಂದು ಭೂಗತ ಕೆಲಸಗಾರರಿಂದ ಅವನಿಗೆ ಕ್ಷಿಪ್ರವಾಗಿ ಸುದ್ದಿಸಿಕ್ಕಿತು. ಈ ಸುದ್ದಿಕೊಡುವವನು ತನ್ನ ಕೃತ್ಯಕ್ಕಾಗಿ ತನ್ನ ಸ್ವಾತಂತ್ರ್ಯವನ್ನು ಬಹುಶಃ ಜೀವನವನ್ನು ಕೂಡಾ— ಅಪಾಯಕ್ಕೊಳಪಡಿಸಿದರೂ, ಅವನು ಲೊಸ್ಕೊಟ್‌ನಿಗೆ ಅದನ್ನು ತಿಳಿಸುವಾಗ ಏನೊ ನಕ್ಕಿದ್ದ; ಆ ಬಳಿಕ ಲೊಸ್ಕೊಟ'ಗೆ ಏನಾದರೂ ಸಂಭವಿಸಿದರೆ—ಎಷ್ಟೋ ಘಟನೆಗಳು ಸಂಭವಿಸಿದವು—ಅವನಿಗೆ ಸಹಾಯ ಮಾಡಲು ಯಾರೂ ಹಿಂಜರಿಯುತ್ತಿದ್ದಿಲ್ಲ, ಹಾಗೆ ಸಹಾಯವನ್ನು ಸಂತೋಷದಿಂದ ನಗುತ್ತಲೇ ಅವರು ಮಾಡುತ್ತಿದ್ದರು. ಎಂಥಹ ಘಟನೆ ಸಂಭವಿಸಿದರೂ "ಲೊಸ್ಕೊಟ್‌ನಹಾಗೆ" ಎನ್ನುತ್ತಿದ್ದರು.

ಉದಾಹರಣೆಗೆ ಅವನು ಜಾಕ್ ಜರ್ಮನಿಗಡಿಯನ್ನು ದಾಟಲು ಎಷ್ಟೋ ಸಲ ಆಗಾಗ್ಗೆ ಪ್ರಯತ್ನಿಸಿ ಸೋತು ಹಿಂದಿರುಗಿದಾಗ, ಎಲ್ಲರೂ "ಲೊಸ್ಕೊಟ್ ನಹಾಗೆ" ಎಂದಿದ್ದರು: 1948 ರಲ್ಲಿ ವಿಶೇಷ ಕಷ್ಟವಿಲ್ಲದೆ ಇದ್ದಾಗಲೂ ಲೊಸ್ಕೊಟ್ ಪ್ರೇಗಿನಲ್ಲಿದ್ದ ತನ್ನಮನೆಗೆ ಮರಳಿದಾಗ, ಅವನ ಹೆಂಡತಿ ಆಗಲೇ ಪೋಲೀಸರಿಗೆ ಅವನ ಪಲಾಯನ ಕುರಿತು ವರದಿ ಮಾಡಿದ್ದಳು. ಅವನು ಬಹುಪಕ್ಷ ಹಿಂದಿರುಗಲಿಕ್ಕಿಲ್ಲವೆಂದು ಅವರಿಗೆ ತಿಳಿಸಿದ್ದಳು.

ಉಳಿದವರಿಗೆಲ್ಲ ಈ ಘಟನೆ ತಮಾಷೆಯಾಗಿ ಕಂಡರೂ ಲೊಸ್ಕೊಟ್‌ಗೆ ಅದು ತದ್ವಿರುದ್ಧವಾಗಿತ್ತು. ಅವನು ತನ್ನ ಹೆಂಡತಿಯನ್ನು ಭಯದ ವೇದ

ನೆಯಿಂದ ಸ್ಪಷ್ಟಸಿದ. ಆದರೆ ಇಂಥಹ ಸಂಗತಿಗಳು ತನ್ನ ವಿಚಾರದಲ್ಲಿ ಯಾವಾಗಲೂ ನಡೆಯುತ್ತಿದೆಯೆಂದು ಅವನಿಗೆ ತಿಳಿದಿದ್ದುದು ಸ್ವಲ್ಪ ಒಳ್ಳೆಯದೇ ಆಯಿತು. ಅವನು ಅದೃಷ್ಟ ಹೀನ ಲೊಸ್ಕೊಟನಷ್ಟೆ.

"ನಿನಗೇನು ಹುಚ್ಚೆ ? ಪೋಲೀಸರಿಗೆ ತಿಳಿಸುವುದು.........." ಎಂದು ಬೊಬ್ಬಿಟ್ಟ.

ಅವನ ಹೆಂಡತಿ ಅಳಲು ಆರಂಭಿಸಿದಳು.

"ಅದು ತಾನು ಏನೆಂಬುದು ನನ್ನಷ್ಟೆ ನಿಮಗೂ ಗೊತ್ತಿದೆ. ಕಷ್ಟದಲ್ಲಿ ಸಿಲುಕ ಬಾರದೆಂದಿದ್ದರೆ ಪೋಲೀಸರಿಗೆ ಹೇಳಲೇಬೇಕು..........

ಲೊಸ್ಕೊಟ್‌ಗೆ ಉಸಿರು ಕಟ್ಟಿದಂತಾಯಿತು.

"ನಿಮಗೆ ಕಷ್ಟದಲ್ಲಿ ಸಿಲುಕ ಬಾರದೆಂದಿದ್ದರೆ.........."ತನ್ನ ಹೆಂಡತಿ ಕೂಡಾ ಪೀಡಿಸಲ್ಪಟ್ಟ ತನಗೆ ಆಶ್ರಯವನ್ನೀಯುವುದಿಲ್ಲವಲ್ಲವೆನ್ನುವಾಗ ಅವನು ನಿರಾಶನಾದ.

ಅವನಿಗೆ ಕೆಲಸಮಾಡಬೇಕಾದರೆ, ದುಡಿತದ ಅಧಿಕಾರ ಪತ್ರ, ರೇಶನ್ ಕಾರ್ಡು, ಗುರುತಿನ ಕಾರ್ಡು, ಪೋಲೀಸ' ಪಾಸು—ಇವುಗಳು ಬೇಕೇ ಬೇಕು. ಇವು ಇಲ್ಲದಿದ್ದರೆ ಅವನು ತನ್ನ ವೃತ್ತಿಯನ್ನವಲಂಬಿಸುವುದಂತಿರಲಿ, ಸಾಮಾನ್ಯ ಕೂಲಿಗಾರನಾಗಿಯೂ ದುಡಿಯಲಾರ. ಅವನು ಮನೆಯಿಲ್ಲದವನು ಮಾತ್ರವಲ್ಲ, ಹೆಸರಿಲ್ಲದವ, ಪೋಲೀಸರ ದಾಖಲೆಪತ್ರಗಳಲ್ಲಿ ಅವನು ಕಾಣೆಯಾಗಿದ್ದನೆಂದು ಸೂಚಿಸಲಾಗಿತ್ತು. ಈ ಮೂರು ವರ್ಷಗಳಲ್ಲಿ ಅವನು ತನ್ನ ರಹಸ್ಯವನ್ನು ಬಚ್ಚಿಟ್ಟಿದ್ದ, ವೃಥಾಕಾಲಹರಣ ಮಾಡಿದ್ದ, ಅವನುಯಾರಾದರೊಬ್ಬ ಭೂಗತಕೆಲಸಗಾರನ, ಅಡಗಿ ಕುಳಿತ ಅತಿಥಿಯಾಗಿರುತ್ತಿದ್ದ.

ಇಡೀ ದಿನವೂ ಅವನು ಏಕಾಕಿಯಾಗಿರುತ್ತಿದ್ದ. ಓದಲಿಕ್ಕೆ ಕೂಡಾ ಅವನ ಉದ್ರೇಕಗೊಂಡಮನಸ್ಸು ಬಿಡುತ್ತಿರಲಿಲ್ಲ. ಅವನಿದ್ದಲ್ಲಿ ಪಿಯಾನೋ ಇದ್ದರೂ ಅದನ್ನು ಬಾರಿಸುವ ಧೈರ್ಯವೂ ಅವನಿಗಿದ್ದಿಲ್ಲ. ಆದರೆ ಅವನ ಮನಸ್ಸಿನಲ್ಲಿ ಕಲ್ಪನೆ ಮಾತ್ರ ದೊಡ್ಡ ಪ್ರಮಾಣದಲ್ಲಿ ಬೆಳೆಯುತ್ತಿತ್ತು. ತನಗೆ ಆಶ್ರಯ ವಿತ್ತವರು ತನ್ನ ವಿಷಯದಲ್ಲಿ ಜಿಗುಪ್ಸೆ—ಗೊಂಡಿರುವರೆಂದೂ ಆದ್ದರಿಂದ ತನ್ನನ್ನು ದೂರಗೊಳಿಸಲು ಯತ್ನಿಸುತ್ತಿರುವರೆಂಬ, ಭಾವನೆ ತನ್ನ

ಷ್ಟಕ್ಕೆ ಮೂಡುತಿತ್ತು. ಅವರು ಅವನ ಕರುಣಾ ಜಕನ ಸ್ಥಿತಿಗೆ ಕನಿಕರ ಪಟ್ಟು ಅವನನ್ನು ದೂರವಮಾಡುಲು ಯತ್ನಿಸುತ್ತಿದ್ದರುನಿಜ. ಆದರೆ ಅವನು ಭಾವಿ ಸಿದಹಾಗಲ್ಲ–ಮತ್ತೆ ಒಂದೆರಡು ಸಲ ಅವನ “ ಸ್ವಾಭಿಮಾನದ ” ಪಲಾಯ ನದಿಂದ ಅವನು ತನ್ನನ್ನು ಮಾತ್ರವಲ್ಲ ತನ್ನ ರಕ್ಷಕರನ್ನೂ ಅಪಾಯಕ್ಕೆ ಗುರಿ ಪಡಿಸುತ್ತಿದ್ದ.” ಟ್ರ್ರಿಕ್ಸಾನ ಮನೆಯಲ್ಲಿ ಲೊಸ್ಕೊಟ್ ನೊಂದಿಗೆ ಗೌಪ್ಯವಾಗಿ ವಾಸಿಸುತ್ತಿದ್ದ ವಿದ್ಯಾರ್ಥಿಸ್ಕಾಲ್ಸ್ಕಿ, ಲೊಸ್ಕೊಟ್ ತನ್ನ ಮೂರ್ಖತನದಿಂದ ಇಡೀ ಟ್ರ್ರಿಕ್ಸಾಕುಟುಂಬವನ್ನೇ ತಾನು ಅಪಾಯಕ್ಕೀಡು ಮಾಡುವುದಿಲ್ಲ ವೆಂದು ಅವನಿಂದ ಆಣೆ ಹಾಕಿಸಿದ್ದ. ಸ್ಕಾಲ್ಸ್ಕಿಯೇ ಆಬೆಲ್ಜಿಯನ್ ಪಿಸ್ತೂಲನ್ನು ಅವನೊಡನೆ ಬಿಟ್ಟಿದ್ದ–ಲೊಸ್ಕೊಟ್, ಕೂಡಲೇ ಅದರ ತೋಟಿಗಳನ್ನು ಎಳೆದು ಹೊರಗೆ ಹಾಕಿ ಆಪಿಸ್ತೂಲು ಕೆಲಸಕ್ಕೆ ಬಾರದಂತೆ ಮಾಡಿದ್ದ! ಎದುರಿನ ಬಾಗಿ ಲಿನಲ್ಲಿ ಗಂಟೆ ಬಾರಿಸಿತು. ಲೊಸ್ಕೊಟ್ ತನ್ನ ಕಲ್ಪನಾ ಭ್ರಮೆಯಿಂದ ಚೇತ ರಿಸಿ ಭಯಗೊಂಡ. ಪಿಸ್ತೂಲನ್ನು ತೋಟಿಗಳನ್ನು ಅವನು ಸೆಳೆದು ಕೊಂಡು ತನ್ನ ಜೇಬಿನೊಳಗೆ ಅವಲ್ಲವನ್ನೂ ತುರುಕಿಸಿ ಕೊಳ್ಳಲು ಯತ್ನಿಸುತ್ತಿದ್ದ.

ವಾತರೋಗಕ್ಕೀಡಾದವರಂತೆ ಅವನ ಕೈಗಳು ನಡುಗತೊಡಗಿದುವು. ಬರೇ ಪಿಸ್ತೂಲನ್ನು ಕಿಸೆಯೊಳಗೆ ಹಾಕಿ ಕೊಳ್ಳುವುದು ಕೂಡಾ ಅವನಿಂದ ಸಾಧ್ಯವಾಗಲಿಲ್ಲ ಮತ್ತೆ ಅತ್ತಿತ್ತ ನೋಡಿ, ಅವನ್ನು ಒಂದು ಮರದ ಕಪಾ ಟಿನ ಅಡಿಯಲ್ಲಿ ತುರುಕಿಸಿದನು.

ಬಹಳ ಮೆಲ್ಲನೆ ಕಾಲುಗಳನ್ನೆಳೆಯುತ್ತ ಅವನು ಬಾಗಿಲು ಬಳಿಸರಿದ. ತನ್ನನಾಡಿಗಳ ಜೋರಿನ ಬಡಿತಕೇಳದಹಾಗೆಗಂಟಲನ್ನು ಒತ್ತಿಕೊಂಡ. ಅವನು ಬಹಳಸಮಯದ ಬಳಿಕ, ಹೇಗಾದರೂ, ನಾನು ಹೇಗೋ ಧೈರ್ಯಮಾಡಿ, ಒರಟಾದ ಕಪಟಸ್ವರದಲ್ಲಿ ಹೊರಗೆಯಾರಿದ್ದರೆಂದು ಕೇಳಿದೆ....... ಅವನುಧ್ವನಿ ಬದಲಿಸುವ ಅವಶ್ಯವಿರಲಿಲ್ಲ. ಅದು ಸ್ಕಾಲ್ಸ್ಕಿ ಅವನಿಗೆ ಲೊಸ್ಕೊಟ್ ತನ್ನ ಧ್ವನಿ ಬದಲಾವಣೆ ಮಾಡಿದರೂ ಲೊಸ್ಕೊಟ್‌ನಧ್ವನಿ ಅವನಿಗೆ ಗೊತ್ತಾಗುತ್ತಿತ್ತು.

“ಏ ಮೂರ್ಖ ಬಾ” ಬಾಗಿಲು ತೆಗೆ! ಎಂಬ ಘನ ಗಂಭೀರವಾದ ಕೂಗು ಕೇಳಿಸಿತು.

ಸ್ಕಾಲ್ಸ್ಕಿ ಸ್ವಲ್ಪ ಬ್ರೆಡ್ ಪಡೆಕೊಳ್ಳಲು ಕೆಲವು ತಾಸುಗಳ ಹಿಂದೆ ಹೊರಗೆ ಹೋಗಿದ್ದ. ಬಾಗಿಲು ತೆಗೆಯುವಾಗ ಲೊಸ್ಕೊಟ್ ನಡುಗುತ್ತಿದ್ದ. ಸ್ಕಾಲ್ಸ್ಕಿ ಒಳಗೆ ಬಂದೊಡನೆ ಬ್ರೆಡ್ಡನ್ನು ನೇಜಿನ ಮೇಲೆ ಎಸೆದ.

" ರೆನೆ ನೀನು ಹೋಗಿ ಬಹಳ ಸಮಯವಾಯಿತು..." ಲೊಸ್ಕೊಟ್ ಅಸಂತೋಷದಿಂದ ಹೇಳಿದ.

" ಹೌದು. ನಾನೀಗ ಬ್ರೆಡ್ ತಂದಿದ್ದೇನೆ ತಿನ್ನುವೆಯಾ ? "

" ಸರಿ. ನೀನು ಹಿಂದೆ ಬಾರದಿದ್ದರಿಂದ ನನಗೆ ಭಯವಾಯಿತು, ರೆನೆ. ಏಕೆ ನಿನಗೆ. ವಿಳಂಬವಾಯಿತು ? "

ಸ್ಕಾಲ್ಸ್ಕಿಯೂ ಹುಬ್ಬು ಗಂಟಿಕ್ಕಿದನು.

" ಏನು ವಿಳಂಬ ? ಏನೂ ಇಲ್ಲ ಜಾರ್ಜ. ನಾನು ಬ್ರೆಡ್ ಪಡೆಕೊಂಡೆ. ಆ ಬಳಿಕ ಸಿನಿಮಾಕ್ಕೆ ಹೋಗೋಣವೆಂದು ಅನ್ನಿಸಿತು. ಮಿರಾಡೊರ್ ಮಂದಿರ ದಲ್ಲಿ ಒಳ್ಳೆಯ ಚಿತ್ರವಿದೆ..." ಲೊಸ್ಕೊಟ್ ಆಶ್ಚರ್ಯದಿಂದ, ಸಿನಿಮಾ ! ದೇವರೇ ! ನೀನು ಅದನ್ನು ಹೇಗೆ ನೋಡಬಲ್ಲೆಯಪ್ಪಾ, ರೆನೆ ! ಎಲ್ಲರೂ ನಿನ್ನನ್ನೇ ನೋಡುತ್ತಿರುವಾಗ . ? ನಿನಗೆ ಹೇಗದು ಸಾಧ್ಯವೋ, ನನಗೆ ತಿಳಿಯದು...!" ಎಂದು.

" ಮಿರಾಡೋರ್‌ನಲ್ಲಿ ನನ್ನನ್ನು ಕಂಡುಹಿಡಿಯಲು ಅವಕಾಶ ಕಡಿಮೆ. ಅಲ್ಲಿ ಸಾಕಷ್ಟು ಕತ್ತಲೆಯಿದೆ ! ದಯವಿಟ್ಟು ಆ ಪಿಸ್ತೂಲನ್ನು ಮುಟ್ಟಬೇಡಿ. ಅದು ಕಪಾಟಿನ ಅಡಿಗೆ ಹೇಗೆ ಹೋಯಿತು ? " ಎಂದು ಸ್ಕಾಲ್ಸ್ಕಿ ಧಿಕ್ಕರಿಸಿ ಮಾತನಾಡಿದನು.

" ನಾನು ಇಲ್ಲಿರುವಾಗ ನೀನು ಅದನ್ನು ಕಪಾಟಿನಡಿಯಲ್ಲಿಟ್ಟು ನಾನಿಲ್ಲದಾಗ ಅದರಲ್ಲಿ ಆಡಿದರೆ ಒಳ್ಳೆಯದು. ಟ್ರಿಕ್ಸಾ ಇಲ್ಲಿಗೆ ಬಂದಿದ್ದರೆ...? ಸ್ಕಾಲ್ಸ್ಕಿ ಹೇಳಿದಾಗ ರೆನೆ ದೀರ್ಘಶ್ವಾಸ ಬಿಟ್ಟನು.

" ಇಲ್ಲ ರೆನೆ. ನಾವು ಅಡುಗೆ ಕೋಣೆಗೆ ಹೋಗೋಣವೆ... ?

" ನಿನಗೆ ಬೇಕಾದರೆ " ಎನ್ನುತ್ತವನು ಬ್ರೆಡ್ಡನ್ನು ಹಿಡಿದು ಲೊಸ್ಕೊಟ್ ನನ್ನು ಅಡಗೆಯ ಮನೆಗೆ ಹಿಂಬಾಲಿಸಿಕೊಂಡು ಹೋದ. " ನಮಗಾಗಿ, ಜಾರ್ಜ, ಏನಾದರೂ ನೀನು ಉಪದ್ರವ ಕೊಡಬೇಡ. ನಿಜವಾಗಿಯೂ ಹೆದರಿ ಕೆಯಲ್ಲಿ ಜೀವಹೋಗಲು ನೀನು ಪಿಸ್ತೂಲನ್ನು ಹಿಡಿದುಕೊಂಡು ಅತ್ತಿತ್ತ

ನೋಡುವುದೇ ಸಾಕು. ಅದರಲ್ಲಿ ತೋಟಿಗಳಿಲ್ಲದಿದ್ದರೂ ನಿನ್ನ ಕೈ ನಡುಗುತ್ತದೆ. ನೀನೇಕೆ ಹೆದರಬೇಕು, ಹೇಗಾದರೂ ನಾವೆಲ್ಲರೂ ಒಂದೇ ರೀತಿಯಲ್ಲಿ ಸಮಾನ ವಾಗಿ ಯಾರೂ ಹೆದರಬೇಕೆಂದಿಲ್ಲ. ? ಲೊಸ್ಕೊಟ್ ತುಸು ಗಂಭೀರವಾಗಿ "ನನ್ನ ಹೆದರಿಕೆಯನ್ನು ವಿಶ್ಲೇಷಿಸಲು ನಾನು ಯತ್ನಿಸಿದ್ದೇನೆ, ರೆನೆ.."ಮತ್ತು ತುಸು ಮೈಮುದುಡಿಸಿ, "ನನಗೆ ಪ್ರತಿಕ್ಷಣವೂ ಹೆದರಿಕೆ. ಯಾವಾಗಲೂ ನನ್ನ ನರ ಮಂಡಲವು ಕ್ಷೀಣವಾಗಿರುತ್ತದೆ, ನನ್ನ ಭಯ ಮೂಲಭೂತವಾದುದು. ನಾನು ಯಾಕಾಗಿ ಹೆದರಬೇಕಾಗಿದೆಯೆಂಬುದಕ್ಕೆ ನಾನು ಪ್ರಶಸ್ತ್ಯ ಕೊಡುವುದಿಲ್ಲ. ನನ್ನನ್ನು ಕೈದುಮಾಡುವರೆಂಬ ಹೆದರಿಕೆ ನನ್ನನ್ನು ಬಿಟ್ಟರೆ, ಬೇರೆಯೇ ಒಂದು ಹೆದರಿಕೆ ಆರಂಭವಾಗುತ್ತದೆ. ಆದುದರಿಂದ ಇತರರಿಗೆ ನನ್ನ ಸಹವಾಸವು ತುಂಬಾ ಅಸಹನೀಯವಾಗಿರಬೇಕು . . . " ಎಂದನು.

" ಓಹೊ, ಅದು ಚಿಂತಿಲ್ಲ; ಆದರೆ ನೀನು ಆ ಹೆದರಿಕೆಯನ್ನು ಗೆಲ್ಲಲು ಯತ್ನಿಸಿದರೆ, ನಿನ್ನ ಮನಸ್ಸು ಸ್ವಲ್ಪ ಒಳ್ಳೆಯದಾದೀತೆಂದು ನನಗೆ ತೋರುತ್ತದೆ. . . " ಎಂದ ಸ್ಕಾಲ್ಸ್ಕಿ.

" ಒಳ್ಳೆಯದು ! " ಲೊಸ್ಕೊಟ್ ಕೋಪದಿಂದ ಗುಡುಗಿದ. ನನಗೆ ಹೀಗೆ ಅಂಜುಬುರುಕನಾಗಿರುವುದು ಮೆಚ್ಚುವುದೆಂದು ನೀನು ಭಾವಿಸಿರುವೆಯಾ ? ಕೇವಲ ಅದರ ನಾಚಿಕೆಯೇ ಅರ್ಧ ಜೀವವನ್ನು ತೆಗೆಯಲು ಸಾಕೆಂದು ನೀನು ಒಪ್ಪಲಾರೆಯಾ ? ಅದು ಇಡೀ ದಿನ ಕುಳಿತುಕೊಂಡು ನಿನ್ನಂಥವನೊಬ್ಬನೊಡನೆ ನನ್ನನ್ನು ಹೋಲಿಸಿಕೊಂಡರೆ ಹೇಳಬೇಕೆ . . . ?

" ನಾನೊ ಒಬ್ಬ ಸಾಮಾನ್ಯನೇ ", ಸ್ಕಾಲ್ಸ್ಕಿ ನುಡಿದ

" ನನಗೆ ಗೊತ್ತು, ನಾನೂ ಸಾಮಾನ್ಯ ಮನುಷ್ಯರಲ್ಲೊಬ್ಬನು. ಆದರೆ. ನನಗೆ ತಿಳಿಯದು 1948 ರಲ್ಲಿ ನಾನು ಗಡಿಯನ್ನು ದಾಟಲು ಯತ್ನಿಸಿದಂದಿ ನಿಂದ ನಾನು... ನಿಷ್ಪ್ರಯೋಜಕನಾಗಿದ್ದೇನೆ. ನನ್ನ ನರ ಸಮೂಹಗಳು ಸರಿ: ಅವು ತೀವ್ರ ಗ್ರಾಹಿಗಳಾಗಿವೆ. ಯಾವ ಸಂದರ್ಭದಲ್ಲೂ ನಾನು ಹಾರಿ ಬೀಳದೆ ಇರಲಿಲ್ಲ. ಬ್ರೇಕ್ ಹಾಕಿದ ಶಬ್ದ, ಬಾಗಿಲು ಮುಚ್ಚಿದ ಶಬ್ದ, ಪತ್ರಿಕೆಯ ಹಾಳೆಗಳು ಮಗುಚುವಾಗ ಆಗುವ ಸದ್ದು ಕೂಡಾ ನನ್ನನ್ನು ದಿಗಿಲುಗೊಳಿಸಲು ಸಾಕು...

“ನಾವು ದೀಪ ಆರಿಸುವುದು ಒಳ್ಳೆಯದು. ಈ ಕೋಣೆಯ ಪರದೆಗಳು ಲಿಫ್ಟು ಒಳ್ಳೆಯವುಗಳಲ್ಲ ಮತ್ತು....ನೀನು ದೀಪ ಆರಿಸುವ ಮುಂಚೆ ಆ ಹಾಳು ಪಿಸ್ತೂಲನ್ನು ಎಲ್ಲಾದರೂ ಆಚೆ ಇಟ್ಟು ಬಿಡು....”

* * *

ಲೊಸ್ಕೊಟ್‌ನನ್ನು ಸರ್ಕಾರ ಏಕೆ ದ್ವೇಷಿಸುತ್ತಿದೆಯೆಂಬುದು ಹೆಚ್ಚಿನ ವರಿಗೆ ಗೊತ್ತಿರಲಿಲ್ಲ ನಿಜ. ಆದರೆ ಸ್ಕಾಲ್ಸ್ಕಿ ವಿಷಯದಲ್ಲಿ ಅಂಥರಹಸ್ಯವೇನೂ ಇರಲಿಲ್ಲ. ಅದು ಅವನ ನಾಲಿಗೆ–ಅದುವಿನಾ ಬೇರೇನೂ ಇಲ್ಲ. ಕೊಟ್ಟ ಉಪಟಳ.

ಸ್ಕಾಲ್ಸ್ಕಿ ಗಿಡ್ಡ ಆಳು. ಅದಕ್ಕೆ ಸರಿಯಾಗಿ ಹೆಚ್ಚು ವಾಚಾಳಿಮತ್ತು ಧೈರ್ಯವಂತ. ಅವನನ್ನು ಕಾನೂನು ಕಲಿಯಲು ಕಳುಹಿಸಬೇಕೆಂದು ಅವನ ಕುಟುಂಬದವರು ನಿಶ್ಚೈಸಿದ್ದರು. ಆದಕ್ಕೆ ಅವನಲ್ಲಿದ್ದ ಹುಟ್ಟುಗುಣ ವಾದ ಕಲಹ ಪ್ರೇಮವು ಅತ್ಯಂತ ಸಹಕಾರಿಯಾಗಿತ್ತು.

1948 ರ ಕಮ್ಯುನಿಸ್ಟ್ ಕ್ರಾಂತಿಗೆ ಅವನನ್ನು ಬಾಯಿಮುಚ್ಚಿಸಲಾಗಲಿಲ್ಲ. ಮತ್ತೆ ಪ್ರಜಾರಾಜ್ಯದ ಶಾಸನಗಳನ್ನು ಮಾರ್ಕ್ಸ್‌ನ ನೀತಿಗನುಸಾರವಾಗಿ ತಿದ್ದುಪಡಿ ಮಾಡಿದೊಡನೆ ಸ್ಕಾಲ್ಸ್ಕಿಗೆ ಚರ್ಚಿಸಲು ಹೊಸದೊಂದು ಉತ್ತೇಜನ ಕಾರಿಯಾದ ವಿಷಯ ದೊರಕಿತು. ಸಾಮಾನ್ಯವಾದ ಸಾಮಾಜಿಕ ಜೀವನಕ್ಕೆ ಕಮ್ಯುನಿಸ್ಟ್ ಜೀವನ ನೀತಿಯು ಮಾಡುವ ಆತಂಕಗಳ ಕುರಿತು ಅವನು ಚರ್ಚಿಸತೊಡಗಿದ ಸ್ಕಾಲ್ಸ್ಕಿಗೆ ಔಪಚಾರಿಕ ಉಪನ್ಯಾಸಗಳಲ್ಲಿ ದೊರೆತ ಜ್ಞಾನದಲ್ಲಿ ತೃಪ್ತಿಯಿರಲಿಲ್ಲ; ಅವನು ತಾನೇಯೋಚಿಸಿ, ತನ್ನ ನಿರ್ಧಾರಗಳ ಮೇರೆಗೆ ವಿಸ್ಮಯವಾದ ಚರ್ಚೆಗಳನ್ನು ಶಾಲೆಯಲ್ಲಿ ನಡೆಸುತ್ತಿದ್ದ.

ಅವನ ಒಬ್ಬ ಪ್ರಾಧ್ಯಾಪಕರು ಮುಂಜಾಗರೂಕತೆಯ ದೃಷ್ಟಿಯಿಂದ–ಅವರು ಕೇವಲ ಬೇಸರದಿಂದಲೂ ಹಾಗೆ ಮಾಡಿರಬಹುದು–ಸ್ಕಾಲ್ಸ್ಕಿಯೊಡನೆ ಕಮ್ಯುನಿಸ್ಟ್ ಶಾಸನದ ಮುಖ್ಯಾಂಶಗಳ ಕುರಿತು ಚರ್ಚೆಮಾಡಿ ಬೇಸರ ಗೊಂಡು, ಅವನ ವಿರುದ್ಧ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ದೂರು ಕೊಟ್ಟಿದ್ದರು

ಅದರ ಪರಿಣಾಮವಾಗಿ ಸ್ಕಾಲ್ಸ್ಕಿಯನ್ನು ವಿಶ್ವವಿದ್ಯಾಲಯದಿಂದ ಹೊರಗೆ ಹಾಕಲಾಯಿತು. ಅವನಿಗೆ ಕಲ್ಲಿದ್ದಲ ಗಣಿಯಲ್ಲಿ ದುಡಿಯಲು

ಆಜ್ಞೆ ಸಿಕ್ಕಿತು. ಅಲ್ಲಿ ಕಾಯಕಷ್ಟದ ದುಡಿತವೂ, ಪ್ರಾಮಾಣಿಕ ಕೆಲಸಗಾರರೊಡನೆ ಆಗುವ ಸಹವಾಸವೂ ಅವನಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ತೊಡೆದು ಹಾಕೀತೆಂದು ಸರ್ಕಾರ ಆಶಿಸಿತ್ತು. ಸ್ಕಾಲ್ಸ್ಕಿ ಆರುತಿಂಗಳು ಅಲ್ಲಿ ದುಡಿದರೂ ಕಮ್ಯುನಿಸಮ್ಮಿನ ಮೇಲೆ ಅವನಿಗೆ ಪ್ರೀತಿ ಹುಟ್ಟಲಿಲ್ಲ. ಆದರೆ ಕಲ್ಲಿದ್ದಲಿನ ಕೆಲಸದ ಮೇಲೆ ಜಿಗುಪ್ಸೆ ಹುಟ್ಟಿತು. ಹಾಗೆ ಆರು ತಿಂಗಳ ಅಂತ್ಯದಲ್ಲಿ ಅವನ " ಮನೋಸ್ಥಿತಿ " ಎಷ್ಟು ಪರಿವರ್ತನೆ ಗೊಂಡಿದೆಯೆಂದು ಅಧಿಕಾರಿಗಳು ವಿಮರ್ಶಿಸುವಾಗ, ಅವನು ಜಾಣತನದಿಂದ ಅವರನ್ನು ತೃಪ್ತಿಪಡಿಸಿ ಕಡಿಮೆ ಕಾಯಕಷ್ಟದ ಕೆಲಸಕ್ಕೆ ತನ್ನನ್ನು ವರ್ಗಾಯಿಸಿಕೊಂಡ. ಅವನನ್ನು ಪಕ್ಷದ ವರ್ತಮಾನ ಪತ್ರಿಕೆಯೊಂದರ ಜಾಹೀರಾತಿನ ಇಲಾಖೆಗೆ ಕಳಿಸಲಾಯಿತು. ಕಮ್ಯುನಿಸ್ಟ್ ರಾಜ್ಯದಲ್ಲಿ ಜಾಹೀರಾತನ್ನು ಎಂದೂ ವರ್ತಮಾನಗಳಿಂದ ಬೇರ್ಪಡಿಸಲಾಗುವುದಿಲ್ಲ. ಡಬ್ಬಿಯಲ್ಲಿ ಹಾಕಿ ಜೋಪಾಸನೆ ಮಾಡಿದ ಹಣ್ಣುಗಳ ಕುರಿತಾಗಲೀ ರೆಫ್ರಿಜರೇಟರ್ ಅಥವಾ ಶಸ್ತ್ರ ಚಿಕಿತ್ಸೆಯ ಬೆಲ್ಟ್‌ಗಳ ಕುರಿತಾಗಲೀ ಪ್ರಕಟಣೆಗೆ ಸಿದ್ಧವಾದ ಪ್ರಚಾರ ಪತ್ರಗಳಲ್ಲಿ ಕಮ್ಯುನಿಸ್ಟ್ ರಾಜ್ಯದ ನಾಗರಿಕರು ನವೀನವಾದ ಸಾಮಾಜಿಕ ವಿಧಾನವನ್ನು ಅಡ್ಡಿಯಿಲ್ಲದೆ ಮೆಚ್ಚುಗೆಯಿಂದ ಸ್ವೀಕರಿಸುವಂತೆ ಪ್ರೇರೇಪಿಸಲು ಬೇಕಾದ ಪ್ರಕಟಣೆಯೂ ಇರತಕ್ಕದು. ಆದರೆ ವರ್ತಮಾನ ವಿಮರ್ಶೆಗಳಿಗಿಂತಲೂ ಹೆಚ್ಚು ಸುಲಭವಾಗಿ ಜಾಹೀರಾತಿನ ಕಾಲಂಗಳಲ್ಲಿ ಸರ್ಕಾರದ ವಿರುದ್ಧವಾದ ಪ್ರಚಾರವು ಆಗಾಗ ನಡೆಯುತ್ತಿರುವುದರಿಂದ, ಕಮ್ಯುನಿಸ್ಟ್ ರಾಜ್ಯಗಳ ಸರ್ಕಾರೀ ಒಡೆತನದ ವರ್ತಮಾನ ಪತ್ರಗಳ ಜಾಹೀರಾತು ಇಲಾಖೆಗಳ ಮೇಲೆ ಇದ್ದಂತೆ ಸೆನ್ಸಾರ್ ಪ್ರತಿಬಂಧವಿದ್ದೇ ಇತ್ತು, ಇದರ ಕಾರಣವಂತೂ ಸ್ಪಷ್ಟವಾಗಿದೆ.

ಜಾಹೀರಾತು ಇಲಾಖೆಯ ತನ್ನ ಕೆಲಸವನ್ನು ಸ್ಕಾಲ್ಸ್ಕಿ ಮೆಚ್ಚಿದ್ದ. ಅದು ಹೆಚ್ಚು ಕಷ್ಟವಿರಲಿಲ್ಲ : ಅದು ಬೇಸರವನ್ನು ಹುಟ್ಟಿಸುತ್ತಿರಲಿಲ್ಲ. ಅವನಿಗೆ ಸಂಬಳವೂ ಸಾಕಷ್ಟು ದೊರೆಯುತ್ತಿತ್ತು. ವಿಶ್ರಾಂತಿಗೂ ಕೊರತೆಯಿರಲಿಲ್ಲ. ಏಕೆಂದರೆ ಸ್ವತಃ ತಮ್ಮಿಂದ ನಿರ್ಮಿತವಾದ " ಕಾರ್ಮಿಕರ ರಾಜ್ಯ"ಗಳನ್ನು ನಡೆಸುವಾಗ ಈ ಪದ್ಧತಿ ಇದ್ದೇ ಇದೆ-ನಿಜವಾದ ಕಾಯಕಷ್ಟದ ಶ್ರಮಪಡುವ ವೇದನೆಯನ್ನುಂಟುಮಾಡುವ ಕೆಲಸವನ್ನು ಕಾರ್ಮಿಕರಿಂದಲೇ

ಮಾಡಿಸಲಾಗುತ್ತದೆ. ಅವರಿಗೆ ಹದಿನೆಂಟು, ಇಪ್ಪತ್ತು ಕಾಸುಗಳಷ್ಟು ತಡೆಯಿಲ್ಲದೆ ದುಡಿದುದಕ್ಕೆ ಮರ್ಯಾದೆ ದೊರಕುತ್ತದೆ, ಮನ್ನಣೆ ಸಿಗುತ್ತದೆ. ಆದರೆ ಬೌದ್ಧಿಕ ಶ್ರಮಜೀವಿಗೆ ತಾನು ಕಾರ್ಮಿಕ. ನನ್ನಂತೆ ಕೆಳತರಗತಿಯವನೆಂದು ಗೊತ್ತಿರುವುದರಿಂದ, ಅವನು ಎಂದೂ ಹೀಗೆ ಅವಧಿ ಮೀರಿ ದುಡಿಯುವುದಿಲ್ಲ. ಅವನು ಕೆಲಸವನ್ನು ಕೆಲಸಗಾರರಿಗೆ ಬಿಟ್ಟುಕೊಟ್ಟು, ತನಗೆ ಅನುಕೂಲವಾಗುವಷ್ಟೇ ಸಮಯ ಕೆಲಸಮಾಡುತ್ತಾನೆ.

ಟೀಕಿಸುವ, ತಪ್ಪನ್ನು ಹುಡುಕುವ ಹಾಗೂ ಯೋಗ್ಯತೆ ವಿಷಯ ಹಾಗೆ ಹೀಗೆ ಎಂದು ವಾದಿಸುವ ದುರಾಸೆ ಅವನಿಗಿಲ್ಲದಿರುತ್ತಿದ್ದರೆ ಸ್ಕಾಲ್ಸ್ಕಿಗೆ ನಿಜವಾಗಿಯೂ ಉತ್ತಮ ಜೀವನವನ್ನು ಸಾಗಿಸಬಹುದಿತ್ತು. ಅವನಿಗೆ ಅಷ್ಟರೊಳಗೇ ತೊಂದರೆಯಲ್ಲಿ ಸಿಕ್ಕಿ ಬಾಳದಂತೆ ಎಚ್ಚರಿಕೆ ವಹಿಸುವ ವಿಷಯದಲ್ಲಿ ಸಾಕಷ್ಟು ಅನುಭವವಾಗಿರಬೇಕೆಂದು ಇತರರಿಗೆ ಯೋಚಿಸುವ ಅವಕಾಶವಿತ್ತು. ಏಕೆಂದರೆ, ಕಲ್ಲಿದ್ದಲನ್ನು ಅಗೆಯುವುದು ಎಂದೂ ಸುಲಭದ ಕೆಲಸವಲ್ಲ, ರಾಜಕೀಯ ಕೈದಿಗಳಿಗಂತೂ ಅದು ನರಕ ಜೀವನವೇ ಸರಿ.

ಆದರೆ ಸ್ಕಾಲ್ಸ್ಕಿ ತನ್ನಷ್ಟಕ್ಕೆ ಸುಮ್ಮನೆ ಇರಲಾರ. ಅವನು ಸರ್ಕಾರದ ಲೋಪ ದೋಷಗಳನ್ನು ಹುಡುಕಿ ಅವುಗಳನ್ನು ಇತರರ ಗಮನಕ್ಕೆ ತಂದ; ಅವನು ಸರ್ಕಾರವನ್ನು ದೂರತೊಡಗಿದ. ಅದರೊಂದಿಗೆ ಚರ್ಚಿಸಲ ಸಾಧ್ಯವಾದ ವಾದಗಳನ್ನು ಮಾಡತೊಡಗಿದ. ಅವನು, "ಇದನ್ನು ಮುದ್ರಿಸಲು ಸಾಧ್ಯವಿಲ್ಲ!" ಎಂದು ಇಲಾಖೆಯು ಮುದ್ರಿಸಲು ಆಜ್ಞೆಯಿತ್ತ ಸಾಹಿತ್ಯದ ವಿರುದ್ಧ ಹೇಳುತ್ತಿದ್ದ. ಕೊನೆಗೆ ಪೋಲೀಸರಿಗೆ ತಡೆಯಲಸಾಧ್ಯವಾದ ಪೀಡೆಯನ್ನೀಯುವ ವ್ಯಕ್ತಿಗೆ ಎಷ್ಟು "ರಾಜಕೀಯ ಶಿಕ್ಷಣ"ವನ್ನಿತ್ತರೂ ಅವನೆಂದೂ ನಂಬಿಗಸ್ಥನಾದ ಬಂಧುವಾಗಲಿಕ್ಕಿಲ್ಲವೆಂದು ಖಚಿತವಾಯಿತು. ಆದ್ದರಿಂದ ಅವರು, ಅವನಿಂದ ಕಮ್ಯುನಿಸ್ಟ್ ರಾಜ್ಯದ ಬೆಳವಣಿಗೆಗೆ ತೊಂದರೆಯಾಗದಂತೆ ಅವನನ್ನು ಸುರಕ್ಷಿತ ಸ್ಥಾನದಲ್ಲಿಡಲು ನಿಶ್ಚಯಿಸಿದರು. ಅವನನ್ನು ಬಂಧಿಸಲು ಗುಪ್ತ ರಾಜಕೀಯ ಪೋಲೀಸರಿಗೆ ಆಜ್ಞೆ ಕೊಟ್ಟಿದ್ದರು. ಈಗ ಜಾಹೀರಾತು ಸಾಹಿತ್ಯದ ಸೆನ್ಸಾರ್ ಆಗಿರುವ ಈ ನ್ಯಾಯಶಾಸ್ತ್ರದ ವಿದ್ಯಾರ್ಥಿಯಾಗಿದ್ದವನನ್ನು ಹುಡುಕುವುದು ಅವರಿಗೆ ಕಷ್ಟವಾಗಲಿಲ್ಲ. ಒಂದು ಕಾರಿನಲ್ಲಿ, ಸಾಮಾನ್ಯ ಉಡುಪುಗಳನ್ನು ಧರಿಸಿದ್ದ ಇಬ್ಬರು ಪೋಲೀಸು ಅಧಿ

ಕಾರಿಗಳು ಬಂದು ಸ್ಕಾಲ್ಸಿಕ್ಕಿಯನ್ನು ಕರೆದು ಕಾರಿನೊಳಗೆ ಹಿಂದುಗಡೆ ಕುಳಿತು ಕೊಳ್ಳಲು ಗಂಭೀರವಾಗಿ ಆಜ್ಞೆ ಮಾಡಿದರು.

ಕಾರು ಪ್ರೇಗಿನ ಹೊರಗೆ ವಿರಳವಾದ ಮನೆ ಮಠಗಳಿರುವ ಪ್ರದೇಶಕ್ಕೆ ಹೋಯಿತು. ಪೋಲೀಸ್‌ರಿಬ್ಬರೂ ತಮ್ಮ ಕೈದಿಯನ್ನೇ ಹಲವು ತಾಸುಗಳ ವರೆಗೆ ನೋಡುತ್ತಾ ಇದ್ದರು. ಡ್ರೈವರನಿಗೆ ಒಂದು ಕಡೆಯಲ್ಲಿ ಮೂತ್ರಶಂಕೆ ಮಾಡಬೇಕಿತ್ತು. ಅವನು ಹಾಗೆಂದು ಒರಟು ಧ್ವನಿಯಲ್ಲಿ ಅಧಿಕಾರಿಗಳೊಡನೆ ಹೇಳಿದ. ಹಾಗೆ ಹೇಳಿದುದರಿಂದ ಸ್ಕಾಲ್ಸಿಕ್ಕ ಬದುಕಿದ.

ಏಕೆಂದರೆ ಕಾರು ನಿಂತೊಡನೆ ಸ್ಕಾಲ್ಸಿಕ್ಕ ಹಿಂದಿನಿಂದ ಬಾಗಿಲನ್ನು ತೆರೆದು ಓಡಿದ.

ಅವನು ಒಳ್ಳೆಯ ಚತುರ. ಅತ್ತಿತ್ತ ಓಡುತ್ತ ಸಮೀಪದ ಒಂದು ಗೋಡೆಯ ಬಳಿಗೆ ಹೋದ; ಅದನ್ನು ಹತ್ತಿ ಹೇಗೋ ಮೇಲೇರಿ ಆಚೆ ಬದಿಗೆ ಹಾರಿದ.

ಅದು ಸ್ಮಶಾನದ ಗೋಡೆಯಾಗಿತ್ತು. ಗುಪ್ತ ಪೋಲೀಸರು ಅದೇ ದಾರಿಯಾಗಿ ಬರಲಿಲ್ಲ. ಅವರು ಸ್ಮಶಾನದ ದ್ವಾರದ ಬಳಿಗೆ ಹೋಗಿ ಅದರ ಕಬ್ಬಿಣದ ಗೇಟನ್ನು ತೆರೆದು ಓಡುತ್ತಿದ್ದ ಕೈದಿಯ ಮೇಲೆ ಒಂದೇ ಸಮನೆ ಗುಂಡು ಹಾರಿಸಲಾರಂಭಿಸಿದರು.

ಅಲ್ಲಿ ಹೆಣಗಳನ್ನು ಹೂತಿದ್ದ ಗೋರಿಗಳ ಮೇಲೆ ನಿಲ್ಲಿಸಿದ್ದ ಕಲ್ಲುಗಳ ಮರೆಯಲ್ಲಿ ಸ್ಕಾಲ್ಸಿಕ್ಕ ನಿಂತ. ಅವನು ಯಾವ ಸಂದರ್ಭದಲ್ಲೂ ಬೇಗನೆ ನಿರ್ಧಾರವನ್ನು ಮಾಡುವುದರಲ್ಲಿ ಚತುರ. ಗುಂಡುಗಳು ಹಾರುವಾಗ ಗೋರಿಗಳ ಮೇಲಿದ್ದ ಕಲ್ಲುಗಳ ಚೂರುಗಳು ಕೆಳಗೆ ಬೀಳುತ್ತಿದ್ದುವು. ಅಲ್ಲಿದ್ದ ಶಿಲುಬೆಯ ಗುರುತುಗಳ ಮೇಲೆ, ವಸ್ತ್ರದಿಂದ ಮುಚ್ಚಿದ ಪಾತ್ರೆಗಳ ಮೇಲೆ ಹೂ ಬಳ್ಳಿಗಳ ಮೇಲೆ ಎಲ್ಲ ಗುಂಡುಗಳು ಸಿಡಿದುವು. ಆದರೆ ಅವು ಸ್ಕಾಲ್ಸಿಕ್ಕಯನ್ನು ಮುಟ್ಟಲಿಲ್ಲ.

ಸ್ಮಶಾನದಿಂದಾಚೆಗೆ ದಟ್ಟವಾದ ಕಾಡುಗಳಿಂದ ಕೂಡಿದ ಊರಿತ್ತು. ಸ್ಕಾಲ್ಸಿಕ್ಕ ಅದರೊಳಗೆ ಓಡಿದ. ಓಡಿ ಓಡಿ ಆಯಾಸವಾದೊಡನೆ ಅವನು ನಡೆಯತೊಡಗಿದ, ಕೊನೆಗೆ ಅವನಿಗೆ ವೇದನೆಯಿಂದ ಹೆಜ್ಜೆ ಹಾಕುವುದೇ ಕಷ್ಟವಾಯಿತು. ಅವನು ಆಗ ಅವನನ್ನು ಹಿಂಬಾಲಿಸುತ್ತಿರುವವರಿಂದ

ಸುಮಾರು ಇಪ್ಪತ್ತು ಮೈಲುಗಳಷ್ಟು ದೂರಕ್ಕೆ ಬಂದಿದ್ದ. ತನ್ಮಧ್ಯೆ ಒಂದು ಹೊಳೆಯನ್ನು ದಾಟಿ— ನಾಯಿಗಳಿಗೆ ಅವನು ಹೋದ ದಾರಿ ತಿಳಿಯದಂತೆ ಚಳಿಯಿಂದ ನಡುಗುತ್ತಿದ್ದ. ಮೈಯೆಲ್ಲಾ ನೋಯುತ್ತಿತ್ತು. ಮನಸ್ಸಿನಲ್ಲಿ ಗೊಂದಲವಾಗುತ್ತಿತ್ತು. ಅಂದಿನ ರಾತ್ರಿಯನ್ನು ಅವನು ಎತ್ತರದ ಮರವೊಂದರ ತುದಿಯಲ್ಲಿ ಕುಳಿತು ಕಳೆದ. ಬೆಳಗಾಗುವಾಗ ಅದರಿಂದಿಳಿದು ಮೆಲ್ಲನೆ ಸಮೀಪದಲ್ಲಿದ್ದ ಒಂದು ಸಣ್ಣ ಪೇಟೆಗೆ ಕುಂಟುತ್ತ ಹೋದ. ಬೇಸಾಯಗಾರರು ಆಗ ಹೊಲಗಳ ಕಡೆಗೆ ಹೋಗುತ್ತಿದ್ದರು. ಅಂಗಡಿಯವರು ಬಾಗಿಲುಗಳನ್ನು ತೆರೆಯುತ್ತಿದ್ದರು.

ಅವನ ಜೇಬಿನಲ್ಲಿ ಸ್ವಲ್ಪ ಹಣವಿತ್ತು. ಅದರಿಂದ ಫಲಹಾರ ತೀರಿಸಿ, ಎಗರ್ ಪಟ್ಟಣಕ್ಕೆ ಒಂದು ಟಿಕೇಟು ಪಡಕೊಂಡ. ಎಗರ್ ಪಟ್ಟಣದಲ್ಲಿ ಜೆಕೊಸ್ಲೋವಾಕಿಯಾದಲ್ಲೇ ಒಳ್ಳೆಯದಾಗಿ ಸಂಘಟಿತವಾಗಿದ್ದ ಪ್ರತಿಭಟನಾದಳವೊಂದರೊಡನೆ ಸಂಪರ್ಕ ಬೆಳೆಸಿದ.

ಸ್ಕಾಲ್ಸ್ಕಿಯನ್ನು ಅಡಗಿಸುವುದು ಸುಲಭದ ಕೆಲಸವಾಗಿರಲಿಲ್ಲ. ಪೇಟೆಯ ಅಂಗಡಿ ಇಲ್ಲವೇ ಕೋಣೆಗಳಲ್ಲಾಗಲೀ, ಹಳ್ಳಿಯ ಗುಡಿಸಲುಗಳಲ್ಲಾಗಲೀ ಸುಮ್ಮನೆ ಅಡಗಿ ಕುಳಿತುಕೊಳ್ಳುವುದು ಅವನಿಗೆ ಹೆಚ್ಚು ಕಡಿಮೆ ಅಸಾಧ್ಯವಾಗಿತ್ತು. ಆದರೆ ಅವನನ್ನು ಗುರಿತಿಸುವುದೂ ಅಷ್ಟೊಂದು ಕಷ್ಟವಿರಲಿಲ್ಲ. ಅವನ ವರ್ಣನೆಯನ್ನು ಓದಿದರೆ ಸಾಕಿತ್ತು. ಅವನನ್ನು ಸರಿಯಾಗಿ ಹೋಲುವ ಅವನ ಭಾವಚಿತ್ರವೊಂದು ಪೋಲೀಸರೊಡನೆ ಇತ್ತು. ಅಲ್ಲದೆ ಅವನ ಚಿತ್ರದೊಡನೆ ಅವನ ವರ್ಣನೆಯನ್ನು ಬರೆದು ಮುದ್ರಿಸಿದ ನೋಟೀಸುಗಳನ್ನು ಜೆಕೊಸ್ಲೋವಾಕಿಯಾದಲ್ಲಿರುವ ಅರೆವಾಸಿ ಪೋಲೀಸು ಠಾಣೆಗಳಲ್ಲೂ, ಸಾರ್ವಜನಿಕ ಸಭೆ ಕೂಡುವ ಸ್ಥಳಗಳಲ್ಲೂ ಅಂಟಿಸಲ್ಪಟ್ಟಿದ್ದುವು.

ಒಂದು ವಿಧದಲ್ಲಿ ಸ್ಕಾಲ್ಸ್ಕಿಯು ಲೊಸ್ಕೊಟ್‌ಗಿಂತ ಹೆಚ್ಚು ಅದೃಷ್ಟವಂತನಾಗಿದ್ದನು. ಲೊಸ್ಕೊಟ್ ಭೂಗತನಾದ ಬಳಿಕ, ಸಾಮಾನ್ಯ ಜೀವನ ವಿಧಾನಗಳ ಸಂಬಂಧವನ್ನೇ ಕಳೆದುಕೊಂಡಿದ್ದ. ಆದರೆ ಸ್ಕಾಲ್ಸ್ಕಿ, ಭೂಗತ ಪಂಗಡಕ್ಕೆ ಲೊಸ್ಕೊಟ್‌ಗಿಂತ ಹೆಚ್ಚು ಅಪಾಯಕಾರಿಯಾಗಿದ್ದ. ಅವನಿಗೆ ಪತ್ರಗಳು ಬರುತ್ತಿದ್ದುವು— ಅವೂ ಪ್ರಣಯ ಪತ್ರಗಳು; ಅವುಗಳಲ್ಲಿ ಸ್ಕಾಲ್ಸ್ಕಿಯು ವಿಳಾಸ ಬರೆಯುತ್ತಿದ್ದಿಲ್ಲ.

ಶ್ರೀಮತಿ ಟ್ರ್ರಿಕ್ಸಾ ಆ ಕಾಗದಗಳನ್ನು ಬರೆದು ಎಗರ್ ಅಂಚೆ ಕಟ್ಟೆಯಿಂದ ಕಳುಸುತ್ತಿದ್ದಳು. ಟ್ರಿಕ್ಸಾಸಿಗೆ ಕೂಡಾ ಸ್ವತಃ ಕಾಗದ ಬರೆಯುವ ಧೈರ್ಯವಿರಲಿಲ್ಲ. ಅವನು ಆಗಲೇ ಅಧಿಕಾರಿಗಳ ಗಮನಕ್ಕೆ ಬಂದಿದ್ದನಲ್ಲದೆ, ಅವನ ಕೈ ಬರಹದ ಗುರುತೂ ಅವರಿಗೆ ತಿಳಿದಿತ್ತು. ಸ್ಕಾಲ್ಸ್ಕಿಯೊಡನೆ ಪತ್ರವ್ಯವಹಾರ ಮಾಡುವಾಗ ಶ್ರೀಮತಿ ಟ್ರ್ರಿಕ್ಸಾ ಕೂಡಾ ತನ್ನ ಕೈಬರಹವನ್ನು ಬದಲಾಯಿಸುತ್ತಿದ್ದಳು.

ಯಾರೋ ಒಬ್ಬ ಫ್ರಾಂಟಿಸೆಕ್ ನೊವೊಟ್ನೆ ಎಂಬವನಿಂದ ಪ್ರೇಗಿನಲ್ಲಿದ್ದ ಅವನ ಪ್ರಿಯತಮೆ ಅನ್ನಾ ಹೊಮೊಲ್ಕಳಿಗೆ ಆ ಪತ್ರಗಳು ಬರೆಯಲ್ಪಡುತ್ತಿದ್ದುವೆಂದು ಅವುಗಳಲ್ಲಿ ಸೂಚಿಸಲ್ಪಡುತ್ತಿತ್ತು. ಗಂಡಸರ ಕೈಬರಹದ ಹಾಗೆಯೇ ಶ್ರೀಮತಿ ಟ್ರ್ರಿಕ್ಸಾ ಆ ಕಾಗದಗಳನ್ನು ಬರೆಯುತ್ತಿದ್ದಳು. ಅವಳ ನಿತ್ಯದ ಕೈ ಬರಹಕ್ಕೂ ಅದಕ್ಕೂ ಏನೂ ಸಾಮ್ಯವಿರಲಿಲ್ಲ.

ಅನ್ನಾ ಹೊಮೊಲ್ಕ ಕಲ್ಪಿತ ವ್ಯಕ್ತಿಯಾಗಿರಲಿಲ್ಲ. ಅವಳು ಸಹಜವಾಗಿಯೂ ಇದ್ದಳು— ಫ್ರಾಂಟಿಸೆಕ್ ನೊವೊಟ್ನೆ ಎಂಬ ಹೆಸರು ಮಾತ್ರ ಶುದ್ಧ ಕಲ್ಪನೆ. ಅನ್ನಾ ಪ್ರತಿಭಟನೆಯ ಭೂಗತ ಗುಂಪಿನ ಚತುರ ಕಾರ್ಯಕರ್ತೆಯಾಗಿದ್ದಳು. ಸ್ಕಾಲ್ಸ್ಕಿಗೆ ಅವಳ ಪತ್ರಗಳು ತಲಪುವಂತೆ ನೋಡಿಕೊಳ್ಳುವುದು— ಅವನ ವಿಷಯ ಅವಳಿಗೇನೂ ಗೊತ್ತಿರಲಿಲ್ಲ— ಅವಳ ಕರ್ತವ್ಯಗಳಲ್ಲೊಂದಾಗಿತ್ತು.

ಸ್ಕಾಲ್ಸ್ಕಿ ಬ್ರೆಡ್ ಪಡಕೊಳ್ಳಲು ಹೋಗಿ ಸಿನಿಮಾ ನೋಡಿ ಬಂದ ರಾತ್ರಿಯ ಎರಡು ದಿನಗಳ ಹಿಂದೆ ಅನ್ನಾ "ಫ್ರಾಂಟಿಸೆಕ್ ನೊವೊಟ್ನೆ"ಯು ಅವನ "ಪ್ರೇಯಸಿ"ಗೆ ಬರೆವ ಪತ್ರವನ್ನು ಸ್ಕಾಲ್ಸ್ಕಿಗೆ ಕೊಟ್ಟಿದ್ದಳು. ಅದು ಕೊನೆಯ ಪತ್ರವಾಗಿತ್ತು.

ಅದರಲ್ಲಿ ಮಧುರವಾದ ಸ್ನೇಹವು ವ್ಯಕ್ತವಾಗಿತ್ತು. ಅಲ್ಲದೆ ಸ್ಕಾಲ್ಸ್ಕಿಯು ಒಂದು ವರ್ಷದಿಂದ ಕಾಯುತ್ತಿದ್ದ ಸುದ್ದಿಯೂ ಅದರಲ್ಲಿದ್ದುದನ್ನು ಕಂಡು ಅವನು ಬೆಚ್ಚಿಬಿದ್ದಿದ್ದ. ಆಗ ಅವನಿಗೆ ಉಂಟಾಗಿದ್ದ ಹತಾಶೆಯ ಕಳವಳ ಲೊಸ್ಕೊಟ್‌ನಿಗೆ ಕೂಡಾ ತಿಳಿಯಲಿಲ್ಲ.

ಅದರಲ್ಲಿ ಹೀಗೆ ಬರೆದಿತ್ತು: "ನನ್ನ ಪ್ರೀತಿಯ ಅನ್ನಾ ನಾನು ಎರಡು ವಾರಗಳ ರಜೆಯನ್ನು ಹೇಗೋ ಕಾರ್ಖಾನೆಯಿಂದ ಪಡೆದಿದ್ದೇನೆ. ನಿಜವಾಗಿಯು ಇದು ವಿಚಿತ್ರವಲ್ಲವೆ, ಪ್ರೇಯೆ! ಮತ್ತೆ ನನ್ನ ರಜೆ ನಾಳದ್ದಿನಿಂದ

ಆರಂಭವಾಗುತ್ತದೆ. ನಾವು ಹೀಗೆ ಹದಿನೈದು ದಿನದ ವರೆಗೆ ಒಟ್ಟಾಗಿರ ಬಹುದು. ನನ್ನ ಪ್ರೀತಿಯ ಅನ್ನಾ, ಅದನ್ನು ಯೋಚಿಸು! ನಿನ್ನನ್ನು ಮರಳಿ ನೋಡಬೇಕೆಂದು ನಾನು ಎಷ್ಟು ಕಾತರಪಡುತ್ತೇನೆಂದು ನಿನಗೆ ಗೊತ್ತಿಲ್ಲ. ನಿನ್ನನ್ನು ನನ್ನ ತೋಳ ತಕ್ಕೆಯಲ್ಲಿ ಸೇರಿಸಿ, ನಿನ್ನ ಬಾಯಿ ಯನ್ನು ಮುದ್ದಿಸಲು ನಾನು ಅದೆಷ್ಟು ಆತುರ ಪಡುತ್ತಿದ್ದೇನೆ! ನಿನ್ನನ್ನು ಪುನಃ ನೋಡುವವರೆಗೆ ನನಗೆ ಕಾಯಲು ಸಾಧ್ಯವೇ ಇಲ್ಲ. ನನ್ನ ಪ್ರಿಯೆ ಕೂಡಲೇ ಬಾ...."

ಸ್ಕಾಲ್ಸಿಕ್ಕ ಬಹಳ ಚತುರತೆಯಿಂದ, ಈ ಕೇಳಿಕೆಯನ್ನು ನಡೆಸಿಕೊಟ್ಟ. ಆದುದರಿಂದ ಈಗ ಅವನು ಫ್ರಾಂಜೆನ್ಸ್ ಬಾಡ್‌ನ ಟ್ರುಕ್ಸಾನ ಮನೆಸೇರಿದ್ದ. ತನ್ನ ದೇಶದ ಹೊರಗೆ ಕಳುಹಿಸಲು ಮುಂದಿನ ಉಪಾಯ ಯಾವುದೆಂದು ಕಾಯುತ್ತಲಿದ್ದ.

ಮಾನವೀಯ ಘನಸ್ಥಿಕೆ ಮತ್ತು ಆದರಗಳನ್ನೊಳಗೊಂಡ ಸ್ವಾತಂತ್ರ್ಯದ ನವಜೀವನದ ಉದಯವನ್ನು ಅವನು ನಿರೀಕ್ಷಿಸುತ್ತಿದ್ದ.

ಆ ಕತ್ತಲೆ ಅಡುಗೆ ಕೋಣೆಯಲ್ಲಿ ಅವರಿಬ್ಬರೂ ತಮ್ಮ ತಮ್ಮ ಮನಸ್ಸಿಗೆ ಕಂಡಂತೆ ಕಳವಳ ಪಡುತ್ತಿದ್ದರು; ಇಬ್ಬರೂ ತಮ್ಮ ಮನಸ್ಸಿಗೆ ಬಂದಂತೆ ಯೋಚಿಸುತ್ತಿದ್ದರು. ಇಬ್ಬರೂ ಆ ದೀರ್ಘಾವಧಿಯಲ್ಲುಂಟಾದ ತಮ್ಮ ಬೇಸರ ವನ್ನು—ವಿಷಾದಪೂರ್ವಕ—ವಿಮರ್ಶಿಸುತ್ತಿದ್ದರು. ಮರ್ಯಾದೆ, ಸ್ವಾಭಿ ಮಾನ, ಸಂಭಾವಿತತನ ಮತ್ತು ಸ್ವಾತಂತ್ರ್ಯಗಳನ್ನು ಅವರು ಅಲ್ಲಿ ಕುಳಿತು ಕೊಂಡು ಇದಿರುನೋಡುತ್ತಿದ್ದರು. ಅವರಲ್ಲಿ ಕುಳಿತುಕೊಂಡು ಜೀವನವನ್ನೇ ಇದಿರುನೋಡುತ್ತಿದ್ದರು...

ಸ್ಕಾಲ್ಸಿಕ್ಕ ಮತ್ತು ಲೊಸ್ಕೂಟ್ ಹೀಗೆ ಟ್ರುಕ್ಸಾನ ಮನೆಯಲ್ಲಿ ಕಾಯು ತ್ತಿದ್ದಾಗ, ಟ್ರುಕ್ಸಾ ಆ ರಾತ್ರೆ ಅನೇಕರಿಗೆ ನಿರ್ಣಾಯಕವಾಗುವಂಥಹ ಕೆಲಸ ದಲ್ಲಿ ಮಗ್ನನಾಗಿದ್ದ.

ಡಾಕ್ಟರ್ ಸ್ವೆಕ್ ಮತ್ತು ಟ್ರುಕ್ಸಾನನ್ನು ನೋಡುತ್ತಿದ್ದ ಗುಪ್ತಚಾರನು, ಟ್ರುಕ್ಸಾ, ಡಾಕ್ಟರರನ್ನು ಬೀಳ್ಕೊಟ್ಟಬಳಿಕ ತನ್ನ ಮೋಟರ್ ಸೈಕಲಿನಬಳಿಗೆ ಹೋಗುವುದನ್ನು ನೋಡಿದನು. ಟ್ರುಕ್ಸಾ ಮೋಟರ್ ಸೈಕಲನ್ನು ಮುಚ್ಚಿದ್ದ ಟರ್ಪುಲಿನ್ ಕವಚವನ್ನು ತೆಗೆದು ಮಡಚಿ ನೆಲದಮೇಲಿಟ್ಟು, ಸ್ಟಾರ್ಟರ್‌ನ್ನು

ಓಡುವಂತೆ ಮಾಡಿದನು. ಅದರ ಶಬ್ದ ಪ್ರತಿಧ್ವನಿಸಿತು. ಅದನ್ನು ಕೇಳು ತ್ತಿದ್ದ ಗುಪ್ತಚಾರ ಪ್ಲಾಸ್ಟ್ಸ ಡ್ವಾಪ್ಸ್ಕಿರ್‌ಗೆ, ಟ್ರಿಕ್ಸಾ ಅಂದು ರಾತ್ರಿ ಏನು ಮಾಡಲಿದ್ದಾನೆ ಎಂದು ವಿಸ್ಮಯವಾಗದಿರಲಿಲ್ಲ

ಟ್ರಿಕ್ಸಾನ ಪರವಾಗಿ ಡಾಕ್ಟರ್ ವಾದಿಸಿದ್ದರೂ ಟ್ರಿಕ್ಸಾ ರಾಜಕೀಯ ದೃಷ್ಟಿಯಿಂದ ವಿಶ್ವಾಸಕ್ಕೆ ಅರ್ಹನಲ್ಲವೆಂದು ಆ ಗುಪ್ತಚಾರನಿಗೆ ಗೊತ್ತಿತ್ತು. ಡಾಕ್ಟರರನ್ನೂ ಟ್ರಿಕ್ಸಾನನ್ನೂ ಪರೀಕ್ಷಿಸಲು ಅವನನ್ನು ನೇಮಿಸಿರಲಿಲ್ಲ. ಆದರೆ ಟ್ರಿಕ್ಸಾ ಒಳ್ಳೆಯ ಕೆಲಸಗಾರನೆಂಬ ಪ್ರತೀತಿ ರೈಲ್ವೇ ಅಧಿಕಾರಿವರ್ಗದಲ್ಲಿತ್ತು ಎಂಬುದೂ ಡ್ವಾಪ್ಸ್ಕಿರ್‌ಗೆ ತಿಳಿದಿತ್ತು. ಆದ್ದರಿಂದಾಗಿ ಅವನಿಗೆ ಇತರರಿಗಿಂತ ಹೆಚ್ಚು ಸ್ವಾತಂತ್ರ್ಯವನ್ನು ಕೊಡುವುದಕ್ಕೆ ಕಾರಣವಿದೆಯೆಂದೂ ಅಧಿಕಾರಿಗಳು ನಂಬಿದ್ದರು.

ಟ್ರಿಕ್ಸಾ ಎಗರ್‌ಸಿಂದ ಪಿಲ್ಸೆನ್‌ಗೆ ಹೋಗುವ ರಸ್ತೆಯಲ್ಲಿ ಹೋಗುತ್ತಿದ್ದ. ಅವನು ಒಡ್ರಾವಾ ನದಿಯನ್ನು ದಾಟಿ, ಮೆರಿಯೆನ್ ಬಾಡನ್ನು ಸುತ್ತಿ, ಪ್ಲಾನಾ, ಸೆನೊರ್ಸಿನ್, ಸ್ಟಿಬ್ರೊ ಮತ್ತು ಚೌಸ್ಕಾಗಳನ್ನು ಹಾದು ಹೋಗು ವಾಗ ಅವನ ಮೋಟರ್ ಸೈಕಲಿನ ಶಬ್ದವನ್ನೂ, ದೀಪವನ್ನೂ ಕಾವಲು ದಳ ದವರು ಗಮನಿಸಿದರು. ಅವನನ್ನು ಹಿಂದೆಯೂ ಅವರು ನೋಡಿದ್ದರು. ಅವನ ವಿಷಯ ಕೇಳಿಯೂ, ತಿಳಿದಿದ್ದರು. ಏಕೆಂದರೆ, ಎಗರ್ ಪಟ್ಟಣದಿಂದ, ದ್ರಾಕ್ಷಾರಸ ತಯಾರಿಸುವ ಕೇಂದ್ರ ನಗರವಾದ ಪಿಲ್ಸೆನ್ ಕೇವಲ ಐವತ್ತಾರು ಮೈಲು ದೂರದಲ್ಲಿತ್ತು.

ಅವನ ಮೋಟಾರು ಸೈಕಲು ವೇಗವಾಗಿ, ಅವರನ್ನು ಹಾದು ಓಡಿ ಹೋಗುತ್ತಿದ್ದಾಗ ಅವರು "ಏನೋ ಅವಸರದಲ್ಲಿದ್ದಾನೆ!" ಎಂದು ಯೋಚಿ ಸಿದ್ದರು. ತಲೆಗೆ ಟೊಪ್ಪಿ ಹಾಕಿಕೊಂಡಿದ್ದ; ತಲೆಯು ಮೋಟಾರು ಸೈಕಲಿನ ಹ್ಯಾಂಡ್ಲ್‌ಬಾರ್‌ಗಳ ಮೇಲೆ ಬಾಗಿಕೊಂಡಿತ್ತು.

ಟ್ರಿಕ್ಸಾ ಅವಸರದಲ್ಲಿದ್ದ. ಭೂಗತ ಕಾರ್ಯಾಚರಣೆಯಲ್ಲಿ ಅವೇ ಮುಖ್ಯವಾದ ಅಂಶವೆಂದರೆ ಸಮಯವನ್ನು ತಪ್ಪದಿರುವುದು. ಪ್ರತಿಭಟ ನಾದಳದ ಪ್ರತಿಯೊಂದು ಚಟುವಟಿಕೆಯಲ್ಲೂ ಸಮಯಕ್ಕೆ ಸರಿಯಾಗಿ ಕೆಲಸ ಮಾಡುವುದು ಯಾವಾಗಲೂ ಸಾಧ್ಯವಿರಲಿಲ್ಲ—ಕೆಲವು ಸಂದರ್ಭಗಳಲ್ಲಿ ಅದು ಅಸಾಧ್ಯವಾಗಿತ್ತು; ಆದರೆ ಭೂಗತ ಕಾರ್ಯಕರ್ತನು ತನ್ನ ತತ್ವ ನಿಷ್ಠೆಯನ್ನು ಸರಿಯಾದ ಸಮಯವನ್ನನುಸರಿಸುವುದರ ಮೂಲಕ, ವ್ಯಕ್ತಪಡಿಸಬಹುದಿತ್ತು.

ಟ್ರ್ರಿಕ್ಸಾ ಎಕ್ಸಲರೇಟರನ್ನು ಎಷ್ಟು ದೂರ ಹೋಗುತ್ತದೊ, ಅಷ್ಟು ದೂರಕ್ಕೂ ದೂಡಿ ಸಮಯಕ್ಕೆ ಸರಿಯಾಗಿ—ದೇವರು ಮತ್ತು ಗೊಟ್ವಾಲ್ಡ್ ಮನಸ್ಸು ಮಾಡಿದರೆ—ಇರಬೇಕೆಂದಿದ್ದ !

ಅವನು ಎಲ್ಲಿಗೆ ಹೋದ, ಪಿಲ್ಸೆನ್‌ನಲ್ಲಿ ಯಾರನ್ನು ನೋಡಿದ, ಎಂಬುದು ಸದ್ಯ ರಹಸ್ಯದ ಸಂಗತಿ ; ಆದರೆ "ಮುಂದಾಳು"ವನ್ನು ನೇರವಾಗಿ ಕಂಡು ಮಾತಾಡುವಷ್ಟರ ಮಟ್ಟಿನ ವಿಶ್ವಾಸವನ್ನು ಗಳಿಸಿದ್ದ ಕೆಲವೇ ವ್ಯಕ್ತಿಗಳಲ್ಲಿ ಅವನೊಬ್ಬನು.

ಟ್ರ್ರಿಕ್ಸಾ ಸಕಾಲದಲ್ಲಿ ತಲುಪಿದ್ದ. ಸಭೆಯಲ್ಲಿ ಒಂದೆರಡು ಮಾತುಗಳಲ್ಲಿ ಪೀಠಿಕೆಯನ್ನು ಮುಗಿಸಿ ತನ್ನ ಇಂಗಿತವನ್ನು ಅವರಿಗೆ ತಿಳಿಸಿದ.

"ನಮಗೆ ಇನ್ನೊಂದು ದಾರಿಯೆಂದರೆ ಕೈದಿಗಳಾಗುವುದು ಮಾತ್ರ. ನಾವು ಜೆಕೊಸ್ಲೋವಾಕಿಯವನ್ನು ಕೂಡಲೇ ಬಿಡಬೇಕು...."

ಮುಂದಾಳು ಹುಬ್ಬುಗಂಟಿಕ್ಕಿದ. ಆಗ ತನ್ನ ನಿರ್ಧಾರ ಸರಿಯಾದುದು ದೆಂಬುದನ್ನು ಮುಂದಾಳು ತಿಳಿದನೆಂಬುದು ಟ್ರ್ರಿಕ್ಸಾನಿಗೆ ಅರ್ಥವಾಗಿತ್ತು. ಆದರೂ ಒಂದು ಸಮಸ್ಯೆಯಿತ್ತು ; ಮುಂದಾಳು ಅದನ್ನು ಎಲ್ಲರಿಗೂ ತಿಳಿಸಿದ.

"ನೀವು ಹೋದರೆ ರೈಲು-ಮತ್ತು ಹಡಗುಗಳ ಚಲಾವಣೆಯ ಕೆಲಸ ಯಾರು ಮಾಡುವುದು ? ಅಂಥ ಕೆಲಸಕ್ಕೆ ನಿಮ್ಮಷ್ಟು ನುರಿತವರು ಬೇರೆಯಾರೂ ನನಗೆ ತಿಳಿಯದು. ಅದು ಬಹಳ ಮುಖ್ಯವಾದ ಕೆಲಸವೆಂದು ಎಲ್ಲರಿಗೂ ಗೊತ್ತಿದೆ...."

ಟ್ರ್ರಿಕ್ಸಾ ಮುಂದಾಳುವಿನೆದುರು ತಲೆತಗ್ಗಿಸಿದ.

"ನಾನು ಅನಿವಾರ್ಯ ವ್ಯಕ್ತಿಯೆಂದು ನಿಮ್ಮಿಂದ ತಿಳಿದು ಹೆಮ್ಮೆ ಪಡುತ್ತೇನೆ, ಆದರೆ...ನಾನಲ್ಲ. ಯಾರು ಹಾಗೆ ತಾನು ಅನಿವಾರ್ಯ ಕೆಲಸಗಾರ ನೆಂದು ತಿಳಿದುಕೊಳ್ಳುತ್ತಾನೋ ಅವನು ಈ ಪರಿಸ್ಥಿತಿಯನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ನೀವು ನನ್ನಲ್ಲಿ ಕರುಣೆಯಿಟ್ಟು ನನ್ನ ಕೆಲಸವನ್ನು ಹೊಗಳಿದಿರಿ. ನನ್ನ ಹಾಗೆಯೇ ದೇಶಸೇವೆ ಮಾಡಬಲ್ಲ ವ್ಯಕ್ತಿಯೊಬ್ಬನನ್ನು ಈ ಮೊದಲೇ ಗೊತ್ತು ಮಾಡಿದ್ದೇನೆ.

"ಯಾರವ ?" ಎಂದು ಮುಂದಾಳು ತುಸು ಅಸಂತುಷ್ಟನಾಗಿಯೇ ಪ್ರಶ್ನಿಸಿದನು. ಟ್ರ್ರಿಕ್ಸಾನಂಥವರು—ಅವರು ತಮ್ಮ ಸ್ವಂತ ಯೋಗ್ಯತೆಯ ಕುರಿತು ಯಾವ ಅಭಿಪ್ರಾಯವನ್ನು ತಾಳಿದ್ದರೂ—ಸಿಗುವುದು ಅಪರೂಪ.

ಟ್ರ್ರಿಕ್ಸಾ ಒಬ್ಬನ ಹೆಸರನ್ನು ಹೇಳಿದ. ಅದನ್ನು ಕೇಳಿ ಮುಂದಾಳುವಿನ ಕಣ್ಣುಗಳು ಶುಭ್ರವಾಗಿ ಸಂತೋಷವನ್ನು ಸೂಚಿಸಿದುವು. ಕೋಣೆಯಲ್ಲಿದ್ದವರೆಲ್ಲರೂ ಆ ಸೂಚನೆಯನ್ನು ಒಪ್ಪಿದರು.

"ಅವನು ಆಗಬಹುದು, ನಿಮ್ಮ ಕೆಲಸವನ್ನು ನೋಡಿಕೊಳ್ಳಲು ಅವನಿಗೆ ತುಸು ತರಬೇತಿಯನ್ನು ನೀವು ಕೊಟ್ಟಿರಬೇಕಲ್ಲವೆ?" ಎಂದು ಹೇಳಿದನು.

"ಹೌದು, ಸ್ವಾಮಿ. ಅವನ ವಿಷಯದಲ್ಲಿ ನೀವು ಕಳವಳಪಡುವ ಅವಶ್ಯವಿಲ್ಲ. ಆದರೆ ನನ್ನ ಚಿಂತೆ....ಸರಿ, ನಾನು ಯಾಕೆ ಹೋಗಬೇಕು, ದೇಶದೊಳಗೆ ನನ್ನ ಸೇವೆ ಅದೇಕೆ ಈಗ ತತ್ಕಾಲಕ್ಕೆ ಕೊನೆಗೊಳ್ಳಬೇಕು ಎಂಬುದನ್ನು ಮೊದಲಾಗಿ ನಾನು ಹೇಳುತ್ತೇನೆ" ಎಂದನು.

ನೆರೆದಿದ್ದವರು ಕುರ್ಚಿಗಳನ್ನು ಮುಂದಕ್ಕೆಳೆದು ಕುಳಿತರು. ಡಾಕ್ಟರ್ ಸ್ಪೈಕ್‌ರ ಬಂಧನದ ಕತೆಯನ್ನು ಅವನು ಅವರಿಗೆ ಹೇಳಿದ. ಡಾಕ್ಟರರನ್ನು ಹಿಂಬಾಲಿಸಲು ವ್ಲಾಸ್ಟ್ಸ ಡ್ವಾಸ್ಕಿರ್ ಬಂದುದನ್ನೂ ತಿಳಿಸಿದ. ಟ್ರ್ರಿಕ್ಸಾ ಎಲ್ಲವನ್ನೂ ಹೇಳಿ ಮುಗಿಸಿದ ಬಳಿಕ ಮುಂದಾಳು ದೀರ್ಘ ಶ್ವಾಸ ಬಿಡುತ್ತ ಹೀಗೆಂದನು.

"ಡಾಕ್ಟರ್ ಸ್ಪೈಕ್ ಮತ್ತು ನೀವು, ಏನು ಮಾಡಿದ್ದರೂ, ಅಪಾಯಕ್ಕೊಳಗಾಗಿದ್ದೀರೆಂದು ತೋರುತ್ತದೆ. ನಿಮ್ಮಿಬ್ಬರನ್ನು ಅವರು ಕೊನೆಗೆ ಬಂಧಿಸಿವರೆ, ಲೊಸ್ಕೊಟ್, ಸ್ಕಾಲ್ಸ್ಕಿ ಮತ್ತು ಉಳಿದವರೂ ಸಿಕ್ಕಿ ಬೀಳುತ್ತಾರೆ. ಹೌದು .. ನೀವು ಪಲಾಯನ ಮಾಡಲೇಬೇಕು. ಕೂಡಲೆ.... ನೀವು ಏನೋ ನಿಮಗೆ ಕಳವಳವಿದೆಯೆಂದು ಈಗ ಹೇಳಿದಿರಲ್ಲ ..?"

ಟ್ರ್ರಿಕ್ಸಾ ಒಂದು ಕ್ಷಣ ಹುಬ್ಬು ಗಂಟಿಕ್ಕಿ "ನಾವು ಪಲಾಯನ ಮಾಡುವ ರೈಲುಬಂಡಿಯನ್ನು ನಡೆಸಲು ಯಾರಿದ್ದಾರೆ? ನಾನು... ನನ್ನು ಯೋಚಿಸಿದೆ," ಆದರೆ, ಅವನು ತಲೆಯಲ್ಲಾಡಿಸುತ್ತ, "ಅವನ ವಿಷಯದಲ್ಲಿ ನನಗೆ ಸಮಾಧಾನವಿಲ್ಲ....". ಮುಂದಾಳು ನಿರ್ಣಯಪೂರ್ವಕ, "ಕೊನ್ರ ಲಿಂಕಾ ರೈಲು ನಡೆಸುತ್ತಾನೆ" ಎಂದನು.

ಟ್ರ್ರಿಕ್ಸಾ ಅಸಮಾಧಾನದ ಆಶ್ಚರ್ಯದಲ್ಲಿ ಮುಂದಾಳುವನ್ನು ನೋಡಿದನು. ಅವನು ಸಿಳ್ಳು ಹಾಕಿದ.

"ಕೊನ್ರಲಿಂಕಾ—? ಕೊನ್ರಲಿಂಕಾ ಎಂದಿನಿಂದ ನಮ್ಮೊಡನೆ ಸೇರಿದ್ದಾನೆ ?" ಮುಂದಾಳು ನಗುತ್ತ ಟ್ರ್ರಿಕ್ಸಾನ ಭುಜ ತಟ್ಟಿದ.

"ಕರೆಲ್ ನಮ್ಮ ಬಲಗೈ ಏನು ಮಾಡುತ್ತಿದೆಯೆಂಬುದು ಹೆಚ್ಚಾಗಿ ನಮ್ಮ ಎಡಗೈಗೂ ಗೊತ್ತಿರುವುದಿಲ್ಲ...."

"ಆದರೆ.... ಕೊನ್ವಲಿಂಕಾ!"

"ನೀವು ಚಿಂತಿಸಬೇಕಾದ್ದಿಲ್ಲ. ಇಂಥ ಕೆಲಸಕ್ಕೆ ಕೊನ್ವಲಿಂಕಾ ಯೋಗ್ಯವಾದ ವ್ಯಕ್ತಿ: ನೀವು ಈ ವಿಷಯದಲ್ಲಿ ನನ್ನ ಮಾತನ್ನು ನಂಬಿ..."

"ನೀವು ಹಾಗೆನ್ನುವಾಗ, ನನಗೆ ಪೂರ್ಣ ಸಮಾಧಾನವಾಗಿದೆ. ಅದು ಮಾತ್ರ... ಸರಿ: ಅದು ನನಗೆ ಆಶ್ಚರ್ಯವಾಗಿ ಮಾತ್ರ ಕಂಡಿತು, ಅಷ್ಟೆ. ಅವರಿಗೆ ನೀವು ಹಾಗಾದರೆ ತಿಳಿಸುವಿರಾ, ಸ್ವಾಮಿ?"

"ಹೌದು ಕರೆಲ್. ನಾನು ತಿಳಿಸಿದ ಬಳಿಕ ಅವನೊಡನೆ ಎಲ್ಲವನ್ನೂ ತಿಳಿಸುವಿರಾ? ಈ ಉಪಾಯದ ವಿವರಗಳನ್ನೆಲ್ಲ ನೀವೇ ಯೋಚಿಸುವುದು ಒಳ್ಳೆಯದೆಂದು ನನಗೆ ತೋರುತ್ತದೆ."

ಟ್ರಿಕ್ಸಾ ತಲೆಯಲ್ಲಾಡಿಸಿದ. ಕೊನ್ವಲಿಂಕಾನನ್ನು ನಂಬಬಹುದೆಂದು ಮುಂದಾಳು ಅಭಿಪ್ರಾಯಪಟ್ಟರೆ ಅವನ ಅಡ್ಡಿಯಿರಲಿಲ್ಲ. ಆದರೆ ರೈಲು ಬಂಡಿಯ ನೀರಿನಪಾತ್ರೆಯಲ್ಲಿ ಅಡಗಿ ಕುಳಿತಿದ್ದ ಮನುಷ್ಯನಿಗೆ ದ್ರೋಹ ಮಾಡಿದ ಕೊನ್ವಲಿಂಕಾನ ಅಕೃತ್ಯದ ನೆನಪು ಮಾತ್ರ ಅವನಿಗೆ ಆಗದಿರಲಿಲ್ಲ. ಮುಂದಾಳು ಟ್ರಿಕ್ಸಾನನ್ನು ನೋಡುತ್ತಿದ್ದ. ಅವನ ಮುಖದಲ್ಲಿದ್ದ ಚಿಂತೆ ಮುಂದಾಳುವಿಗೆ ತಿಳಿಯಿತು. ಅವನೆಂದ,

"ಕರೆಲ್, ಚಿಂತಿಸಬೇಡಿ. ಈ ಸಲ ನಾನು ಆದದ್ದು ಆಗಲಿ ಎಂದು ಏನನ್ನೂ ದೈವೇಚ್ಛೆಗೆ ಬಿಡುವುದಿಲ್ಲ ..."

ಟ್ರಿಕ್ಸಾ ತಲೆಯಲ್ಲಾಡಿಸಿ, ಮುಂದಾಳುವಿನ ಕೈಯನ್ನು ಕುಲುಕಿದ.

"ನಿಮ್ಮ ತೀರ್ಮಾನದಮೇಲೆ ವಿಶ್ವಾಸವಿಡುತ್ತೇನೆ ಸ್ವಾಮಿ" ಎನ್ನುತ್ತ ಅಲ್ಲಿದ್ದವರನ್ನು ಬೀಳ್ಕೊಟ್ಟು ಕೋಣೆಯಿಂದ ಮೆಲ್ಲನೆ ಹೊರಗೆ ನಡೆದ.

* * * *

ಟ್ರಿಕ್ಸಾ ಪಿಲ್ಸೆನ್‌ನಲ್ಲಿದ್ದ ತನ್ನ ತಂದೆಯ ಮನೆಗೆ ಹೋಗಿ ಉಳಿದ ಸಮಯವನ್ನು ಅಂದು ಅಲ್ಲೇ ಕಳೆದ. ಟ್ರಿಕ್ಸಾನ ಕುಟುಂಬದಲ್ಲಿ ಅನ್ಯೋನ್ಯತೆಯಿತ್ತು. ತನ್ನ ತಂದೆ, ಹೆಂಡತಿ ಮತ್ತು ಮಕ್ಕಳೊಡನೆ ಅವನು ಸುಖದಿಂದ ಇದ್ದ. ಆದರೆ ಕೌಟುಂಬಿಕ ಬಾಂಧವ್ಯವಲ್ಲದೆ, ತಂದೆಯನ್ನು ಸಂದರ್ಶಿಸಲು ಅವನಿಗೆ ಇನ್ನೊಂದು ಕಾರಣವೂ ಇತ್ತು. ಗುಪ್ತ ಪೋಲೀಸನು, ಅವನನ್ನು ಡಾಕ್ಟರ್ ಸ್ಪೈಕ್‌ರನ್ನು ಬೀಳ್ಕೊಟ್ಟ ಬಳಿಕ ಅಂದು ಎಲ್ಲಿಗೆ ಹೋಗಿದ್ದನೆಂದು

ಪ್ರಶ್ನಿಸಿದರೆ, ಆಗ ಅವನು ಪಿಲ್ಸೆನ್‌ನಲ್ಲಿ ತನ್ನ ಹೆಂಡತಿ ಮಕ್ಕಳನ್ನು ನೋಡ ಹೋಗಿದ್ದೆನೆಂದು ಹೇಳಬಹುದಿತ್ತು. ಆ ಗುಪ್ತ ಕೂಟವು ಸೇರಿದ್ದ ಸ್ಥಳದ ವರೆಗೂ ಅವನನ್ನು ಯಾರಾದರೂ ಹಿಂಬಾಲಿಸದಿದ್ದರೆ, ಅವನು ಆ ಕೂಟದಲ್ಲಿ ಮುಂದಾಳುವಿನೊಡನೆ ಕಳೆದ ಅರ್ಧ ಗಂಟೆಯ ಕುರಿತು ಏನೂ ಹೇಳುವ ಆವಶ್ಯವಿರಲಿಲ್ಲ.

ಟ್ರ್ರಿಕ್ಸಾ ಮಧ್ಯರಾತ್ರಿ ಕಳೆದಬಳಿಕ ತನ್ನ ಮನೆಗೆ ಹಿಂದಿರುಗಿದ. ಆಗ ಕುತೂಹಲದಿಂದ ನರಳುವ ಲೊಸ್ಕೊಟ್ ಕೂಡಾ ಒಂದು ಕುರ್ಚಿಯಲ್ಲಿ ನಿದ್ದೆ ಹೋಗಿದ್ದ. ಸ್ಕಾಲ್ಸ್ಕಿ ಆರಾಮ ಕುರ್ಚಿಯಲ್ಲಿ ಸುಖವಾಗಿ ನಿದ್ರಿಸಿದ್ದ. ತನ್ನ ಕಾಲುಗಳಮೇಲೆ ಕಂಬಳಿಯೊಂದನ್ನು ಹೊದೆದುಕೊಂಡಿದ್ದ.

ಟ್ರ್ರಿಕ್ಸಾ ಸ್ವಲ್ಪ ಕಾಫಿ ಮಾಡಿ, ಅದನ್ನು ಮೂರು ಕಪ್‌ಗಳಲ್ಲಿ ಸುರಿ ದಾಗುವ ವರೆಗೆ ಅವರನ್ನು ಎಚ್ಚರಿಸಲಿಲ್ಲ.

ಲೊಸ್ಕೊಟ್‌ನ ಭುಜವನ್ನು ಅವನು ತಟ್ಟಿದೊಡನೆ ಲೊಸ್ಕೊಟ್ ಹೆದರಿಕೆ ಯಿಂದ ಬೆಚ್ಚಿಬಿದ್ದನು. ನಡುಗುತ್ತ ಮರಳಿ ಕುರ್ಚಿಯಲ್ಲೇ ಬಿದ್ದು ಕೊಂಡನು. ಸ್ಕಾಲ್ಸ್ಕಿಯನ್ನು ಕುಲುಕಿಸಲು, ಅವನು ಕಣ್ದೆರೆದು, ಆಕಳಿಸುತ್ತ "ಏನು ಈಗಾಗಲೇ ಬೆಳಗಾಯಿತೆ? ನಮ್ಮನ್ನು ನಿದ್ರಿಸಲು ಬಿಟ್ಟುದು ಒಳ್ಳೆಯದಾಯಿತು. ಟ್ರ್ರಿಕ್ಸಾ!" ಎಂದನು.

ಟ್ರ್ರಿಕ್ಸಾ ನಸುನಕ್ಕು ಮೇಜಿನ ಮೇಲಿದ್ದ ಕಾಫಿಯ ಕಪ್‌ಗಳನ್ನು ಅವರಿಗೆ ತೋರಿಸಿದನು.

"ಸರಿ... ಬೆಳಗಾಯಿತು, ಖಂಡಿತ. ಆದರೆ ಎರಡು ಗಂಟೆಯಾಗಿ ಕೆಲವು ನಿಮಿಷಗಳು ಕಳೆದುವಷ್ಟೆ. ನಿಮ್ಮ ಕಾಫಿ ಕುಡಿಯಿರಿ: ಮತ್ತೆ ನಾನು ಹೇಳುವುದನ್ನು ಶಾಂತಪಡಿಸಿ; ಮತ್ತೆ ನಾನು ಹೇಳುವುದನ್ನು ಕೇಳಿ. ಇಲ್ಲಿ ಒಂದು ಉಪಾಯವಿದೆ....

* * * *

ಅದು ಸೆಪ್ಟೆಂಬರ್ 4 ರ ಮುಂಜಾನೆ: ಪಿತೂರಿಗಾರ ಮುಖಂಡರ ಸಭೆ ಇನ್ನೆರಡು ದಿನಗಳ ಬಳಿಕವಾದರೆ ಸೆಪ್ಟೆಂಬರ್ 6 ರಂದು ಟ್ರ್ರಿಕ್ಸಾನ ಮನೆ ಯಲ್ಲೇ ಜರಗಲಿತ್ತು. ಪಿಲ್ಸೆನ್‌ನಿಂದ ಟ್ರ್ರಿಕ್ಸಾ ಹಿಂದಿರುಗಿದ ಬಳಿಕ ಲೊಸ್ಕೊಟ್ ಇಲ್ಲವೇ ಸ್ಕಾಲ್ಸ್ಕಿ ಅವನ ಮನೆಯಿಂದ ಹೊರಗೆ ಹೋಗಿರಲಿಲ್ಲ. ಅವರೂ, ಡಾಕ್ಟರ್ ಸ್ಪೆಕ್, ಕೊನ್ಸಲಿಂಕಾ ಮತ್ತು ಅವರ ಹೆಂಡತಿ ಅಲ್ಲಿ ಅಂದು

ಸೇರಿದ್ದರು. ಟ್ರೊಕ್ಸಾನಿಗೆ ತನ್ನ ಅದೇನೋ ಸಂಕುಚಿತವರ್ತನೆ ತಿಳಿಯದಿರಲಿಲ್ಲ. ಕೊನ್ನಲಿಂಕಾನ ಪರಿಚಯ ಅವನಿಗೆ ಹಲವು ವರ್ಷಗಳಿಂದ ಇತ್ತು. ಅವರಿಬ್ಬರೂ ಆಗಾಗ ಸಂಭಾಷಣೆಯನ್ನೂ ಮಾಡುತ್ತಿದ್ದರು. ಆದರೆ ಯಾವಾಗಲೂ ಅವರು ಮಾತಾಡುತ್ತಿದ್ದುದು ಉಪಚಾರದ ಮಾತುಗಳೇ ಆಗಿದ್ದುವು. ಯಾವಾಗಲಾದರೂ ರಾಜಕೀಯದ ಬಳಿಗೆ ಮಾತು ಸಾಗುತ್ತಿದ್ದರೆ ಕೊನ್ನಲಿಂಕಾ ಹೇಗೆ ಒಮ್ಮೆಲೇ ತಣ್ಣಗಾಗುತ್ತಿದ್ದನೆಂಬುದು ಟ್ರೊಕ್ಸಾನಿಗೆ ಜ್ಞಾಪಕವಿತ್ತು, ಹೀಗಿದ್ದೂ ಕೊನ್ನಲಿಂಕಾ ಇಷ್ಟು ಸಮಯವೂ ಭೂಗತ ಚಳವಳಿಗಾರರಲ್ಲೊಬ್ಬನಾಗಿದ್ದನೆಂದು ತಿಳಿದು ಟ್ರೊಕ್ಸಾನಿಗೆ ಸಂತೋಷವಾಗಿತ್ತು. ಭೂಗತ ಚಳವಳವು ಎಷ್ಟು ಯಶಸ್ವಿಯಾಗಿ, ಅದರ ವಿಶ್ವಾಸಾರ್ಹರಾದ ಕೊನ್ನಲಿಂಕಾ ಮತ್ತು ತನ್ನಂಥಹ ಸದಸ್ಯರಿಗೆ ಪರಸ್ಪರ ತಾವು ಆ ಚಳವಳಕ್ಕೆ ಸೇರಿದವರು ಎಂಬ ಅರಿವು ಕೂಡಾ ಇಲ್ಲದೆ ಅನ್ಯೋನ್ಯತೆಯಿಂದ ನಡೆಯುತ್ತಿದೆ ಎಂದು ಅವನು ಸಂತೋಷಪಟ್ಟನು.

ಟ್ರೊಕ್ಸಾನಿಗೆ ಕೊನ್ನಲಿಂಕಾನ ಮೇಲಿರುವ ಸಂದೇಹವು ತಿರುಳಿಲ್ಲದ್ದೆಂದು ಮುಂದಾಳು ಅವನಿಗೆ ಹೇಳಿದ್ದರೂ, ಟ್ರೊಕ್ಸಾನಿಗೆ ಕೊನ್ನಲಿಂಕಾನ ಎದುರಿನಲ್ಲಿ ತುಸು ಸಂಕೋಚವಾಗದಿರಲಿಲ್ಲ. ಕೊನ್ನಲಿಂಕಾ ಕುರಿತು ತಾನು ಸಂಶಯಗೊಂಡು ಅವನಿಗೆ ತಾನು ಅಪರಾಧ ಮಾಡಿದ್ದೆನೆಂಬ ಪಶ್ಚಾತ್ತಾಪದ ಮನೋಭಾವನೆಯಿಂದಲೇ ಆ ಸಂಕುಚಿತ ಪ್ರವೃತ್ತಿ ತನ್ನಲ್ಲುಂಟಾಗಿದೆಯೆಂದು ಟ್ರೊಕ್ಸಾ ಯೋಚಿಸಿದ.

ಲೊಸ್ಕೊಟ್ ತುಂಬಾ ಆಯಾಸಗೊಂಡಿದ್ದ. ಅವನ ಭಯವು ನರಸಮೂಹಗಳ ಶಕ್ತಿಯನ್ನು ಬಹಳ ಕುಂದಿಸಿತ್ತು. ಸ್ಕಾಲ್ಸಿಕ್ಕಗೆ ತನ್ನ ಪಲಾಯನವು ಸನ್ನಿಹಿತವಾಗಿದೆಯೆಂದು ತಿಳಿದೊಡನೆ ಅವನು ಸ್ವಲ್ಪ ಧೈರ್ಯಗುಂದಿದನು. ಶ್ರೀಮತಿ ಕೊನ್ನಲಿಂಕಾ ಹೆದರದಿದ್ದರೂ, ಬಹಳ ಯೋಚನಾಮಗ್ನಳಾದಳು. ಡಾಕ್ಟರ್ ಸ್ಪೆಕ್‌ರ ಮನಸ್ಸಿನಲ್ಲೂ ಒಂದು ಯೋಚನೆಯಿತ್ತು. (ಅವರು ತಮ್ಮ ಪಲಾಯನದ ಸುದ್ದಿಯನ್ನು ತಮ್ಮ ಕುಟುಂಬದವರ ಕಿವಿಗೆ ಬೀಳದಂತೆ ಹೇಗೆ ರಹಸ್ಯವಾಗಿಡಬಹುದೆಂದೂ, ತಮ್ಮ ಹೆಂಡತಿಯಿಂದ ಹೇಗೆ ಪಕ್ಕನೆ ರಹಸ್ಯವಾಗಿ ಬೀಳ್ಕೊಡುವ ಆಡಬೇಕಾದ ನಾಟಕವನ್ನು ಯೋಚಿಸುತ್ತಿದ್ದರು); ಟ್ರೊಕ್ಸಾನ ಮನಸ್ಸಿನಲ್ಲಿ ವಿವರಿಸಲಸಾಧ್ಯವಾದ ಅಸಮಾಧಾನ

ಕೊರೆಯುತ್ತಿತ್ತು. ಏಕೆಂದರೆ ತಾನು ತನ್ನ ಅಜ್ಞಾನದಿಂದ ಕೊನ್ವಲಿಂಕಾನಿಗೆ ಅನ್ಯಾಯ ಗ್ರಹಿಸಿದ್ದೆನೆಂದು ಬಹಳ ವ್ಯಸನವಾಗುತ್ತಿತ್ತು.

ಆದರೆ ಅಲ್ಲಿ ನೆರೆದಿದ್ದ ಆರು ಜನರ ಪೈಕಿ ತನ್ನ ಮನಸ್ಸನ್ನು ಪೂರ್ಣ ಸ್ಥಿಮಿತದಲ್ಲಿಟ್ಟುಕೊಂಡವನೆಂದರೆ ಕೊನ್ವಲಿಂಕಾನೊಬ್ಬನೇ. ಆ ಗುಂಪಿನಲ್ಲಿ ಪ್ರಭಾವಶಾಲಿಯಾಗಿದ್ದುದರಿಂದ, ಅವನು ಆ ಕೂಟದ ಮುಂದಾಳುತನವನ್ನು ಅನಿವಾರ್ಯವಾಗಿ ವಹಿಸಬೇಕಾಯಿತು.

ಆದರೆ ಬಹಿರಂಗವಾಗಿ ಟ್ರ್ರಿಕ್ಸಾನಿಗೆ ಅವನು ಮನ್ನಣೆ ಕೊಡುತ್ತಿದ್ದ. ಟ್ರ್ರಿಕ್ಸಾ ವಯಸ್ಸಿನಲ್ಲಿ ಹಿರಿಯನಾಗಿದ್ದ ಮಾತ್ರವಲ್ಲ, ಭೂಗತ ಚಳವಳದಲ್ಲಿ ಟ್ರ್ರಿಕ್ಸಾ ತನ್ನ ಮೇಲಧಿಕಾರಿ ಎಂಬ ಅಭಿಮಾನದಿಂದಲೂ ಕೊನ್ವಲಿಂಕಾ ಅವನಿಗೆ ಮರ್ಯಾದೆ ಕೊಡುತ್ತಿದ್ದ. ಆದುದರಿಂದ ಅವನು ಟ್ರ್ರಿಕ್ಸಾನನ್ನ ಆಮಂತ್ರಿಸಿ, ಉಪಾಯದ ವಿವರಗಳನ್ನು ಯೋಚನೆ ಮಾಡಲು ಕೇಳಿ ಕೊಂಡನು. ಟ್ರ್ರಿಕ್ಸಾ ತಲೆಯಲ್ಲಾಡಿಸಿ, "ಸರಿ. ನಾನು ಇವೆಲ್ಲವನ್ನೂ ಯೋಚಿಸಿದ್ದೇನೆ. ಮುಂದಾಳು ಈ ಉಪಾಯವನ್ನು ಕಾರ್ಯಗತಗೊಳಿ ಸಲು ನನ್ನ...ನಮಗೆ ಬಿಟ್ಟಿದ್ದಾರೆಂದು ನಿಮಗೆ ತಿಳಿದಿದೆಯಲ್ಲ, ಕೊನ್ವಲಿಂಕಾ? ಕೊನ್ವಲಿಂಕಾ ತಲೆಯಲ್ಲಾಡಿಸಿದ. " ಹೌದು. ಸರಿ.... ನನಗೆ ಒಂದೇ ದಾರಿ ಕಾಣುತ್ತದೆ. ಕಳೆದ ಸಲ ನಾವು ಒಬ್ಬನನ್ನು ರೈಲಿನ ಮೂಲಕ ಗಡಿ ದಾಟಿ ಸಲು ಯತ್ನಿಸಿದಾಗ ಆದ ದುರ್ಘಟನೆಯನ್ನು ನಾನು ತಿಳಿದಿದ್ದರೂ ನನಗೆ ಅದೊಂದೇ ತೋರುತ್ತದೆ. ಇನ್ನೂ ನಮಗೆ ಅದೊಂದೇ ದಾರಿಯೆಂದು ನಾನು ಯೋಚಿಸುತ್ತೇನೆ: ಒಂದು ವೇಗವಾಗಿ ಬಿಡುವ ಎಂಜಿನ್ನಿಗೆ ಒಂದು ಬಂಡಿ ಯನ್ನು ಸಿಕ್ಕಿಸಿ ಗಡಿಯನ್ನು ಬಲತ್ಕಾರದಿಂದ ದಾಟುವುದು."

ಕೊನ್ವಲಿಂಕಾ ಏನೂ ಅನ್ನಲಿಲ್ಲ. ಡಾಕ್ಟರ್ ಸ್ಪೆಕ್ ಮತ್ತೆ ಪ್ರಶ್ನಿಸ ಬೇಕಾಯಿತು.

ಅವರು ಗಂಭೀರವಾಗಿ "ಕರೆಲ್, ನಮಗೆ ಒಂದು ಎಂಜಿನ್ ಮತ್ತು ಬಂಡಿ ಎಲ್ಲಿ ಸಿಗಬಹುದು? ಅಂದರೆ ಅಷ್ಟು ಸಣ್ಣ ರೈಲು ಬಂಡಿಯನ್ನು ನಡೆಸಲು ಯಾವ ನೆವನವನ್ನು ನೀವು ಅಧಿಕಾರಿಗಳಿಗೆ ಹೇಳಬಲ್ಲಿರಿ....?"

ಎಲ್ಲರೂ ಅದನ್ನು ಅನುಮೋದಿಸಿದರು; ಆದರೆ ಟ್ರ್ರಿಕ್ಸಾ ವಿಶ್ವಾಸ ಪೂರ್ವಕವಾಗಿ, "ಅಷ್ಟು ಮಾಡುವುದಕ್ಕೆ ಯಾವ ತೊಂದರೆಯೂ ಇರಲಾರ

ದೆಂದು ನಾನು ಭಾವಿಸುತ್ತೇನೆ. ಅದು ನಿಜವಾಗಿಯೂ ಬಹಳ ಸುಲಭ" ಎಂದರು.

"ನಾನು ಇಷ್ಟು ಮಾಡಿದರಾಯಿತು: ನಾನು ಒಂದು ಖಾಲಿ ಬಂಡಿಯನ್ನು ತೆಗೆದುಕೊಂಡು ಅದಕ್ಕೆ ಆಸ್ಟ್‌ಗೆ ಹೋಗುವ ಡ್ಯೂಟಿ ಟಿಕೆಟ್ ಕೊಡುತ್ತೇನೆ ಅದರಲ್ಲಿ ಏನಾದರೂ ನನಗೆ ಮನಸ್ಸು ಬಂದ ಸರಕು— ಉಪ್ಪಲುಗಳು ಕೋಸುಗಡ್ಡೆ ಮನೆಯ ಸಾಮಾನು, ಸಾಗಿಸುವುದೆಂದು ಕಾಣಿಸುತ್ತೇನೆ."

"ಸರಿ.... ಕೋಸುಗಡ್ಡೆಯೆನ್ನಿ. ಬಂಡಿ ಖಾಲಿಯಾಗಿದ್ದರೂ ಡ್ಯೂಟಿ ಟಿಕೆಟಿನಲ್ಲಿ ಕೋಸುಗಡ್ಡೆಯೆಂದು ಕಾಣಿಸಿದೆ. ಕೊನ್ವಲಿಂಕಾ ಮತ್ತು ನಾನು ಮಾತ್ರ ಅದರಲ್ಲಿ ಬೇರೆ ಯಾರೂ ಪ್ರಯಾಣಿಕರಿಲ್ಲ."

"ಆಸ್ಟ್‌ಗೆ ಹೋಗುವ ದಾರಿಯಲ್ಲಿ ಹಾಸ್ಲೋವ್ ಬಳಿಯ ಒಂದು ಕಾಡಿನ ಸಮೀಪ ನಾವು ರೈಲನ್ನು ನಿಲ್ಲಿಸುವ, ನಿಮಗೆ ತಿಳಿಯಿತಲ್ಲವೇ?... ಸರಿ... ನೀವು ಅಲ್ಲಿ ಎಲ್ಲರೂ ಬಂಡಿಯೊಳಗೆ ಹತ್ತಬೇಕು. ಮತ್ತೆ.... ಸರಿ, ಅಷ್ಟೇ ಮಾಡಬೇಕಾದುದು. ಆಸ್ಟ್ ಮುಟ್ಟಿದ ಬಳಿಕ ನಾವು ದಾರಿ ಸರಿಯಿದೆಯೋ ಎಂದು ನೋಡಿಕೊಂಡು, ಗಡಿಯ ಕಡೆ ಒಂದೇ ಸಮನೆ ಗಾಡಿಯನ್ನು ಓಡಿಸಿದರಾಯಿತು. ಮತ್ತೆ.... ಸರಿ: ಅಷ್ಟು ಮಾಡಿದರೆ ಸಾಕು!"

ಟ್ರುಕ್ಸಾನ ಮಾತು ಕೇಳಿ ಎಲ್ಲರೂ ಮೌನವಾದರು. ಕೊನ್ವಲಿಂಕಾ ಅದನ್ನು ಭೇದಿಸಬೇಕಾಯಿತು. ಟ್ರುಕ್ಸಾನ ಸಹಜವಾದ ಉತ್ಸಾಹ, ಅವನನ್ನೇ ಚೇತರಿಸಿರಲಿಲ್ಲ. ಇತರರನ್ನಂತೂ ಅವನ ಮಾತು ಉತ್ತೇಜನಗೊಳಿಸಲೇ ಇಲ್ಲ. ಎಲ್ಲವೂ ಸರಿಯಾಗಿ ನಡೆದೀತೆಂದು ಶ್ರದ್ಧಾಪೂರ್ವಕ ಆಶಿಸುವರಲ್ಲಿಯೂ ಅವನೆಂದ ಉಪಾಯವು ವಿಶ್ವಾಸವನ್ನು ಹುಟ್ಟಿಸಿರಲಿಲ್ಲ.

ಕೊನ್ವಲಿಂಕಾ ತಲೆಯಲ್ಲಾಡಿಸಿದ. ತನ್ನ ಅಧಿಕಾರದಿಂದ ಬಂದ ಅನುಭವದ ಸ್ಪಷ್ಟವಾದ ದೃಷ್ಟಿಯಿಂದ ಅವನು ಗಂಭೀರ ಮುಖ ಮುದ್ರೆಯನ್ನು ಧರಿಸಿದ್ದ. ಅವನಲ್ಲಿ ಅಂಜುಬುರುಕುತನದ ಕುರುಹು ಎಳ್ಳಷ್ಟೂ ಕಾಣಿಸುತ್ತಿರಲಿಲ್ಲ. ಸ್ಪೆಕ್‌ರು ಇನ್ನೂ ಚಿಕ್ಕ ವಯಸ್ಸಿನ ಎಂಜಿನಿಯರನನ್ನೇ ನೋಡುತ್ತಿದ್ದಂತೆ—ಡಾಕ್ಟರ್ ಅವರೆಲ್ಲರ ಭವಿಷ್ಯ, ಟ್ರುಕ್ಸಾನದು ಕೂಡಾ— ಆ ನಮ್ರಭಾವದ ಉದ್ದವಾದ ವ್ಯಕ್ತಿಯ ಕೈಯಲ್ಲಿವೆ ಎಂಬ ಯೋಚನೆ ಅವನ ಮನಸ್ಸಿ

ನಲ್ಲಿ ತನ್ನಷ್ಟಕ್ಕೆ ಮೂಡಿ ಬಂತು. ಅವನ ವಯಸ್ಸು ಸಾಧಾರಣವಾಗಿ ಮೂವತ್ತಕ್ಕೆ ಮಿಕ್ಕಿರಲಿಲ್ಲವೆಂದು ಡಾಕ್ಟರರು ಅಭಿಪ್ರಾಯಪಟ್ಟರು.

ಆದರೆ, ಅವನು ಅವರೆಲ್ಲರ ಅಡಿಯಾಳಾಗಿ ಬಂದಿದ್ದ. ಹೊಸಬನಾಗಿದ್ದರೂ, ಎಲ್ಲಾ ಜವಾಬ್ದಾರಿಯನ್ನೂ ಅವನು ವಹಿಸಿಕೊಳ್ಳಲಿಕ್ಕಿದ್ದ. ಅವನ ಆತ್ಮ ವಿಶ್ವಾಸ ಎಲ್ಲರನ್ನೂ ಮೆಚ್ಚಿಸಿತ್ತು. ಕಷ್ಟದಲ್ಲಿರುವವರು ತಮ್ಮ ಮುಂದಾಳುವಿನ ಆದೇಶದಂತೆ ನಡೆಯಲು ಮುನ್ನೋಡುತ್ತಿರುವಂತೆ ಅವರೆಲ್ಲರೂ ಅವನನ್ನೇ ನೋಡುತ್ತಿದ್ದರು.

ಕೊನ್ಪಲಿಂಕಾ ಸಾವಧಾನವಾಗಿ ಧೀರ್ಘಾಲೋಚಿಸಿ,

"ಟ್ರಿಕ್ಸಾ, ನನಗೆ ಇದನ್ನು ಹೇಳಲು ನಿಜವಾಗಿಯೂ ವ್ಯಥೆಯಾಗುತ್ತದೆ: ಆದರೆ ನಿಮ್ಮ ಉಪಾಯವು ಸಫಲವಾಗಲಿಕ್ಕಿಲ್ಲ. ನಾನು ನಿಮ್ಮ ಉಪಾಯವನ್ನೇ ಟೀಕಿಸುತ್ತಿದ್ದೇನೆಂದು ಭಾವಿಸಬೇಡಿ. ಇಲ್ಲವೇ ಅದು ನನ್ನ ಬಲೆಗೆ ಸರಿಯಾಗಿ ಹೊಕ್ಕಲಿಲ್ಲವೆಂದು ಭಾವಿಸಬೇಡಿ. ಇಲ್ಲ ಖಂಡಿತವಾಗಿಯೂ ನನಗೆ ನಿಜವೆಂದುತಿಳಿದಿದೆ. ಆದರೆ.... ನಿಮ್ಮ ಉಪಾಯವನ್ನು ಕಾರ್ಯಗತ ಮಾಡುವುದು ಅಸಾಧ್ಯವೆಂಬುದನ್ನು ನಾನು ತೋರಿಸಿಕೊಟ್ಟರೆ ನಿಮಗೆ ಬೇಸರವಿಲ್ಲವಷ್ಟೆ....?"

ಟ್ರಿಕ್ಸಾ ನಸುನಗುತ್ತಾ,

"ನನಗೇನೂ ಬೇಸರವಿಲ್ಲ. ನಾನು ನಿಮ್ಮೆಲ್ಲರ ಪರವಾಗಿ— ಈ ರಾತ್ರಿ ನಮ್ಮೊಡನೆ ಇಲ್ಲಿ ಇಲ್ಲದವರ ಪರವಾಗಿ ಕೂಡಾ—ನನ್ನ ಉಪಾಯದಲ್ಲಿರುವ ದೋಷಗಳನ್ನು ತೋರಿಸಬೇಕೆಂದು ಕೇಳಿಕೊಳ್ಳುತ್ತೇನೆ. ದೇವರೇ! ನಮ್ಮ ಉಪಾಯದಲ್ಲಿರುವ ದೌರ್ಬಲ್ಯಗಳನ್ನು ದಾಕ್ಷಿಣ್ಯದಿಂದ ತೋರಿಸದೆ ಹೋದರೆ ನಮಗೇನೂ ಪ್ರಯೋಜನವಾಗದು. ನಮ್ಮನ್ನು ತಿದ್ದಿಕೊಳ್ಳಲು ಮಕ್ಕಳ ಹಾಗೆ ನಾವು ನೊಂದುಕೊಳ್ಳಬಾರದು.

ಆ ಕ್ಷಣದಲ್ಲಿ ಕೊನ್ಪಲಿಂಕಾನ ಮೇಲೆ ಟ್ರಿಕ್ಸಾನಿಗಿದ್ದ ಸಂದೇಹಗಳೆಲ್ಲವೂ ಮಾಯವಾದುವು; ಟ್ರಿಕ್ಸಾನು ಪಿತೂರಿಗಾರರ ಮನಸ್ಸನ್ನು ಎಷ್ಟು ಆಳವಾಗಿ ತಿಳಿದಿದ್ದಾನೆಂದು ಉಳಿದವರಿಗೆ ಮನವರಿಕೆಯಾಯಿತು. ಅವರೆಲ್ಲರಿಗೂ ಅವನ ಮಾತು ಕೇಳಿ ಸಂತೋಷವಾಯಿತು. ಕೊನ್ಪಲಿಂಕಾನನ್ನು ಮನಃಪೂರ್ವಕ ನಂಬಬೇಕೆಂದು ಅವರು ಬಯಸಿದರು; ಕೊನ್ಪಲಿಂಕಾ

ಮುಂದಾಳುತನವನ್ನು ವಹಿಸಿದುದಕ್ಕೆ ಟ್ರುಕ್ಸಾ ತೋರಿಸಿದ ಔದಾರ್ಯ ಪೂರ್ಣ ಮೆಚ್ಚುಗೆಯು ಅವರಿಗೆ ಸಂತೋಷವನ್ನುಂಟುಮಾಡಿತಲ್ಲದೆ, ಮೊದಲಿನ ಉಪಾಯದ ಬಗ್ಗೆ ಸಂದೇಹಪಟ್ಟವರಿಗೂ ಧೈರ್ಯ ಬಂತು.

ಜರೊಸ್ಲಾವ್ ಕೊನ್ವಲಿಂಕಾ ತನ್ನ ಕೈಸನ್ನೀಡಿದ. ಟ್ರುಕ್ಸಾ ಅದನ್ನು ಬಹಳ ಪ್ರೀತಿಯಿಂದ ಹಿಡಿದು ಕುಲುಕಿಸಿದನು.

"ನಮ್ಮಿಂದ ಸಾಧ್ಯವಿದೆ, ಕಾಮ್ರೇಡ್! ನಾವು ಒಗ್ಗಟ್ಟಾಗಿದ್ದರೆ, ಯಾವುದೂ— ಯಾವುದೂ ಕೂಡಾ— ನಮ್ಮನ್ನು ಸೋಲಿಸಲಾರದು!" ಎಂದು ಕೊನ್ವಲಿಂಕಾನು ಹೇಳಿದನು

"ನೀನಂದಂತೆ!" ಎಂದರು ಡಾಕ್ಟರ್ ಸ್ಟೈಕ್.

ಕೊನ್ವಲಿಂಕಾನಿಗೆ ಈಗ ತಾನು ಅವರೆಲ್ಲರ ವಿಶ್ವಾಸಕ್ಕೆ ಪಾತ್ರನಾದೆನೆಂದೂ, ಅವರೆಲ್ಲರೂ ತನ್ನ ಮಾತನ್ನು ಕೇಳಲು ತುಂಬಾ ಆಸಕ್ತರಾಗಿರುವರೆಂದೂ ತಿಳಿಯಿತು.

"ಕರೆಲ್ ಟ್ರುಕ್ಸಾರ ಉಪಾಯವು ಸರಿಯಾಗಿದೆ... ಸಿದ್ಧಾಂತದ ಮಟ್ಟಿಗೆ. ಆದರೆ ಅದನ್ನು ಕಾರ್ಯಾಚರಣೆಗೆ ತರುವುದು ಕಷ್ಟವೆಂದು ನಾನು ಹೆದರುತ್ತೇನೆ. ಏಕೆಂದು ನಾನು ವಿವರಿಸುತ್ತೇನೆ...." ಎಂದೆನ್ನುವಾಗ ಅವನ ಧ್ವನಿಯಲ್ಲಿ ಏನೂ ಪಶ್ಚಾತ್ತಾಪದ ಕುರುಹು ಕಾಣಿಸಲಿಲ್ಲ. ಅವನು ವಿವರಿಸುತ್ತಿದ್ದ. ಆ ವಿವರಣೆಯನ್ನು ಎಲ್ಲರೂ ಆಕ್ಷೇಪರಹಿತವಾಗಿ ಅರ್ಥ ಮಾಡಬೇಕೆಂದು ಅವನು ನಿರೀಕ್ಷಿಸಿದ್ದ.

"ನಾವು ಅದನ್ನು ಕೇಳಬೇಕು," ಎಂದು ಟ್ರುಕ್ಸಾ ನುಡಿದ.

"ಸರಿ ಮೊದಲು, ಎಂಜಿನಿಗೆ ಜೋಡಿಸುವ ಒಂದು ಸರಕಿನ ಬಂಡಿಯ ಸೂಚನೆಯನ್ನು ಗ್ರಹಿಸಿ, ಅದು ಖಂಡಿತವಾಗಿಯೂ ಗುಪ್ತ ಪೋಲೀಸರ ಗಮನವನ್ನು ಸೆಳೆದೀತೆಂದು ನಾನು ಅಭಿಪ್ರಾಯಪಡುತ್ತೇನೆ. ಅಸಾಮಾನ್ಯವಾದ ಸಂಗತಿಗಳನ್ನು ಪರಿಶೀಲಿಸುವುದು ಅವರ ಕೆಲಸ— ಹಾಗೂ ಅವರ ವಿನೋದವಾಗಿದೆಯೆಂಬುದನ್ನು ಮರೆಯಬೇಡಿ. ಇದು ಅವರಿಗೆ ಅಸಾಮಾನ್ಯವಾಗಿ ಕಾಣಿಸದೆ ಇರಲಿಕ್ಕಿಲ್ಲ— ಹಾಗಾದರೆ ಮತ್ತೇನಾಗುವುದೆಂಬುದು ನಿಮಗೆ ತಿಳಿದೇ ಇದೆ!

"ಮತ್ತೆ, ಹಾಸ್ಲೊವ್‌ನ ಕಾಡಿನಲ್ಲಿ ಎಲ್ಲರೂ ನೆರೆದಿದ್ದುದನ್ನು ಯಾರಾದರೂ ನೋಡಿಬಿಟ್ಟರೆ ಏನಾದೀತು? ಅವರು ಒಬ್ಬೊಬ್ಬರಾಗಿ ಬಂದರೂ,

ಒಟ್ಟಾಗಿ ಬಂದರೂ— ಪರಿಣಾಮ ಒಂದೇ. ಹಾಸ್ಲೊವ್ ರಸ್ತೆಯ ಕಾವಲುಗಾರನೊಬ್ಬನು ಆ ದಾರಿಯಿಂದ ಹೋಗುವಾಗ ನೋಡಿದರಾಯಿತು—ನಮ್ಮ ಪಲಾಯನ ತಂತ್ರ ಅಲ್ಲಿಗೆ ಅಂತ್ಯವಾದಂತೆಯೇ ಸೈ "

" ಇದು ಆರಂಭದ ವಿಷಯಗಳು."

" ಇನ್ನು ಫಾಯರ್‌ಮ್ಯಾನನ ಪ್ರಶ್ನೆ. ಅವನು ನಮ್ಮವನಾಗಿರದಿದ್ದರೆ— ಅದನ್ನು ಹೇಗೆ ವ್ಯವಸ್ಥೆ ಮಾಡಬಹುದೆಂದು ನಿಜವಾಗಿಯೂ ನನಗೇ ತಿಳಿಯದು— ನಾನು ಹಾಸ್ಲೊವ್ ಕಾಡಿನ ಮಧ್ಯೆ ಎಂಜಿನನ್ನು ನಿಧಾನವಾಗಿ ನಡೆಸುವಾಗ, ಅದು ಅಸಾಧಾರಣವೆಂದು ಅವನಿಗೆ ಹೊಳೆಯದಿರದೆ? ಒಂದೋ ನಾನು ಕಾಡಿನ ಬಳಿ ಏನೋ ಹುಚ್ಚು ಹಿಡಿದು ಅದನ್ನು ನಿಲ್ಲಿಸಿದೆನೆಂದು ಅವನು ಭಾವಿಸಬಹುದು— ಅಂದರೆ ಜನರು ಬಂಡಿಯನ್ನೇರುವುದನ್ನು ಅವನು ನೋಡದಿದ್ದರೆ—ಅವರನ್ನು ಅವನು ನೋಡಿದರೆ ನಮ್ಮ ತಂತ್ರ ಅರ್ಥವಾಗಿ ಅವನೇನಾದರೂ ಮಾಡುತ್ತಾನೆ..."

" ಅವನು ಏನು ಮಾಡಬಹುದು ? " ಎಂದು ಸ್ಕಾಲ್ಸ್ಕಿ ಕೇಳಿದ.

" ಕೊನ್ವಲಿಂಕಾ ಉತ್ಸಾಹಭರಿತನಾಗಿ, ಸ್ನೇಹಿತನೇ, ಅವನು—ಆರಂಭದಲ್ಲಿ— ತನ್ನ ಅಪಾಯಕರವಾದ ಆಯುಧದಲ್ಲಿ ನನ್ನ ತಲೆಯನ್ನೊಡೆಯಬಹುದು— ಹೌದು. ಅವನಿಗೆ ಆ ಇದ್ದಲನ್ನು ಹಾಕುವ ದೊಡ್ಡ ಸೌಟನ್ನು ಹೇಗೆ ಉಪಯೋಗಿಸಬೇಕೆಂದು ಗೊತ್ತಿದೆ. ಆದರೆ ಡ್ರೈವರನು ತನ್ನ ಯಂತ್ರ ಸಾಧನಗಳನ್ನೂ, ತನ್ನ ಫಾಯರ್‌ಮ್ಯಾನನ್ನೂ ಏಕಕಾಲದಲ್ಲಿ ಯಾವಾಗಲೂ ನೋಡುತ್ತಿರುವುದು ಸಾಧ್ಯವಿಲ್ಲ. ಒಂದುವೇಳೆ ತಕ್ಷಣ ಹಾಗೆ ಅವನು ಬಲಪ್ರಯೋಗ ಮಾಡದಿದ್ದರೆ, ಆಸ್ಟ್ ಪಟ್ಟಣಕ್ಕೆ ತಲಪುವವರೆಗೆ ಅವನು ಅಲ್ಲಿ ಕಾದಿದ್ದು ಬೊಬ್ಬೆ ಹಾಕುತ್ತಾನೆ ಇಲ್ಲವೇ ಬೇರೇನಾದರೂ ಮಾಡುತ್ತಾನೆ....

" ಮತ್ತೆ, ಕೊನೆಗೆ, ಸ್ನೇಹಿತರೇ—ಇದು ಎಲ್ಲಕ್ಕಿಂತಲೂ ಮುಖ್ಯವಾದ ಆಕ್ಷೇಪವಾಗಿದೆ— ನಾನು ರಜೆಯಲ್ಲಿದ್ದೇನೆ. ಸ್ಕಾಲ್ಸ್ಕಿ, ರಜೆಯ ಮಧ್ಯದಲ್ಲಿ ನನಗೆ ಒಂದು ಬಂಡಿಯ ರೈಲನ್ನು ಥಕ್ಕನೆ ನಡೆಸಲು ಕಾರಣವೇನೆಂಬುದನ್ನು ನಾನು ಹೇಗೆ ವಿವರಿಸಲಿ .. ? "

ಸ್ಕಾಲ್ಸ್ಕಿ ತಲೆಯಲ್ಲಾಡಿಸಿದ. ಅವನು ಒಣನಗುವಿನೊಡನೆ, "ಒಳ್ಳೆಯ ನೆವನವೊಂದನ್ನು ನನಗೆ ಸೂಚಿಸಲು ಸಾಧ್ಯವಿಲ್ಲ...." ಎಂದ.

ಕೊನ್ವಲಿಂಕಾ ನ್ಯೈಯನ್ನು ನೇವರಿಸಿಕೊಂಡು, ಸಿಗರೇಟು ಪೆಟ್ಟಿಗೆಯನ್ನು ಜೇಬಿನಿಂದ ತೆಗೆದು ಎಲ್ಲರಿಗೂ ಸಿಗರೇಟು ಹಂಚಿದನು.

"ಇನ್ನು ಯಾರಿಗಾದರೂ ಏನಾದರೂ ಆಲೋಚನೆಯಿದೆಯೆ...?"

ಶ್ರೀಮತಿ ಕೊನ್ವಲಿಂಕಾ ನಾಚಿಕೆಯಲ್ಲಿ ತನ್ನ ಕೈಯನ್ನು ತನ್ನ ಗಂಡನ ಕೈಯಮೇಲೆ ಇಟ್ಟಳು. ಟ್ರುಕ್ಸಾನ ಉಪಾಯವು ಅಸಾಧ್ಯವೆಂದು ವ್ಯಕ್ತವಾದೊಡನೆ ಎಲ್ಲರಲ್ಲೂ ಉಂಟಾಗಿದ್ದ ನಿರುತ್ಸಾಹ ಅವಳಿಗೆ ಚೆನ್ನಾಗಿ ತೋರುತ್ತಿತ್ತು. ಅವಳಿಗೂ ಹತಾಶೆಯಾಗಿತ್ತು; ಆದರೆ ಅವಳಿಗೆ ತನ್ನ ಗಂಡನ ಮೇಲೆ ಬಲವಾದ ವಿಶ್ವಾಸವಿತ್ತು—ಅವನಲ್ಲಿ ಮನಸ್ಸಿನ ಸ್ಥಿಮಿತ ಮತ್ತು ತೀಕ್ಷ್ಣಬುದ್ಧಿ ಇದೆಯೆಂದು ಹಿಂದೆ ಎಷ್ಟೋಬಾರಿ ಅವಳಿಗೆ ವ್ಯಕ್ತವಾಗಿತ್ತು. ಅವಳು ನಸುನಗುವಿನೊಡನೆ, "ನನಗೆ ತೋರುತ್ತದೆ.... ...ಸರಿ ಬಹುಶಃ—(ನಾನಿಷ್ಟೇ ಯೋಚಿಸಿದ್ದೆ, ತಿಳಿಯಿತೆ?)—ಅದು ಅಷ್ಟು.............. ಅಸಾಧಾರಣವಾಗಬೇಕಿಲ್ಲ........" ಎಂದಳು.

ಕೊನ್ವಲಿಂಕಾ ಕ್ಷಣಕಾಲ ಅವಳನ್ನು ನೋಡಿ, ಮೇಜಿನಮೇಲೆ ತನ್ನ ಕೈಯ್ಯನಿಟ್ಟ.

"ಹ್ಞಾ .....?"—ಅವನು ತನ್ನ ಹೆಂಡತಿಗೆ ಮಾತಾಡಲು ತಲೆಯಲ್ಲಾಡಿಸುತ್ತ ಪ್ರೋತ್ಸಾಹಿಸಿದ.

"ಹೌದು, ಜರೊಸ್ಲಾವ್, ನಾನು ಏನನ್ನು ಯೋಚಿಸಿದ್ದೇನೆಂಬುದು ನಿಮಗೆ ತಿಳಿದಿದೆ."

"ವಿಶೇಷವೇನೂ ಕಾಣುವುದಿಲ್ಲ..............................?" ಅವನು ತಲೆಯಲ್ಲಾಡಿಸುತ್ತ ಎಲ್ಲರನ್ನೂ ಸಂತೋಷದಿಂದ ನೋಡಿ, ಹೊಸ ಉಪಾಯವೊಂದನ್ನು ಸೂಚಿಸತೊಡಗಿದನು. "ಒಂದು ಸಾಮಾನ್ಯ ರೈಲು ಬಂಡಿ!"

ಅವನು ಎಲ್ಲರ ಮುಖಗಳನ್ನೂ ನೋಡಿ, "ಹೌದು! ಒಂದು ಸಾಮಾನ್ಯ ರೈಲುಬಂಡಿ! ನಾವು ವಿಶೇಷ ರೈಲನ್ನು ನಡೆಸುವುದರ ಮೂಲಕ ಸಂದೇಹವನ್ನು ಆರಂಭದಿಂದಲೇ ಕೆರಳಿಸುವುದು ಬೇಡ. ಇಲ್ಲ........ನಾವು—ಯಾವುದಾದರೊಂದು, ಹೇಗಾದರೂ ಮಾಡಿ ನಿತ್ಯದ ಬಂಡಿಯನ್ನೇ ಉಪಯೋಗಿಸೋಣ—ಮತ್ತೆ ಅದರ ವಾಡಿಕೆಯ ಓಡಾಟಕ್ಕೂ ನಾವು ಓಡಿಸುವುದಕ್ಕೂ ಇರುವ ವ್ಯತ್ಯಾಸವೆಂದರೆ........"

"ಅದು ಆಸ್ಟ್ರನಲ್ಲಿ ನಿಲ್ಲುವುದಿಲ್ಲ," ಎಂದು ಶ್ರೀಮತಿ ಕೊನ್ವಲಿಂಕಾ ಶಾಂತವಾಗಿ ಹೇಳಿದಳು.

ಅವರ ಹೃದಯುಗಳಲ್ಲಿ ಪುನಃ ಆಶೆಯ ಚಿಗುರು ಚಿಗುರಿತು. ಈ ಸಂಗತಿಯು ಎಲ್ಲರಿಗೂ ಮನವರಿಕೆಯಾಯಿತು; ಎರಡನೆಯ ಹೆಚ್ಚು ಕಷ್ಟವಾದ ತಂತ್ರವನ್ನು ಸಾಧಿಸಲು ಅವರೆಲ್ಲರೂ ಶ್ರದ್ಧಾಪೂರ್ವಕ ನಿರ್ಧರಿಸಿದರು. ಈಗ ಆ ಉಪಾಯವನ್ನು ಯಶಸ್ವಿಯಾಗಿ ಸಾಧಿಸಲು ಅವರು ಯತ್ನಿಸಲಿಕ್ಕಿದ್ದರು. ಅದನ್ನು ಕೇವಲ ನಿರಾಸಕ್ತಿಯಿಂದ ಸ್ವೀಕರಿಸಿ ಸುಮ್ಮನೆ ಕುಳಿತುಕೊಳ್ಳುವಂತಿರಲಿಲ್ಲ.

ಲೊಸ್ಕೊಟ್ ಕಳವಳದಿಂದಲೇ ಒಂದು ಸತ್ಯಸಂಗತಿಯನ್ನು ಅವರಿಗೆ ಹೇಳಿದನು.

"ನಿತ್ಯದ ಸಮಯಕ್ಕೆ ಓಡುವ ಸಾಮಾನ್ಯ ರೈಲುಬಂಡಿಯಾದರೂ, ಅದು ನಿಮ್ಮದೇಶದವಲ್ಲಿರಬೇಕು ಕೊನ್ವಲಿಂಕಾ"

ಕೊನ್ವಲಿಂಕಾ ತಲೆಯಲ್ಲಾಡಿಸಿದ.

"ಅದು ನಿಜ. ಆದರೆ ಅದು ಸಾಧ್ಯವಿದೆಯೆಂದು ನನಗೆ ತೋರುತ್ತದೆ. ಅದು ಅಷ್ಟು ಸುಲಭವಲ್ಲ—ಆದರೆ ಹಾಗೆ ವ್ಯವಸ್ಥೆಮಾಡಲು ಸಾಧ್ಯವಿದೆ."

ಎಲ್ಲರಿಗೂ ಆಗ ಬಂದೊದಗಿವ ಗಂಡಾಂತರದಿಂದ ವಿಮೋಚನೆಯಾದಂತಾಯಿತು.

"ಬೇರೇನು.... .........?" ಕೊನ್ವಲಿಂಕಾ ಕೇಳಿದ. ಸಕಾಲದಲ್ಲಿ ಯಾವ ತೊಂದರೆಯನ್ನೂ ತನ್ನ ಗಮನಕ್ಕೆ ತಂದರೆ ತಾನದನ್ನು ಪರಿಹರಿಸಲು ಸಿದ್ಧನಾಗಿರುವೆನೆಂಬ ಧೈರ್ಯ ಅವನ ಧ್ವನಿಯಲ್ಲಿತ್ತು.

ಕೊನೆಯ ಘಳಿಗೆ......... ..." ಎಂದು ಸ್ಕಾಲ್ಸಿಕ್ಕ ಸಾವಧಾನವಾಗಿ ತಾಳ್ಮೆಯಿಂದ ಗಂಭೀರವಾಗಿ ನುಡಿದನು.

"ಓಹ್! ಹೌದು!" ಎಂದು ಡಾಕ್ಟರ್ ಸ್ವೆಕ್ ಉದ್ಗರಿಸಿದರು. ಜೆಕೊಸ್ಲೊವಾಕಿಯದಿಂದ ತನ್ನ ಕೊನೆಯ ರೈಲು ಪ್ರಯಾಣವನ್ನು ಮಾಡುವ ಮೊದಲು ಅತಿ ಶೀಘ್ರವಾಗಿ ಹಾಗೂ ರಹಸ್ಯವಾಗಿ ಮಾಡಬೇಕಾದ ಸಿದ್ಧತೆಗಳು ಒಂದೊಂದಾಗಿ ಅವರ ಕಣ್ಣುಮುಂದೆ ಸ್ವಪ್ನದಲ್ಲಿ ಕಂಡಂತೆ ತೋರಿದುವು.

ತಾವು ಮಾಡಿದ ನಿರ್ಧಾರವು ಕೊನೆಯದೆಂಬುದನ್ನು ತಿಳಿಯದವರೂ ಆ ಮೌನವಾದ, ಪರದೆಗಳನ್ನು ಇಳಿಬಿಟ್ಟಿದ್ದ, ಕೋಣೆಯಲ್ಲಿ, ಯಾರು, ಇರಲಿಲ್ಲ.

ಅಪ್ಪಣೆಯಿಲ್ಲದೆ ಕೆಲಸಕ್ಕೆ ಹೋಗದ ಸೈನಿಕನೊಬ್ಬನಾದರೂ ಕೂಡ ತನ್ನ ವಿಚಾರಣೆ ಮತ್ತು ಅದರಿಂದೊದಗಬಹುದಾದ ಶಿಕ್ಷೆಗಳನ್ನೆದುರಿಸಲು ಸಿದ್ಧನಿದ್ದರೆ ತನ್ನ ಕೆಲಸಕ್ಕೆ ಮರಳಬಹುದು; ಆದರೆ ಈ ಜನರಿಗೆ ಮರಳುವ ಪ್ರಶ್ನೆಯೇ ಇರಲಿಲ್ಲ— ಒಮ್ಮೆ ನಿರ್ಧಾರಮಾಡಿ ಕಾರ್ಯಾರಂಭಮಾಡಿದ ಮೇಲೆ ಅವರಿಗೆ ಮರಳಲು ಅವಕಾಶವೇ ಇರಲಿಲ್ಲ. ಅವರು ಬಾಲ್ಯದಿಂದ ಆತನಕ ಬೆಳೆದ ತಮ್ಮ ಸ್ವಂತ ದೇಶದಿಂದ ತಾವಾಗಿಯೇ ಉಚ್ಚಾಟನೆಮಾಡಿಕೊಳ್ಳುತ್ತಿದ್ದರು. ಅಲ್ಲಿದ್ದ ತಮ್ಮ ಸಂಬಂಧಗಳನ್ನೆಲ್ಲ ಕಡಿದುಕೊಳ್ಳುತ್ತಿದ್ದರು. ತಮ್ಮ ಸುಲಭದ ಸ್ವಭಾವಕ್ಕನುಗುಣವಾದ ಜೀವನ ಪದ್ಧತಿಯನ್ನು ಕಿತ್ತೊಗೆಯುತ್ತಿದ್ದರು. ತಮ್ಮ ವ್ಯಾಪಾರ ಸಂಬಂಧ, ವೃತ್ತಿ ಮತ್ತು ಪರಿಚಿತ ವಾತಾವರಣದಲ್ಲಿ ಜೀವಿಸುವಾಗ ದೊರೆಯುವ ಮನಸ್ಸಮಾಧಾನ—ಇವುಗಳನ್ನೆಲ್ಲ ತೊಡೆದುಹಾಕಿ, ತಮ್ಮನ್ನು ತಾವೇ ನ್ಯಾಯಬಾಹಿರರನ್ನಾಗಿಮಾಡಿಕೊಳ್ಳುತ್ತಿದ್ದರು. ಒಮ್ಮೆ ಒಂದು ನಿರ್ಧಾರಮಾಡಿ ಅದರ ಕಾರ್ಯಾಚರಣೆಯನ್ನು ಆರಂಭಿಸಿದ ಬಳಿಕ ಆ ನಿರ್ಧಾರದಿಂದ ಹಿಂತೆಗೆಯುವುದು ಸಾಧ್ಯವಿರಲಿಲ್ಲ— ಆ ಕಾರ್ಯಾಚರಣೆಯಲ್ಲಿ ಹಿಂದೆ ಕಾಲ್ತೆಗೆಯುವ ಪ್ರಶ್ನೆಯೇ ಇಲ್ಲ.

ಮುಂದೆ ಸ್ವಾತಂತ್ರ್ಯವಿದೆ—ಆದರೆ ಅಂದು ಫ್ರಾಂಜೆನ್ಸ್‌ಬಾಡ್‌ನ ಆ ಮನೆಯಲ್ಲಿದ್ದ ಮೇಜಿನ ಸುತ್ತಲು ಮಕ್ಕಳು ಯಾರೂ ಇರಲಿಲ್ಲ; ಸ್ವಾತಂತ್ರ್ಯವನ್ನು ಎಂದೂ ಯಾರೂ ತಮಗೆ ನಿರಾಕರಿಸಲಿಕ್ಕಿಲ್ಲವೆಂದು ಅವರೆಲ್ಲರೂ ತಿಳಿದಿದ್ದರೂ, ಸ್ನೇಹ ಸಂಬಂಧಮಾತ್ರ ಕೂಡಲೆ ಬೆಳೆಯದಿರಬಹುದು ಎಂದು ಅವರಿಗೆ ಸಂದೇಹವಿತ್ತು. ಎಷ್ಟೋ ದ್ವೇಷಗಳನ್ನು ಇದಿರಿಸಲಿಕ್ಕಿರಬಹುದು; ಈ ವಿಜಯೋನ್ಮಾದದ ಕ್ಷಣಿಕ ಉತ್ಸಾಹ ಬೇಗನೇ ಮಾಯವಾಗಬಹುದು; ಆಕ್ಷಣದ ನೆನಪು ಮತ್ತಿನ ನೀರಸ ಜೀವನದಲ್ಲಿ ಮರೆತುಹೋಗಬಹುದು; ಅಪರಿಚಿತ ವಾತಾವರಣದಲ್ಲಿ, ಅಪರಿಚಿತ ಜನರಮಧ್ಯೆ, ಅವರ ಸ್ವಂತ ಕಷ್ಟದೊಡನೆ ತಮ್ಮ ಹಿಂದಿನ ಕರ್ತವ್ಯಗಳನ್ನು ಮಾಡಬೇಕಾಗಬಹುದು.

ಹೌದು.......ಸ್ವಾತಂತ್ರ್ಯದ ನಿರೀಕ್ಷಣೆಗೆ ಇನ್ನೊಂದು ಮುಖವಿತ್ತು.

ಆದರೆ ಈ ನಿರ್ಧಾರದ ಕುರಿತು ಯಾರೂ ಹಿಂದೆ ಮುಂದೆ ನೋಡಲಿಲ್ಲ. ಟ್ರಿಕ್ಸಾ ಏನೊಂದೂ ಸಂದೇಹವಿಲ್ಲದೆ, " ಸರಿ........ತಾರೀಕು ಕೂಡಾ ನಿಶ್ಚಯವಾಗಿದೆ. ಅದು ಸೆಪ್ಟೆಂಬರ್ 11. ಅದೇ ಕೊನೆಯ ಘಳಿಗೆ. ಅದು ಬರುವ ಬುಧವಾರಕ್ಕೆ ಬೀಳುತ್ತದೆ. ಇವತ್ತು ಶನಿವಾರ. ಆದ್ದರಿಂದ ಈ ವಾರಾಂತ್ಯದಲ್ಲಿ ನಾವು ಎಲ್ಲ ಏರ್ಪಾಡುಗಳನ್ನು ಮಾಡಬೇಕು. ಮುಂದಿನ ಮಂಗಳವಾರದೊಳಗೆ ಎಲ್ಲವನ್ನೂ ಸಂಪೂರ್ಣವಾಗಿ ನಾವು ಮುಗಿಸಬೇಕು. ಆದ್ದರಿಂದ ನಾವು ಸೋಮವಾರ ಇಷ್ಟೇ ಸಮಯಕ್ಕೆ ಇಲ್ಲಿ ಕೂಡಬೇಕು. ಅಂದು 9 ನೇ ತಾರೀಕು ಆಗುತ್ತದೆ. ಅಷ್ಟರೊಳಗೆ ಎಲ್ಲವೂ ಮುಗಿಯದಿದ್ದರೆ, ಕೊನೆಯ ನಿಮಿಷಗಳ ತನಕ ಪ್ರಯತ್ನಿಸಬಹುದು. ನೀವೆಲ್ಲರೂ ಒಪ್ಪಿದಿರಷ್ಟೆ ? "

ಎಲ್ಲರೂ ಗೋಣಗುಟ್ಟುತ್ತ ಸಮ್ಮತಿಸಿದರು.

" ಯಾವ ರೈಲಿನಲ್ಲಿ ನಾವು ಹೋಗುವುದೆಂಬ ಯೋಚನೆಯಿದೆಯೆ ?" ಸ್ಕಾಲ್ಸಿಕ ಪ್ರಶ್ನಿಸಿದ.

ಕೊನ್ಪಲಿಂಕಾ ಟ್ರಿಕ್ಸಾನನ್ನು ನೋಡಿದ; ಟ್ರಿಕ್ಸಾ ರೈಲುಗಳನ್ನು ಕಳಿಸುವವನಾದ್ದರಿಂದ ಅವನೇ ಆ ಪ್ರಶ್ನೆಗೆ ಉತ್ತರಿಸಿದ.

" ಸರಿ.......ಆ ವಿಚಾರದಲ್ಲಿ ಕೊನೆಯ ನಿರ್ಧಾರವನ್ನು ಮಾಡಲು ಈಗ ಸಮಯವಾಗಿಲ್ಲ. ಕೊನ್ಪಲಿಂಕಾ ತನಗೆ ಡ್ರೈವರನನ್ನು ಬದಲಿಸಲು ಸಾಧ್ಯವಿರುವ ರೈಲುಬಂಡಿಯನ್ನು ಮೊದಲು ಕಂಡುಹಿಡಿಯಬೇಕು. ಈ ಪರಿಸ್ಥಿತಿಯಲ್ಲಿ ಇದಕ್ಕೆ ನನಗೆ ಉತ್ತರಕೊಡುವುದು ಸಾಧ್ಯವಿಲ್ಲ. ಆದರೆ ನಾನು ಅದನ್ನು ಎಲ್ಲರಿಗೂ ಮುಂದಾಗಿಯೇ ತಿಳಿಸುತ್ತೇನೆ. ಬೇರೇನಾದರೂ ಪ್ರಶ್ನೆಗಳಿವೆಯೆ....? "

ಮತ್ತೆ ಯಾರೂ ಏನನ್ನೂ ಕೇಳಲಿಲ್ಲ. ನೆರೆದವರು ಚೆದರಿದರು.

* * * *

ಸೆಪ್ಟೆಂಬರ್ 7 ರಿಂದ 10 ರ ತನಕದ ಅವಸರದ " ಸಂಘಟನೆಯ ದಿನ " ಗಳಲ್ಲಿ ಟ್ರಿಕ್ಸಾ, ಕೊನ್ಪಲಿಂಕಾ ಮತ್ತು ಡಾಕ್ಟರ್ ಸ್ಟೆಕ್‌ರನ್ನೊಳಗೊಂಡ ಆಡಳಿತ ಸಮಿತಿಯು ಹಲವಾರು ಬಾರಿ ಕೂಡಿತು. ಪಲಾಯನ ಕೂಟದೊಡನೆ ಭಾಗವಹಿಸಲಿಚ್ಛಿಸುವವರಿಗೆ ಸಂದೇಶಗಳನ್ನು ಕಳುಹಿಸುವ ಕೆಲಸ ಈ ಮೂವರ ಹೆಂಡಂದಿರ ಪಾಲಿಗೆ ಬಿದ್ದಿತ್ತು. ಸ್ಕಾಲ್ಸಿಕ ಮತ್ತು ಲೊಸ್ಕೊಟ್ ಗುಪ್ತ ಪೋಲೀಸರಿಗೆ

ಅತಿ ಪರಿಚಿತರಿದ್ದುದರಿಂದ ಅವರಿಗೆ ಯಾವ ಕೆಲಸವನ್ನೂ ಕೊಡಲು ಸಾಧ್ಯವಿರಲಿಲ್ಲ. ಸ್ಕಾಲ್ಸ್ಕಿಗೆ ಈ ಪ್ರತಿಬಂಧಿತ ಸ್ಥಬ್ಧತೆಯನ್ನು ಸಹಿಸುವುದು ಸಾಧ್ಯವಿರಲಿಲ್ಲ. ಲೊಸ್ಕೊಟ್ ಕೂಡಾ ತನ್ನ ಸ್ವಭಾವ ಸಿದ್ಧವಾದ ಕಳವಳದ ಪ್ರವೃತ್ತಿಯನ್ನೇ ಸಾಕಷ್ಟುಮಟ್ಟಿಗೆ ಹಿಮ್ಮೆಟ್ಟಿಸಿ, ಗುಂಪಿನ ಮುಂದಾಳುಗಳು ತನಗೂ ಏನಾದರೂ ಕೆಲಸವನ್ನು ಕೊಡುವರೋ ಎಂದು ಆಶಿಸುತ್ತಿದ್ದ.

"ಲೊಸ್ಕೊಟ್, ಯಾವ ಪರಿಸ್ಥಿತಿಯಲ್ಲೂ, ಯಾವ ಕೆಲಸಕ್ಕೂ ಆಗಲಿಕ್ಕಿಲ್ಲ, ಆದರೆ .....ನಾವು ಹೊರಡುವ ಮೊದಲು ಸ್ಕಾಲ್ಸ್ಕಿಯಿಂದ ಒಂದು ಪ್ರಯೋಜನವಾಗಬಹುದೆಂದು ತೋರುತ್ತದೆ" ಎಂದು ಟ್ರ್ರಿಕ್ಸಾ ಆಯಾಯಾ ವ್ಯಕ್ತಿಗಳ ಉಪಯುಕ್ತತೆಯನ್ನು ಚರ್ಚಿಸುವಾಗ ಸಮಿತಿಗೆ ತಿಳಿಸಿದ್ದ.

ಈ ಅಸ್ಪಷ್ಟ ಭರವಸೆಯನ್ನು ಕೇಳಿ ಸ್ಕಾಲ್ಸ್ಕಿ ಸ್ವಲ್ಪ ಶಾಂತನಾದ. ಟ್ರ್ರಿಕ್ಸಾ ಏನು ಹೇಳಿದರೂ ತಾನು ಮಾಡುವೆನೆಂದು ಅವನು ನಿಶ್ಚೈಸಿದ.

ಯಾವ ರೈಲುಬಂಡಿಯಲ್ಲಿ ಕುಳಿತುಕೊಳ್ಳಬೇಕೆಂಬ ಚರ್ಚೆಯು ಬಹಳ ಮುಂದರಿದು ಕೊನೆಗೆ ಆಸ್ಟ್ಚ ಪಟ್ಟಣಕ್ಕೆ ಮಧ್ಯಾಹ್ನ ಮೂರು ಗಂಟೆಗೆ ತಲಪುವ ರೈಲನ್ನೇ ವಶಪಡಿಸಿಕೊಳ್ಳುವುದೆಂದು ಅವರು ನಿರ್ಧರಿಸಿದರು. ಹಾಗಾದರೆ ಪಿತೂರಿಗಾರರೆಲ್ಲರೂ 11 ನೇ ತಾರೀಕಿನಂದು ಬೆಳಗ್ಗೆ ಬೇರೆ ಬೇರೆ ಕಡೆ ಒಟ್ಟು ಸೇರಲು, ಸಾಕಷ್ಟು ಸಮಯವೂ ದೊರಕುತ್ತದೆ ಎಂದು ಅವರು ನಿಶ್ಚೈಸಿದರು. ಏಕೆಂದರೆ ಬೇರೆ ಬೇರೆ ಜನರು ಬೇರೆ ಬೇರೆ ನಿಲ್ದಾಣಗಳಲ್ಲಿ ರೈಲು ಹತ್ತುವೆವೆಂದು ಹೇಳಿದ್ದರು. ಇದರಿಂದಾಗಿ ಇಡೀ ಕೂಟವನ್ನೇ ಎಲ್ಲಾದರೂ ಬಂಧಿಸುವ ಅಪಾಯಕರ ಸಂಭವ ತೀರ ಕಡಿಮೆಯಾಗಿತ್ತು.

ಎಗರ್ ಪಟ್ಟಣದಿಂದ ಕೊಮೊಟೋ ಪಟ್ಟಣದಿಂದಾಗಿ, ಪ್ರೇಗಿಗೆ ಒಂದು ರೈಲು ಬಂಡಿ ಬೆಳಗ್ಗೆ ಬಹಳ ವೇಗವಾಗಿ ಓಡುತ್ತದೆ. ಅದರ ಡ್ರೈವರು ಕೊಮೊಟೋದಲ್ಲಿ ನಿಂತು ತನ್ನ ಎಂಜಿನನ್ನು ಪ್ರೇಗಿನಿಂದ ಬರುವ ರೈಲು ಬಂಡಿಗೆ ಜೋಡಿಸಿ ಅದನ್ನು ಎಗರ್‌ಗೆ ತರುತ್ತಾನೆ. ಅವನು ಎಗರ್ ಪಟ್ಟಣಕ್ಕೆ ತಲಪುವಾಗ ಮಧ್ಯಾಹ್ನವಾಗುತ್ತದೆ. ಅವನು ಎಗರ್‌ನಿಂದ ಬೆಳಗ್ಗೆ ಕೊಂಡು ಹೋದ ರೈಲು ಬಂಡಿಯು ಕೊಮೋಟೋದಿಂದ ಮತ್ತೊಬ್ಬ ಡ್ರೈವರನಿಂದ, ಅಂದರೆ ಪ್ರೇಗಿನಿಂದ ಅಲ್ಲಿವರೆಗೆ, ಎಗರ್‌ಗೆ ಹೋಗುವ ಬಂಡಿಯನ್ನು ತಂದ ಡ್ರೈವರನಿಂದ, ಅದು ಪ್ರೇಗಿಗೆ ನಡೆಸಲ್ಪಡುತ್ತದೆ.

ಎಗರ್‌ಗೆ ಆ ಡ್ರೈವರನು ಮಧ್ಯಾಹ್ನ ಅಲ್ಲಿಗೆ ತಲಪಿದ ಬಳಿಕ, ಸಾಮಾನ್ಯವಾಗಿ ಬೇಗನೆ ತನ್ನ ಊಟ ತೀರಿಸುತ್ತಾನೆ. ಮಧ್ಯಾಹ್ನ ಇಲ್ಲವೇ ಸ್ವಲ್ಪ ಹೊತ್ತಿನ ಬಳಿಕ ಪ್ರೇಗಿನಿಂದ, ಪಿಲ್ಸೆ಼ ಪಟ್ಟಣದ ದಾರಿಯಾಗಿರುವ ಒಂದು ರೈಲು ಬಂಡಿ ಎಗರ್ ಪಟ್ಟಣವನ್ನು ತಲುಪುತ್ತದೆ. ಎಗರ್‌ನಲ್ಲಿ ಬರುವ ಕೊನೆಯ ಮೂರು ಬಂಡಿಗಳನ್ನು ಬಿಟ್ಟು, ಆ ರೈಲು ಅಲ್ಲಿಂದ ಫ್ರಾಂಜೆನ್ಸ್ ಬಾಡ್ ಮತ್ತು ಹಾಸ್ಲೊವ್‌ಗಳನ್ನು ಹಾದು ಆಸ್ಚ್ ಪಟ್ಟಣಕ್ಕೆ ಮುಂದುವರಿಯುತ್ತದೆ. ಮಧ್ಯಾಹ್ನ 2:05 ಗಂಟೆಗೆ ಎಗರ್‌ನಿಂದ ಹೊರಡುವ ಈ ಪ್ರೇಗ್—ಪಿಲ್ಸೆ಼ ಎಗರ್ ರೈಲು ಬಂಡಿಯನ್ನು, ಕೊಮೊಟೋದಿಂದ ಎಗರ್‌ಗೆ ಮಧ್ಯಾಹ್ನ ರೈಲುಬಂಡಿಯನ್ನು ನಡೆಸಿದ ಡ್ರೈವರನೇ ನಡೆಸುತ್ತಾನೆ.

ಡ್ರೈವರರ ಕಾರ್ಯಕ್ರಮದ ಪಟ್ಟಿಯ ಮೇರೆಗೆ ಪ್ರೇಗ್— ಪಿಲ್ಸೆ಼ ಎಗರ್ ಎಕ್ಸ್‌ಪ್ರೆಸ್ಸಿನ ಡ್ರೈವರನು ಎಗರ್‌ನಲ್ಲಿ ಊಟ ಮಾಡುತ್ತಾನೆ. ಎಗರ್-ಕೊಮೊಟೊ-ಕೊಮೊಟೋ-ಎಗರ್ ಡ್ರೈವರನು ಬಂಡಿಗಳನ್ನು ಬದಲಿಸಿ, ಪ್ರೇಗ್–ಪಿಲ್ಸೆ಼–ಎಗರ್ ಎಕ್ಸ್‌ಪ್ರೆಸ್ಸಿನ–ಇದರ ನಂಬರು 185–ಮೂರು ಗಾಡಿಗಳನ್ನು ತನ್ನ ಎಂಜಿನ್ನಿಗೆ ಜೋಡಿಸುತ್ತಾನೆ. ಇನ್ನು ನಂಬರು 185 ನೇ ರೈಲು ಬಂಡಿ ಎಂಬ ಹೆಸರಿನಲ್ಲೇ ಅವನು ಅದನ್ನು ಮಧ್ಯಾಹ್ನ 2:05 ಗಂಟೆಗೆ ಎಗರ್‌ನಿಂದ, ಜೆಕ್–ಜರ್ಮನಿಯ ಗಡಿಯಲ್ಲಿರುವ ಕೊನೆಯ ಪಟ್ಟಣವಾದ ಆಸ್ಚ್‌ಗೆ ನಡೆಸುತ್ತಾನೆ. ಬೆಳಗ್ಗೆ ಎಗರ್‌ನಿಂದ ಕೊಮೋಟೋಗೆ ಹೋಗುವ ರೈಲು ಬಂಡಿಯ ಡ್ರೈವರನೇ ಮಧ್ಯಾಹ್ನ 2:05 ಗಂಟೆಯ ರೈಲನ್ನು ಎಗರ್‌ನಿಂದ ಆಸ್ಚ್‌ಗೆ ಕೊಂಡು ಹೋಗಬೇಕೆಂದು ಪಿತೂರಿಗಾರರ ಹೂಡಿದ ಉಪಾಯದ ಮುಖ್ಯಾಂಶವಾಗಿತ್ತು.

ಕೊನ್ವಲಿಂಕಾನು ಸೆಪ್ಟೆಂಬರ್ 6 ರಂದು ಫ್ರಾಂಜೆನ್ಸ್‌ಬಾಡ್‌ನಲ್ಲಿ ಟ್ರ್ರಿಕ್ಸಾನ ಉಪಾಯವನ್ನು ತಿರಸ್ಕರಿಸಿದ ದಿನ ಎಗರ್–ಆಸ್ಚ್ ಮಧ್ಯಾಹ್ನ 2:05 ಗಂಟೆಯ ರೈಲಿಗೆ ಅಂತೋನೀ಼ ಕುವಾಸೆಕ್ ಎಂಬ ಶುದ್ಧ ಕಮ್ಯುನಿಸ್ಟನು ಡ್ರೈವರನಾಗಿದ್ದ.

“ ನಮಗೆ ಅನುಕೂಲನಾದ ಡ್ರೈವರನು ಅದರಲ್ಲಿ ಬರುವವರೆಗೆ ನಾವೇಕೆ ಕಾಯಬಾರದು....? ಎಂದು ಡಾಕ್ಟರ್ ಸ್ವೆಕ್‌ರು ಹೇಳಿದರು.

ಕೊನ್ವಲಿಂಕಾ ತಲೆಯಲ್ಲಾಡಿಸಿದನು.

ಅವನೂ ಪಿತೂರಿಗೆ ಸೇರದೆ ಇದ್ದಲ್ಲಿ... ಅವನ ಕುಟುಂಬಕ್ಕೆ ಅಪಾಯ ಸಂಭವಿಸಬಹುದಿತ್ತು. ಆದರೆ ನಾವು ನಿರಾಶೆಪಡುವುದು ಬೇಡ. ಕುವಾಸೆಕ್ ತನ್ನ ಸ್ಥಾನವನ್ನು ನನಗೆ ಬಿಟ್ಟು ಕೊಡುವಂತೆ ಮಾಡಲು ನನಗೆ ಒಂದು ಉಪಾಯ ಹೊಳೆದಿದೆ. ಬೇರೆ ತಂತ್ರಗಳನ್ನು ಯೋಚಿಸಲು ಸಾಕಷ್ಟು ಸಮಯವಿದೆ...."

ಕೊನ್ವಲಿಂಕಾ ಮರು ದಿನ ಕುವಾಸೆಕ್‌ನನ್ನು ಅಕಸ್ಮಾತ್ತಾಗಿ ಬೀದಿಯಲ್ಲಿ ಸಂಧಿಸಿದ. ಇಬ್ಬರೂ ರಸ್ತೆಯಲ್ಲಿ ಮಾತಾಡಲು ಪರಸ್ಪರ ಹತ್ತಿರ ಬಂದರು. ಕೊನ್ವಲಿಂಕಾ ಈ ಸಂದರ್ಭನ್ನು ಸಾಧಿಸಲು ಕುವಾಸೆಕ್‌ನನ್ನು ಸಮೀಪದ ಮದ್ಯದಂಗಡಿಗೆ ಕರೆದುಕೊಂಡು ಹೋದ.

ಗಿಡ್ಡಗಾಗಿ ದಪ್ಪನಾಗಿದ್ದ ಕುವಾಸೆಕ್‌ಗೆ ಸೆಕೆಯಾಗುತ್ತಿತ್ತು. ಹೊರಗೆ ಬಿಸಿಲು ಉರಿಯುತ್ತಿತ್ತು. ತನ್ನ ಹಣೆಯ ಬೆವರನ್ನು ಹೊಲಸಾದ ಕರವಸ್ತ್ರದಲ್ಲಿ ಉಜ್ಜಿಕೊಳ್ಳುತ್ತ ಕುವಾಸೆಕ್ ಅಸೂಯೆಯಲ್ಲಿ,

"ಈ ಹವೆಯಲ್ಲಿ ರಜೆ ಪಡೆದ ನೀನು ಅದೃಷ್ಟಶಾಲಿ ಕೊನ್ವಲಿಂಕಾ! ನನಗೂ ಸ್ವಲ್ಪ ವಿಶ್ರಾಂತಿ ಸಿಗುತ್ತಿದ್ದರೆ ಒಳ್ಳೆಯದಿತ್ತು...." ಎಂದನು.

ಬೀರ್ ಬಂತು. ಇಬ್ಬರೂ ಕುಡಿದರು.

"ಸರಿ ನೀನು ಒಂದು ದಿನ ರಜೆ ಪಡೆದು ನನಗೆ ಸಣ್ಣ ಉಪಕಾರ ಮಾಡಲಾರೆಯಾ?" ಎಂದು ಕೊನ್ವಲಿಂಕಾ ಗ್ಲಾಸನ್ನು ಕೆಳಗಿಟ್ಟು ಕೇಳಿದನು.

"ಕುವಾಸೆಕ್ ಕಣ್ಣರಳಿಸಿ "ಸಣ್ಣ ಉಪಕಾರ!" ಎಂದ.

"ನಿಜವಾಗಿಯೂ ದೊಡ್ಡ ಉಪಕಾರ ಅದು." ಎಂದು ಕೊನ್ವಲಿಂಕಾ ಅತ್ತಿತ್ತ ನೋಡಿ ರಹಸ್ಯವೆಂಬಂತೆ ನಟನೆ ಮಾಡುತ್ತ "ಅದು ಏನೆಂದು ನಾನು ನಿನಗೆ ಹೇಳುತ್ತೇನೆ. ಸೀಬೆ ಹಣ್ಣುಗಳು...."

"ಸೀಬೆ ಹಣ್ಣುಗಳು....?"

ಕೊನ್ವಲಿಂಕಾ ಕಣ್ಣನ್ನು ಕೊಂಕಿಸಿ ಮೂಗಿನ ಮೇಲೆ ಬೆರಳಿಟ್ಟ.

"ಅಲ್ಲೇ, ನಿನಗೆ ತಿಳಿಯಿತೆ....? ಒಬ್ಬರಿಗೆ ಒಂದು ಚಿಕ್ಕ ಉಡುಗೊರೆ ಅಷ್ಟೆ. ಇದನ್ನು ಮಾಡಿದರೆ ನನಗೂ ಸ್ವಲ್ಪ ಹಣ್ಣುಗಳು ಸಿಗಬಹುದು ... ಕೊಮೊಟೋವಲ್ಲಿ ರೈಲುಗಳಲ್ಲಿ ನಾವು ಸ್ವಂತ ಒಡವೆಗಳನ್ನು ಕೊಂಡು ಹೋಗಬಾರದೆಂಬುದು ನನಗೆ ಗೊತ್ತಿದೆ, ಆದರೆ.... ಸರಿ, ಕಣ್ಣು ಏನೇನನ್ನೆಲ್ಲ

ನೋಡುವುದಿಲ್ಲ? ಆದ್ದರಿಂದ... ಮಂಗಳವಾರದ ದಿನ ನಿನ್ನ ಬಂಡಿಯನ್ನು ನಾನು ನಡೆಸಬಹುದೆ? ಅಂದು ಸೀಬೆ ಹಣ್ಣುಗಳು ಸಿದ್ಧವಾಗುತ್ತವೆ. ಅವು ನನಗೆ ದೊರೆತರೂ, ನಿನಗೂ ಅವುಗಳಲ್ಲಿ ಒಂದು ಪಾಲು ಇದೆ. ನಿನಗೆ ಒಂದು ದಿನ ರಜೆಯೂ ಸಿಗುತ್ತದೆ."

ಕುವಾಸೆಕ್ ಸಂದೇಹಗೊಂಡವನಂತೆ ತೋರಲಿಲ್ಲ. ಅವನು ಮುಖ್ಯ ವಾಗಿ "ಕ್ರಮ ಬದ್ಧನಾಗಿ" ನಡೆಯುವ ಮನುಷ್ಯನು. ಕಮ್ಯುನಿಸ್ಟ್ ರಾಜ್ಯ ದಲ್ಲಿ ತಾನು ತನ್ನ ಜೀವನ ಸಾಗಿಸಲು ಎಂದಿಗೂ ಯಾವ ಸ್ವಂತ ನಿರ್ಧಾರವನ್ನು ಮಾಡುವ ಅಪಾಯಕರವಾದ ಅವಶ್ಯವೇ ಇಲ್ಲವೆಂಬ ವಿಷಯ ಅವನ ಮನ ಸ್ಸನ್ನು, ಕಮ್ಯುನಿಸ್ಟ್ ರಾಜ್ಯದ ಕಡೆಗೆ, ಆಕರ್ಷಿಸುತ್ತಿತ್ತು.

ಅವನಿಗೆ ಆಗ ತುಸು ಅಸಮಾಧಾನವಾಯಿತು. ಒಂದೆಡೆಯಿಂದ ಕೊನ್ಪಲಿಂಕಾನ ಕೇಳಿಕೆಯನ್ನು ತಿರಸ್ಕರಿಸಲು ಭಯ ಮತ್ತು ಇನ್ನೊಂದು ಕಡೆ ಕೆಲಸ ಹೋದೀತೆಂಬ ಭಯ. ಹೀಗೆ ಉಭಯ ಸಂಕಟಪಡುತ್ತ "ಸರಿ, ಕೊನ್ಪಲಿಂಕಾ.... ನನಗೆ ಅದು ಗೊತ್ತಿಲ್ಲ. ನಿಜವಾಗಿಯೂ ಗೊತ್ತಿಲ್ಲ. ನೀನೆ ಣಿಸುವಷ್ಟು ಸುಲಭವಾಗಿಲ್ಲ ಅದು" ತಾನೇನು ಮಾಡಬೇಕೆಂಬ ಕಳವಳ ದಲ್ಲಿ ಅವನು ಕೊನ್ಪಲಿಂಕಾನನ್ನು ವೇದನಾಮಯ, ಹುಂಬತನ, ಹಾಗೂ ಅಸಮಾಧಾನದ ದೃಷ್ಟಿಯಿಂದ ನೋಡಿದನು. ಆ ಬಳಿಕ ನೀರಸ ಧ್ವನಿಯಲ್ಲಿ, ನಿನ್ನ ಹಾಳಾದ, "ಸೀಬೆ ಹಣ್ಣುಗಳ ವಿಚಾರ ನನಗೆ ತಿಳಿಯದು. ಅಲ್ಲದೆ.... ಟ್ರುಕ್ಸಾ ಏನೆಂದಾರು? ನೀನು ಅವರನ್ನು ಕೇಳಬೇಕು. ಅವರನ್ನು ನೀನು ಕೇಳು. ಅವರು ಇಂಥ ಅಕ್ರಮಗಳನ್ನು ಮೆಚ್ಚುವುದಿಲ್ಲ. ಆದ್ದರಿಂದ ಇದು ಅವರ ಮೇಲೆ ಹೊಂದಿಕೊಂಡಿದೆ, ನನ್ನ ಮೇಲಲ್ಲ...." ಕೊನ್ಪಲಿಂಕಾ ಅವನ ಕೋಪವನ್ನು ಕಂಡು ನಕ್ಕ.

"ಕುವಾಸೆಕ್, ನೀನು ಇದಕ್ಕೆ ಮಾತ್ರ ಚಿಂತಿಸುತ್ತಿರುವುದೇ? ಟ್ರುಕ್ಸಾ ಸಮ್ಮತಿಸಿದರೆ ನೀನು ಒಪ್ಪುವಿಯಾ?"

ತನ್ನ ಸಂದೇಹಮಯ, ಭಯಪೀಡಿತ ಸ್ವಭಾವಕ್ಕನುಸರಿಸಿ ಯಾವಾ ಗಲೂ ತಂತ್ರಗಳಲ್ಲಿ ಸಿಕ್ಕಿ ಬೀಳದಂತೆ ಜಾಗರೂಕನಿದ್ದ, ಕುವಾಸೆಕ್‌ನು ಹೆಗಲು ಹಾರಿಸಿದನು.

"ನಾನು... ಒಪ್ಪಬಹುದು...."

ಎಂದ.

"ಯಾಕೆಂದರೆ ಟ್ರ್ರಿಕ್ಸಾನನ್ನು ಇಂದು ಬೆಳಗ್ಗೆ ನಾನು ಕಂಡಿದ್ದೆ. ಅವರು ಉಲ್ಲಾಸದಿಂದಿದ್ದರು. ಅವರೇನೂ ಉಪದ್ರವ ಕೊಡಲಿಕ್ಕಿಲ್ಲ...."

ಕುವಾಸೆಕ್ ತಾನು ಹಿಡಿದಿದ್ದ ಸಿಗರೇಟಿನ ಕಡೆಗೆ ಹುಬ್ಬು ಗಂಟಿಕ್ಕಿ ನೋಡಿದನು. ದಪ್ಪವಾಗಿರದಿದ್ದರೆ, ಇಲ್ಲವೇ ಅಷ್ಟು ಸೆಕೆಯಿಲ್ಲದಿರುತ್ತಿದ್ದರೆ ಅವನಿಗೆ ಆ ಪ್ರಲೋಭನವಾಗುತ್ತಿದ್ದಿಲ್ಲ. ಸೆಕೆಯಲ್ಲಿ ಕೆಲಸ ಮಾಡುವುದು ಅವನಿಗೆ ಹಿಡಿಯದು. ಆಗ ಅವನು ಒಂದು ತಂಪಾದ ಹೊಟೇಲಿನಲ್ಲಿ ಕುಳಿತು ಕೊಳ್ಳಲಿಕ್ಕೊ ಇಲ್ಲವೇ ಮದ್ಯದ ಒಂದು ಬಾಟ್ಲಿಯನ್ನು ಬದಿಯಲ್ಲಿಟ್ಟುಕೊಂಡು ಮುಖದ ಮೇಲೆ ಕರವಸ್ತ್ರವನ್ನೊಂದು ಹೊದೆದು ಮರದ ನೆರಳಿನಲ್ಲಿ ಮಲಗ ಲಿಕ್ಕೋ ಬಯಸುತ್ತಿದ್ದನು.

ಆದ್ದರಿಂದ ಹವೆಯೇ ಅವನ ನಿರ್ಧಾರಕ್ಕೆ ಕಾರಣವಾಗಿತ್ತು. ಅವನಿನ್ನೂ ಹೆದರಿದ್ದ. ಆದರೆ ಅವನಿಗೆ ಈ ಸಂದರ್ಭದ ಲಾಭ ಪಡೆಯಬೇಕೆಂದಿತ್ತು. ಅಧಿಕಾರಿಗಳಿಗೆ ಈ ಬದಲಾವಣೆ ಎಂದೂ ತಿಳಿಯದೆಂದು ಅವನು ಯೋಚಿಸಿದ.

"ಆಯಿತು, ಕೊನ್ನಲಿಂಕಾ, ನನ್ನ ಅಡ್ಡಿಯಿಲ್ಲ...."

"ಹಾಗಾದರೆ ಆದೀತೇ? ಕುವಾಸೆಕ್, ನೀನು ಖಂಡಿತ ಹಾಗೆ ಮಾಡುವಿಯಲ್ಲ?" ಅವನು ಕೈಗಳನ್ನು ತಿಕ್ಕಿಕೊಳ್ಳುತ್ತ "ಒಳ್ಳೆಯದು. ನನ್ನ ಸೀಬೆಹಣ್ಣುಗಳು ನನಗೆ ಸಿಗುವುವು..." ಎಂದ, ಕೊನ್ನಲಿಂಕಾನು ಪ್ರಶ್ನಿಸಿದನು. ಆಗ ಅವನು ತನ್ನ ಧ್ವನಿಯಲ್ಲಿ ಸಂತೋಷದ ಛಾಯೆ ತೋರ್ಪಡಿಸ ಲಿಲ್ಲ. ಕುವಾಸೆಕ್ ಅಸನುಧಾನದಿಂದ ಮಾತ್ರ ನೀನು ಅಂದಿನ ನನ್ನ ಎಲ್ಲಾ ಕೆಲಸಗಳನ್ನೂ ಮಾಡಬೇಕು. ಅಂದರೆ, ಕಳವಳವಾಗುತ್ತಿತ್ತೆಂಬುದನ್ನು ತಿಳಿಯದೆ, ಕೊಮೊಟೋಕ್ಕೆ ಎಕ್ಸ್‌ಪ್ರೆಸ್ಸನ್ನು ಕೊಂಡು ಹೋಗಿ ಹಿಂದೆ ತರುವುದುಮಾತ್ರವಲ್ಲ. ನೂರೆಂಭತ್ತೈದನ್ನು ಗಡಿಗೂ ಕೊಂಡು ಹೋಗಬೇಕು. ಅವಕ್ಕೆ ನೀನು ಒಪ್ಪದಿದ್ದಗೆ ನನ್ನಿಂದ ಇದು ಸಾಧ್ಯವಿಲ್ಲ..." ಎಂದು ಜಾಗ್ರತೆಯಾಗಿ ಹೇಳುತ್ತಿದ್ದನು. ಆಗ ಕಳವಳಗೊಂಡ ಕೊನ್ನಲಿಂಕಾನ ಎದೆಯು ಗಟ್ಟಿಯಾಗಿ ಬಡಿಯುತ್ತಿತ್ತು. ಅದು ಕುವಾಸೆಕ್‌ಗೆ ತಿಳಿಯಲಿಲ್ಲ. ಕೊನ್ನಲಿಂಕಾ ತುಸು ಅತೃಪ್ತಿಯನ್ನು ನಟಿಸಿದ. ಕುವಾಸೆಕ್‌ನಂಥಹ ಸಂಶಯ ಗ್ರಸ್ಥವ್ಯಕ್ತಿಗೆ ಕೊನ್ನಲಿಂಕಾ ಒಮ್ಮೆಲೇ ಇದಕ್ಕೆ ಒಪ್ಪಿಕೊಂಡಿದ್ದರೆ, ಅದರ ಕಾರಣ ವೇನೋ ಬೇರೆ ಇರಬೇಕೆಂದು ಸಂದೇಹವಾಗಬಹುದಿತ್ತು. ಅವನೇನೋ

ದೊಡ್ಡ ಉಪಾಯ ಹೂಡಿದ್ದ, ಅವನೇನೋ ತನ್ನನ್ನು ಕುತಂತ್ರದಲ್ಲಿ ಸಿಕ್ಕಿಸಲಿರುವನೆಂದು ತೋರಬಹುದಿತ್ತು. ಆದ್ದರಿಂದ ಕೊನ್ವಲಿಂಕಾ ತನ್ನ ಮುಖವನ್ನು ಕೈಗಳಲ್ಲಿ ಒರಸುತ್ತ, ಹೊರಗೆ ನೋಡಿ ದೀರ್ಘಶ್ವಾಸವೊಂದನ್ನು ಬಿಟ್ಟು ಮತ್ತೆ.... ಕೊನೆಗೆ .. ತುಸು ಅಸಮಾಧಾನದಲ್ಲಿ,

"ನೀನು ಚತುರ ವ್ಯವಹಾರಿಯಾಗಿರುವೆ, ಗೆಳೆಯ. ಆದರೆ...ನಸುನಗುತ್ತ....ಯಾಕಾಗದು? ನಿನಗೆ ಒಂದು ಇಡೀ ದಿನ ವಿರಾಮ ಬೇಕು: ನನಗೆ ನನ್ನ ಸೀಬೆಹಣ್ಣುಗಳು ಬೇಕು. ಆದ್ದರಿಂದ"...ಅವನು ಹೀಗೆನ್ನುತ್ತ ತನ್ನ ಕೈಯನ್ನು ನೀಡಿದ; ಕುವಾಸೆಕ್ ಅದನ್ನು ಕುಲುಕಿದ. "ನಾನು ಟ್ರ್ರಿಕ್ಸಾನೊಡನೆ ಎಲ್ಲವನ್ನೂ ನಿಶ್ಚೈಸುತ್ತೇನೆ. ಮಂಗಳವಾರವೂ ಹವೆಯು—ತಲೆ ಪಕ್ಕನೆ ತಗ್ಗಿಸಿ ಕಿಟಿಕಿಯ ಕಡೆಗೆ ನೋಡುತ್ತ "ಈ ದಿನದಷ್ಟೆ ಒಳ್ಳೆಯದಿದ್ದರೆ ಸಾಕು!" ಎಂದ.

"ಕುವಾಸೆಕ್ ತುಂಬಾ ಧನ್ಯವಾದ! ನೀನು ಅರ್ಥಾತ್ ಸ್ನೇಹಿತನಂತೆ ವರ್ತಿಸಿದೆ."

* * *

"ಇದು ನನ್ನನ್ನು ಆಯಾಸಗೊಳಿಸಿದೆ," ಕೊನ್ವಲಿಂಕಾ ಟ್ರ್ರಿಕ್ಸಾನ ಕುರ್ಚಿಯಲ್ಲಿ ಕುಳಿತುಕೊಂಡು, "ನಾವೆಣಿಸಿದಕ್ಕಿಂತ ಹೆಚ್ಚಿನ ವಿರೋಧವು ನಮಗೆ ಸಿಕ್ಕಿದರೆ, ಅದು ನಾವು ತೆರೆದ ಬಾಗಿಲನ್ನು ಹೆಗಲಿನಿಂದ ದೂಡಿದ ಹಾಗಾಗುತ್ತದೆಂಬುದು ನನ್ನ ಅನುಭವ ನಿಮ್ಮ ಶಕ್ತಿಯು ಕೆಳಗೆ ಬೀಳಲು ಉಪಯೋಗವಾಗುತ್ತದೆ......"

ಟ್ರ್ರಿಕ್ಸಾ ನಸುನಕ್ಕು ಕೊನ್ವಲಿಂಕಾನ ಭುಜವನ್ನು ತಟ್ಟಿದ.

"ನೀವು ಏನು ಮಾಡಿದ್ದೀರೆಂದು ತಿಳಿದ ಬಳಿಕ ನಿಮ್ಮ ಭಾವನೆ ಬದಲಾಯಿತು. ನೀವು ಇಂದು ಇದರಲ್ಲಿ ಯಶಸ್ವಿಗಳಾದರೆ ಮತ್ತೆ ಇದನ್ನು ಪುನಃ ನಾಳೆ ಮಾಡಬೇಕಾಗಿಲ್ಲ. ಅಂದರೆ, ನಮ್ಮ ಕಷ್ಟಗಳೆಲ್ಲ ಈಗ ನಿವಾರಣೆಯಾದುವೆಂದಲ್ಲ...."

"ಓಹೊ...?" ಎನ್ನುತ್ತ ಕೊನ್ವಲಿಂಕಾ ಫಕ್ಕನೆ ಗಾಬರಿಯಲ್ಲಿ ನೋಡಿದ.

"ಹೌದು. ನಾನು ಆಸ್ಟ್ ಪಟ್ಟಣದ ಕುರಿತು ಯೋಚಿಸುತ್ತಿದ್ದೇನೆ. ಅಲ್ಲಿ ಗಡಿಯನ್ನು ಮುಚ್ಚಿದ ಬಳಿಕ ಉಂಟಾಗಿರುವ ಪರಿಸ್ಥಿತಿ ನಿಮಗೆ ಗೊತ್ತಿದೆ...."

ಕೊನ್ವಲಿಂಕಾನಿಗೆ ಪರಿಸ್ಥಿತಿ ಗೊತ್ತಿತ್ತು. ಆದರೆ ಕುವಾಸೆಕ್ ನನ್ನನ್ನು ಸುಲಭವಾಗಿ ತನ್ನ ಬಗಲಿಗೆ ಹಾಕಿಕೊಂಡ ಉತ್ಸಾಹದಲ್ಲಿ ಅವನು ಆಸ್ಚ್ ಗಡಿಯ ಸಮಸ್ಯೆಯನ್ನು ಕ್ಷಣಕಾಲ ಮರೆತಿದ್ದ.

ಆಸ್ಚ್ ಚಿಕ್ಕ ನಿಲ್ದಾಣ. ಅದು ಎಂದೂ ಮುಖ್ಯವಾಗಿರಲಿಲ್ಲ. ಅದೂ ಈಗ ಗಡಿಯನ್ನು ಮುಚ್ಚಿದ ಬಳಿಕ ಆಸ್ಚ್ ಹೆಚ್ಚು ಕಡಿಮೆ ಎಲ್ಲರಿಗೂ ಮರೆತು ಹೋದಂತಿತ್ತು.

ಆದರೆ ಅಲ್ಲಿದ್ದ ಎಲ್ಲಾ ರೈಲು ದಾರಿಗಳೂ ಗಡಿಯತ್ತ ಸಾಗುತ್ತಿದ್ದುವು– ಜರ್ಮನಿ ಮತ್ತು ಅದರ ಪಶ್ಚಿಮಕ್ಕೆ— ಹೇಗೆ ಅವುಗಳನ್ನು ಬದಲಿಸಿದರೂ ಕೂಡಾ.

ಇದನ್ನು ಜೆಕ್ ನ್ಯಾಷನಲ್ ರೈಲ್ವೆಯ ಕಮ್ಯುನಿಸ್ಟ್ ವ್ಯವಸ್ಥಾಪಕರು ತಿಳಿದೇ, ಗಡಿ ದಾಟುವ ಬಂಡಿಗಳು ಅಪರೂಪದಲ್ಲಿ ಹೋಗುವಾಗ, ಆಸ್ಚ್ ನಲ್ಲಿ ಭದ್ರವಾದ ಕಾವಲನ್ನಿಡುತ್ತಿದ್ದರು. ಆಸ್ಚ್‌ಗೆ ಪ್ರಯಾಣಿಕರ ರೈಲು ಬಂಡಿ ಬರುವುದಿದ್ದರೆ ಸರಕಿನ ಮತ್ತು ಖಾಲಿ ಬಂಡಿಗಳನ್ನು ರೈಲು ದಾರಿಯಲ್ಲಿ ನಿಲ್ಲಿಸಿ ಪಶ್ಚಿಮಕ್ಕೆ ಹೋಗುವ ದಾರಿಗಳನ್ನೆಲ್ಲ ಅಡ್ಡಗಟ್ಟಲು ನಿಲ್ದಾಣದ ಅಧಿಕಾರಿಗಳಿಗೆ ತಿಳಿಸುತ್ತಿದ್ದರು.

ಕೊನ್ವಲಿಂಕಾನಿಗೆ ನೆನಪಾಯಿತು.

" ಹಾಗಾದರೆ ನಾವು ಇಡೀ ರೈಲು ದಾರಿಯನ್ನು ಹಿಡಿತದಲ್ಲಿಡಬೇಕು. ಅದರ ಪ್ರತಿಯೊಂದು ಅಂಗುಲವನ್ನು ಕೂಡಾ, ಎಗರ್‌ನಿಂದ ಗಡಿಯ ತನಕ. ಹೌದು.... ಅದರಾಚೆ ಕೂಡಾ....! "

ಕೊನ್ವಲಿಂಕಾನ ತೀವ್ರ ಗ್ರಾಹೀ ಶಕ್ತಿಯನ್ನು ನೋಡಿ ಟ್ರುಕ್ಸಾ ಮೆಚ್ಚುಗೆಯಲ್ಲಿ ನಸುನಕ್ಕ.

" ಜರೊಸ್ಲಾವ್ ! ಹಾಗಿರಬೇಕು. ಸರಿ...." ಕಿಟಕಿಯ ಹೊರಗೆ ಖಾಲಿಯಾದ ಅಂಗಳವನ್ನು ನೋಡುತ್ತ..." ನಾನು ಅದನ್ನು ನೋಡಿಕೊಳ್ಳುತ್ತೇನೆ, ಎಂದ.

"ನಿಮ್ಮೊಡನೆ ಅದಕ್ಕೆ ಉಪಾಯವಿದೆಯೆ, ಕಾಮ್ರೇಡ್....?

ಟ್ರುಕ್ಸಾ ದೀರ್ಘಶ್ವಾಸವೊಂದನ್ನು ಬಿಟ್ಟನು. ಅವನ ಮುಖದಲ್ಲಿದ್ದ ಅಂತಿಮ ನಿರ್ಧಾರದ ಭಾವವು ಕೊನ್ವಲಿಂಕಾನಿಗೆ ತೋರದಿರಲಿಲ್ಲ.

" ಹೌದು, ನನ್ನೊಡನೆ ಒಂದು ಉಪಾಯವಿದೆ...." ಎಂದು ಟ್ರ್ರಿಕ್ಸಾನು ಹೇಳಿದನು.

ಸೆಪ್ಟೆಂಬರ 9. ಪಲಾಯನದ ಮುಂಚೆ ಕೊನೆಯ ಸಭೆ ಸೇರಲು ನಿರ್ಣಯಿಸಿದ ದಿನ. ಟ್ರ್ರಿಕ್ಸಾ ಆಸ್ಚ್‌ನಿಂದಾಚೆಗಿನ ರೈಲು ಮಾರ್ಗವನ್ನು ಹತೋಟಿಯಲ್ಲಿಟ್ಟುಕೊಳ್ಳುವ ತನ್ನ ಉಪಾಯವನ್ನು ತಿಳಿಸಿದ.

ಅದರ ಮುಂಚಿತವಾಗಿ ಎಲ್ಲವನ್ನೂ ವಿವರವಾಗಿ ಚರ್ಚಿಸಲಾಯಿತು. ಟ್ರ್ರಿಕ್ಸಾ ಒಂದು ಪಾರ್ಸೆಲನ್ನು ಬಿಚ್ಚಿ ಅದರಿಂದ ಮೂರು ಎಂ. ಪಿ. 38 ಜರ್ಮನ್ ಮೆಶಿನ್-ಪಿಸ್ತೂಲುಗಳನ್ನೂ, ಹಲವು 7.65 ಮಿಲ್ಲಿಮೀಟರ್ ಬೆಲ್ಜಿಯನ್ ಎಫ್. ಎನ್. ಆಟೊಮೆಟಿಕ್ ಪಿಸ್ತೂಲುಗಳನ್ನೂ ಅವರಲ್ಲಿ ಹಂಚಿಯಾದ ಬಳಿಕ ತನ್ನ ಉಪಾಯವನ್ನು ಅವರಿಗೆ ತಿಳಿಸಿದ.

ಅವನ ಸೂಚನೆಗಳಿಗೆ ಪ್ರಬಲವಾದ ವಿರೋಧ ಬಾರದಿರಲಿಲ್ಲ. ಅದರಿಂದಾಗಿ ಅವನಿಗೆ ಬಹಳ ಬೇಸರವಾಗಿತ್ತು. ಬೇಸರದಲ್ಲಿ ಕಣ್ಣೀರು ಉಕ್ಕಿ ಬರುವಂತಿತ್ತು. ವಿರೋಧ ಪ್ರಬಲವಾಗಿಯೇ ಇತ್ತು—ನೆರೆದವರು ತುಂಬಾ ಕಂಗಾಲಾಗಿದ್ದರು.

ಟ್ರ್ರಿಕ್ಸಾ ಕೈಗಳನ್ನೆತ್ತಿ ಅವರನ್ನು ಸುಮ್ಮನಿರಲು ಕೇಳಿಕೊಂಡ.

" ಸ್ನೇಹಿತರೆ.... ಭಾವೋದ್ರೇಕದಿಂದಾಗಿ ನಮಗೆ ಈಗ ದೊರೆತಿರುವ ಸಂದರ್ಭವನ್ನು ನಾಶಮಾಡಬೇಡಿ! ಮತ್ತೆ ಇದು ನಮ್ಮೆಲ್ಲರ ಸ್ವಂತ ಸಂದರ್ಭವೆಂದು ನಾನು ಹೇಳುವುದನ್ನು (ನಾನು ಎಲ್ಲವನ್ನೂ ಯೋಚಿಸಿದ್ದೇನೆ) ನಂಬಿರಿ. ನಾನು ನಾಳೆ ಆಸ್ಚ್‌ಗೆ ಹೋಗಿ ಸರಕಿನ ಬಂಡಿಗಳು ರಸ್ತೆಯನ್ನು ಮುಚ್ಚದಂತೆ ಏರ್ಪಾಡು ಮಾಡದಿದ್ದರೆ, ನಮಗೆ ಮುಂದೆ ಹೋಗಲು ಸಾಧ್ಯವಿಲ್ಲ. ಇದನ್ನು ಕೊನ್ಸಲಿಂಕಾ ಒಪ್ಪುತ್ತಾರೆ. ಅಲ್ಲವೇ, ಜರೊಸ್ಲಾವ್.... ! ಅದನ್ನು ಅವರಿಗೆ ತಿಳಿಸಿರಿ!"

" ಆ ಸಂಗತಿ ನಿಜ ಆದರೆ..."

" ಸಾಕು! ನಾನು ಹೇಳುತ್ತೇನೆ: ನಾನು ಅಲ್ಲಿಗೆ ಹೋಗಿ ಮಾರ್ಗವನ್ನು ಮುಚ್ಚದಂತೆ ಮಾಡದಿದ್ದರೆ ಅದು ಖಂಡಿತ ಮುಚ್ಚುತ್ತದೆ. ಆದ್ದರಿಂದ ನನಗೆ ಆಸ್ಚ್‌ಗೆ ಹೋಗಿ ಅವರು ರೈಲು ಮಾರ್ಗವನ್ನು ಆತಂಕಿಸದಂತೆ ನೋಡ

ಬೇಕು ! ಎಲ್ಲರೂ ಆಗ ನಿಶ್ಶಬ್ದರಾದರು. ಆ ಉಪಾಯಕ್ಕೆ ಅವರು ಸಮ್ಮತಿ ಸುತ್ತಿಲ್ಲವೆಂದು ಅದರಿಂದ ಸ್ಪಷ್ಟವಾಗುತ್ತಿತ್ತು.

"ನನ್ನ ಸ್ನೇಹಿತರೇ, ನಾವು ಸತ್ಯಸಂಗತಿಗಳನ್ನು ಹೊಂದಿಕೊಂಡಿರೋಣ. ನಾವು ಒಂದು ಯುದ್ಧದಲ್ಲಿ ತೊಡಗಿದ್ದೇವೆ. ನಮಗೆ ಅದರಿಂದ ನಷ್ಟವೂ ಆಗಿದೆ. ಇನ್ನೂ ಹೆಚ್ಚು ಮರಣಗಳು ಆಗಬಹುದು· ಆಗ ನಾವು ಈ ಸಂದರ್ಭದಲ್ಲಿ ಯತ್ನಿಸದೆ ಯಾರಾದರೂ ಸಾಯಬಹುದೆಂದು ಹೆದರಿದರೆ ನಾವು ಈಗಲೇ ನಮ್ಮ ಯತ್ನವನ್ನು ನಿಲ್ಲಿಸುವುದು ಒಳ್ಳೆಯದು. ನಮ್ಮ ಕಮ್ಯುನಿಸ್ಟ್ ಒಡೆಯರೊಡನೆ ರಾಜಿಯಾಗೋಣ.

"ಆದರೆ.... ಅದು ನಮ್ಮಿಂದ ಸಾಧ್ಯವಿಲ್ಲವೆಂಬುದನ್ನು ನೀವು ಒಪ್ಪುವಿರಾದರೆ, ನನ್ನನ್ನು ಸ್ವೇಚ್ಛೆಯಾಗಿ ವರ್ತಿಸಲು ನೀವು ಬಿಡಬೇಕು. ನನಗೆ ಅಧಿಕೃತವಾಗಿ ಆಸ್ಟ್‌ಗೆ ನಾಳೆ ಹೋಗಲು ಸಾಧ್ಯವಿಲ್ಲ. ಆದರೆ ನಾನು ಸೌಖ್ಯವಿಲ್ಲವೆಂದು ಹೇಳಿ ಎಗರ್‌ನಲ್ಲಿ ನೋಡಸಿಗದೆ, ಆಸ್ಟ್‌ನಲ್ಲಿ ಕಾಣಸಿಕ್ಕಿದರೆ ಎಲ್ಲವೂ ಬಟ್ಟಬಯಲಾಗಿ ಹೋದೀತು. ನಾನು ಮೊದಲೇ ಸಂಶಯಕ್ಕೊಳಗಾದವ. ಯಾರಾದರೂ ಇದನ್ನೆಲ್ಲ ಯೋಚಿಸಿ ಗುಪ್ತ ಪೋಲೀಸರಿಗೆ ತಿಳಿಸಲಿಕ್ಕಿಲ್ಲವೆಂದು ನೀವು ನಂಬುವಿರಾ ? ಈ ಕೆಲಸ ಮಾಡಬೇಕೆಂಬ ಇಚ್ಛೆ ದೇವರಾಣೆಯಾಗಿಯೂ ನನಗಿಲ್ಲ. ಆದರೆ... ಬೇರೆ ದಾರಿ ನನಗೆ ತೋರುವುದಿಲ್ಲ."

ಸ್ಪೇಕ್, ಆಗ ಮೆಲ್ಲನೆ, ನಿಮಗಿಂತ ಕಡಿಮೆ ಉಪಯೋಗವಾಗುವವರು ಇಲ್ಲಿದ್ದಾರೆ, ಕರೆಲ್...." ಎಂದರು.

ಟ್ರ್ರಿಕ್ಸಾ ಬಹಳ ಬೇಸರಗೊಂಡು, ನಸುನಕ್ಕ.

"ಡಾಕ್ಟರ್ ! ನೀವೆಂದುದು ನನಗೆ ಅರ್ಥವಾಯಿತು ... ನನಗೆ ಅದು ಹೆಮ್ಮೆಯ ವಿಷಯ. ಆದರೆ— ನನ್ನ ಬಗ್ಗೆ ಕೊನ್ಸಲಿಂಕಾ ಈಗ ಇಚ್ಛೆಯಿದ್ದರೂ ಇಲ್ಲದಿದ್ದರೂ ವಾದಿಸಬೇಕು—ನಾವು ಗಡಿ ದಾಟಲು ಆಸ್ಟ್‌ನಲ್ಲಿ ಏನೂ ಅತಂಕವಿಲ್ಲದಂತೆ ಮಾಡಲು ನನಗೊಬ್ಬನಿಗೇ ಸಾಧ್ಯವಿದೆ. ನಿಜವಲ್ಲವೇ, ಜರೊಸ್ಲಾವ್...?" ಕೊನ್ಸಲಿಂಕಾ ಮನಸ್ಸಿಲ್ಲದೆ ಮೆಲ್ಲನೆ ತಲೆಯಲ್ಲಾಡಿಸಿದನು.

"ಹೌದು ಕರೆಲ್.... ಅದು ನಿಜ"

ಟ್ರ್ರಿಕ್ಸಾ ಅವಸರದಲ್ಲಿ, "ಹಾಗಾದರೆ ಸರಿ, ಈ ಭಾವೋದ್ರೇಕ ಇನ್ನು ನಮಗೆ ಬೇಡ. ನಾವೆಲ್ಲ ಇಲ್ಲಿ ಪಾಲುಗಾರರು, ಅಥವಾ.... ನಮ್ಮ ಮುಂದಾಳು ನನಗೆ ಈ ಅಧಿಕಾರ ಕೊಟ್ಟಿದ್ದಾರೆಂಬುದನ್ನೂ ನಿಮಗೆ ನೆನಪು ಹುಟ್ಟಿಸುತ್ತೇನೆ. ನಾಳೆ ನಾನು ಇರುವುದಿಲ್ಲ. ನಮಗೆ ಮೆಚ್ಚುಗೆ ಇದ್ದರೂ ಇಲ್ಲದಿದ್ದರೂ ನಾನು ನಾಳೆ ಕೆಲಸಕ್ಕೆ ಹೋಗದಿರಬೇಕಾದರೆ, ಗುಪ್ತ ಪೋಲೀಸರೊಡನೆ ನನ್ನ ವಿರುದ್ಧ ಆರೋಪ ಮಾಡುವುದೊಂದೇ ದಾರಿ. ಈಗ," ಅವನು ಅವರ ಮೌನವನ್ನು ಭೇದಿಸುತ್ತ, "ಈ ಆರೋಪವನ್ನು ಯಾರು ಮಾಡುವರು...?"

ಸ್ಕಾಲ್ಸ್ಕಿ "ಕರೆಲ್ ನಿಮ್ಮಂಥ ಬೆಲೆ ಬಾಳುವವರನ್ನು ನಾವು ಕಳಕೊಳ್ಳುವೆಂದಾದರೆ, ಇನ್ನೊಬ್ಬ ಅಂಥ ವ್ಯಕ್ತಿಯನ್ನು ಕಳಕೊಳ್ಳುವುದು ಬೇಡ. ಆದರೆ.... ದೇವರು ಹಾಗೆ ಮಾಡದಿರಲಿ .. ಎಂದು ನಾನು ಆಶಿಸುತ್ತೇನೆ." ಎನ್ನುತ್ತ ಟ್ರ್ರಿಕ್ಸಾನನ್ನು ನೋಡಿ, "ಕರೆಲ್, ನಾನು ಹೋಗುತ್ತೇನೆ..." ಎಂದ.

ಇನ್ನೊಂದು ಧ್ವನಿ ಕೇಳಿತು. ಅದು ಲೊಸ್ಕೊಟ್‌ನದು.

"ಆದರೆ.... ನೀನು ವ್ಯಥೆಪಡುತ್ತಿದ್ದಿರೆನೆ! ನೀನು ಪ್ರಯೋಜನವಿಲ್ಲ ನಿನ್ನನ್ನು ಹಿಡಿಯಲು ಯತ್ನ ನಡೆಯುತ್ತಿದೆ. ದೇಶದ ಪ್ರತಿಯೊಂದು ಪೋಲೀಸು ಠಾಣೆಯ ಹೊರಗೂ ನಿನ್ನ ಭಾವಚಿತ್ರವಿದೆ.... "

ಸ್ಕಾಲ್ಸ್ಕಿ ನಕ್ಕನು.

"ಸರಿ......ನೀನು ಮೆಚ್ಚಿದರೆ, ನಾನು ಹುಚ್ಚನೆಂದು ವಿಶ್ವವಿದ್ಯಾಲಯದಲ್ಲೂ—ಶಾಲೆಯಲ್ಲಿ ಕೂಡಾ, ಹೇಳಿದ್ದರು. ಆದ್ದರಿಂದ...... ನಾನು ಹುಚ್ಚನಾಗಲು ಇಷ್ಟಪಡುತ್ತೇನೆ. ಈ ವಿವೇಕದ ಜೀವನದಿಂದ ಅದು ಒಳ್ಳೆಯ ಬದಲಾವಣೆ. ಏಕೆಂದರೆ ಈ ಅವಸ್ಥೆ ಎಷ್ಟೋ ವಿವೇಕಿಗಳಿಗೆ ತೊಂದರೆ ಕೊಡುತ್ತಿದೆ. ನನ್ನ ಕುರಿತು ಯಾವ ಆಕ್ಷೇಪಣೆಗಳನ್ನೂ ಗ್ರಹಿಸಬೇಡಿರಿ ಕರೇಲ್ : ನಾನು ನೇರವಾಗಿ ಬೆಳಗ್ಗೆ ಎದ್ದೊಡನೆ ಪೋಲೀಸ್ ಠಾಣೆಗೆ ಹೋಗಿ ನೀವು ರಾಜ್ಯದ ಶತ್ರುವೆಂದು ದೂರು ಕೊಡುತ್ತೇನೆ. ನಿಮಗೆ ಅದೇ ಬೇಕಾದ್ದಲ್ಲವೆ...? "

ಟ್ರ್ರಿಕ್ಸಾ ನಗಾಡದೆ ತಲೆಯಾಡಿಸಿದನು.

ಕೊನೆಗವನು "ಅದೇ ಆಗಬೇಕಾದುದು ರೆನೆ...." ಎಂದನು.

ಹೋಗಲು ಇನ್ನು ಇಪ್ಪತ್ತುನಾಲ್ಕು ಗಂಟೆಗಳಿಗಿಂತ ಸ್ವಲ್ಪ ಹೆಚ್ಚು ಕಾಲ ಉಳಿದಿತ್ತು....

ಸ್ಕಾಲ್ಸಿಕ್ಕ ಟ್ರ್ರಿಕ್ಸಾನನ್ನು ಬೀಳ್ಕೊಟ್ಟು ಸ್ವಲ್ಪ ಕಾಫಿ ಮಾಡಿ ಕುಡಿದ. ಆ ಮೇಲೆ ಪತ್ರಿಕೆಯನ್ನೋದಿ, ಸ್ನಾನ ಮುಗಿಸಿ ಜಾಗ್ರತೆಯಿಂದ ಉಡುಪುಗಳನ್ನು ತೊಟ್ಟ ಲೊಸ್ಕೊಟ್ ಅವನಿಗೆ ವೇಷ ಪಲ್ಲಟನ ಮಾಡಬೇಕೆಂದು ಆಗ್ರಹ ಪಡಿಸುತ್ತಿದ್ದ. ಆದರೆ ಸ್ಕಾಲ್ಸಿಕ್ಕ ಕೇಳಲಿಲ್ಲ.

"ಯಾವ ವೇಷ? ನನಗೆ ಇಷ್ಟು ಬೇಗ ಒಂದು ಮೀಸೆಯನ್ನು ಬೆಳೆಸುವುದು ಸಾಧ್ಯವಿಲ್ಲ. ಇಲ್ಲವಾದರೆ ಶ್ರೀಮತಿ ಟ್ರ್ರಿಕ್ಸಾರ ಹಳೆಯ ವಸ್ತ್ರಗಳನ್ನುಡಬೇಕೆ..? ಜಾಡರ್ಾ ದಯವಿಟ್ಟು ಬಾಯಿ ಮುಚ್ಚಿಕೊಂಡಿರು. ನನ್ನನ್ನು ಹೆದರಿಸಬೇಡ!

"ಸರಿ .. ನೀನು ನಿನ್ನ ತಲೆ ಕೂದಲನ್ನಾದರೂ ಬೇರೊಂದು ರೀತಿಯಲ್ಲಿ ಬಾಚಬಹುದು...."

"ಯಾವುದು ಸರಿ ಎಂಬ ನಿನ್ನ ಭಾವನೆಯನ್ನು ಸಂತೋಷಪಡಿಸಲಿಕ್ಕಾಗಿಯೇ? ಎಗರ್ ಪೋಲೀಸ್ ಠಾಣೆಯವರಿಗೆ ನಾನು ಹೇಗೆ ನನ್ನ ತಲೆ ಕೂದಲನ್ನು ಬಾಚುತ್ತೇನೆ— ಬೈತಲೆ ಹಾಕುತ್ತೇನೆಯೇ ಇಲ್ಲವೇ ಎಂಬುದು ಗೊತ್ತಿದೆಯೇ? ನನ್ನ ಗುರುತು ಅವರಿಗೆ ಸಿಕ್ಕಿದರೆ ನಾನು ಯಾವ ಕಡೆಗೆ ಬೈತಲೆ ಬಾಚಿದ್ದೇನೆಂಬುದು ಅವರಿಗೆ ವಿಶೇಷವಾಗಿ ಕಾಣಿಸಲಿಕ್ಕಿಲ್ಲ...." ಲೊಸ್ಕೊಟ್, "ನನಗೆ ಗೊತ್ತಿದೆ. . ." "ನೀನು ಅವರಿಗೆ ಟೆಲಿಫೋನು ಮಾಡಿದರಾಗದೆ? ಹಾಗಾದರೆ ಏನೂ ಆಗಲಿಕ್ಕಿಲ್ಲ...." ಎಂದನು.

ಸ್ಕಾಲ್ಸಿಕ್ಕ ಉತ್ತರಿಸದೆ ಮುಖವನ್ನು ಶೃಂಗರಿಸಿಕೊಂಡು, ತಲೆ ಕೂದಲನ್ನು ಸೊಗಸಾಗಿ ಬಾಚಿದ.

"ಸರಿ, ಸ್ನೇಹಿತನೇ," ಎನ್ನುತ್ತ ಸ್ಕಾಲ್ಸಿಕ್ಕ ತನ್ನ ಕೋಟನ್ನು ಹಾಕಿಕೊಂಡು ಹ್ಯಾಟನ್ನು ತಲೆಯ ಮೇಲೆ ಅಚ್ಚುಕಟ್ಟಾಗಿ ಇಟ್ಟುಕೊಂಡು, "ನಾನು ನಿನಗೆ ಅಂತ್ಯದ ನಮಸ್ಕಾರ ಕೊಡುವುದಿಲ್ಲ." ಸ್ಕಾಲ್ಸಿಕ್ಕ ಒಮ್ಮೆಯೇ ಗಂಭೀರತೆಯನ್ನು ತಾಳಿದ, ಲೊಸ್ಕೊಟ' ವ್ಯಕ್ತಪಡಿಸಿದ ಹೆದರಿಕೆಗಳಿಗೆಲ್ಲ ಅವನೂ ಹೆದರಿದ್ದ. ಅವನು ಲೊಸ್ಕೊಟ್‌ನ ಹೆಗಲಿಗೆ ಕೈಹಾಕಿ ಭುಜವನ್ನು ತಟ್ಟಿದನು.

ಬಾಗಿಲನ್ನು ತೆರೆದು ಸ್ಕಾಲ್ಸ್ಕಿ ಲೊಸ್ಕೊಟ್‌ನನ್ನು ನೋಡಿ ನಸುನಕ್ಕು ಕೂಡಲೇ ಹೊರಗೆ ಹೋದ. ಅವನ ಹಿಂದೆ ಬಾಗಿಲು ಮುಚ್ಚಿ ಚಿಲಕ ಬಿತ್ತು....

ಎಗರ್ ಕೋರ್ಟಿನಲ್ಲಿ ಸ್ಕಾಲ್ಸ್ಕಿ ಒಬ್ಬ ಅಧಿಕಾರಿಯೊಡನೆ ಟ್ರಿಕ್ಸಾನನ್ನು ಬಹಿರಂಗವಾಗಿ ಖಂಡಿಸಿದನು. ಈ ಅಧಿಕಾರಿಯಾರೆಂಬುದು ಗೊತ್ತಾಗಲಿಲ್ಲ. ಆದರೆ ಇಂದಿನ ತನಕವೂ ಅವನು ಮ್ಯಾಜಿಸ್ಟ್ರೇಟನೇ, ಅಲ್ಲವಾದರೆ ಗುಪ್ತ ಪೋಲೀಸುಇಲಾಖೆಯ ಅಧಿಕಾರಿಯೇ, ಅಲ್ಲ ಸರ್ಕಾರಿ ವಕೀಲನೇ ಅಥವಾ ಬರೇ ಪೋಲೀಸಿನವನೇ ಎಂಬುದು ಜೆಕ್ ಅಧಿಕಾರಿ ವರ್ಗಕ್ಕೆ ತಿಳಿದಿಲ್ಲ.

" ಸ್ಕಾಲ್ಸ್ಕಿಯ ದೇಶಭಕ್ತಿ " ಪ್ರಚೋದಕವಾದ ದೂರನ್ನು ಕೇಳುತ್ತಾ ಅಧಿಕಾರಿಯು, ಟ್ರಿಕ್ಸಾನನ್ನು "ನಾವು ಪುನಃ ಬಂಧಿಸಲುನಿಶ್ಚೈಸಿದುದು ಅವನಿಗೆ ತಿಳಿದಿದೆಯೇ ಎಂಬುದನ್ನು ನನಗೆ ಹೇಳು. ಅವನಿಗೆ ಗೊತ್ತಿದೆಯೇ.......? ಅದಕ್ಕೋಸ್ಕರ ಅವನು ಪಲಾಯನಮಾಡುವ ಸಿದ್ಧತೆಗಳನ್ನು ಮಾಡುತ್ತಿದ್ದಾನೆಯೆ....?" ಸ್ಕಾಲ್ಕಿಸ್ಸ ಗಟ್ಟಿಯಾಗಿ, ನಿಸ್ಸಂದೇಹವಾಗಿ, " ನಾನು ನಿಮಗೆ ಇದನ್ನೆಲ್ಲ ಹೇಳುವಾಗ ಅವನು ತನ್ನ ಕೊನೆಯಸಿದ್ಧತೆಗಳನ್ನು ನಡೆಸುತ್ತಿರಬೇಕು " ಎಂದನು.

ಅಧಿಕಾರಿಗೆ ಕೋಪಬಂತು. ಅವನು ಹಲ್ಲುಗಳನ್ನು ಕಡಿಯುತ್ತ, ಅವನು ಹೋದರೂ ಕೂಡಾ... ಹೆಚ್ಚು ದೂರ ಸಾಗಲಿಕ್ಕಿಲ್ಲ "ಎಂದ.

ಸ್ಕಾಲ್ಕಿಸ್ಸ ಇನ್ನು ಅಧಿಕಾರಿಯನ್ನು ಕೆರಳಿಸಲು.

" ಅವನು ಭೂಗತನಾಗಬಹುದೆಂದು ನನಗೆ ತೋರುತ್ತದೆ. ಒಮ್ಮೆ ಹಾಗೆ ಒಬ್ಬನು ಭೂಗತನಾದರೆ ಮತ್ತೆ ಅವನಿಗೆ ಉಪಟಳವನ್ನೀಯುವುದೊಂದೇ ಕೆಲಸವಲ್ಲದೆ ಬೇರೇನಿಲ್ಲ... "ಎಂದ.

" ಅಧಿಕಾರಿಯು ದೀರ್ಘಶ್ವಾಸವೊಂದನ್ನು ಬಿಡುತ್ತ "ಅದುನಿಜ, ಸರಿ... ನೀನು ಒಂದು ಅಧಿಕೃತ ದೂರನ್ನುಬರೆದು ದಸ್ಕತು ಹಾಕುವುದು ಒಳ್ಳೆಯದು. ನಿನ್ನ ಹೇಸರೇನು........?"

" ಡ್ರೋಬ್ನಿ—ಮಿಶ್ಕಾ ಡ್ರೋಬ್ನಿ ".

" ಸರಿ ಡ್ರೋಬ್ನಿ, ನಾನು ಒಂದು ಫಾರ್ಮು ತರುತ್ತೇನೆ, ಅದರಲ್ಲಿ ನೀನು ಬರೆದರಾಯಿತು. " ಅಧಿಕಾರಿಯು ಒಂದು ಕಪಾಟಿನತ್ತತಿರುಗಿದ. ಅದರಲ್ಲಿ ದೂರುಕೊಡುವ ಫಾರ್ಮುಗಳಿವೆಯೆಂದು ಸ್ಕಾಲ್ಸ್ಕಿ ನೆನೆಸಿದ. ಆದರೆ ಅಷ್ಟರಲ್ಲೇ

ಅಧಿಕಾರಿ ಸ್ವಲ್ಪ ತಡೆದು ಹಿಂದೆ ತಿರುಗಿ, " ನೀನು ಹೇಳು.........ಟ್ರುಕ್ಸಾನಿಗೆ ನೀವು ಏನುಮಾಡಬೇಕೆಂದು ನೀನು ಸಲಹೆಕೊಡುತ್ತೀ........? " ಎಂದು ಪ್ರಶ್ನಿಸಿದನು.

ಸ್ಕಾಲ್ಸ್ಕಿ ಈ ಪ್ರಶ್ನೆಗಾಗಿಯೇ ಕಾದಿದ್ದ. ಈ ಪ್ರಶ್ನೆಯ ಮೇಲೆಯೇ ಇಡೀ ಪಿತೂರಿಯ ಭವಿಷ್ಯವು ಹೊಂದಿಕೊಂಡಿತ್ತು. ಅದಕ್ಕೆ ಕೊಡಬೇಕಾದ ಉತ್ತರವು ಮೊದಲೇ ನಿರ್ಣಯಿಸಲ್ಪಟ್ಟಿತ್ತು.

ಸ್ಕಾಲ್ಸ್ಕಿಯ ಗಂಟಲು ಬಿಗಿಯಿತು–ಈ ಪ್ರಶ್ನೆಯ ಮೇಲೆಕೇವಲ ಒಂದು ಜೀವ ಮಾತ್ರ ಹೊಂದಿಕೊಂಡಿರಲಿಲ್ಲ—.

" ಕೂಡಲೇ ಅವನನ್ನು ಕೈದುಮಾಡಿರಿ........! " ಎಂದನು.

ಸ್ಕಾಲ್ಸ್ಕಿಹೀಗೆ ದೂರುಕೊಡುವಾಗ ಇನ್ನೊಬ್ಬನ ಜೀವಕ್ಕಿಂತಲೂಹೆಚ್ಚಾಗಿ ತನ್ನ ಜೀವವನ್ನು ಅಪಾಯಕ್ಕೀಡುಮಾಡುವ ಉದ್ದೇಶದಲ್ಲಿದ್ದ. ಇಂಥ ಕ್ಲಿಷ್ಟ ಪರಿಸ್ಥಿತಿಯನ್ನು ತಾನು ವಕೀಲರಂತೆ ಎದಿರಿಸುತ್ತೇನೆಂದು ಅವನು ಹೆಮ್ಮೆ ಪಡುತ್ತಲಿದ್ದ.

ವಿರೋಧಿಯ ಮನೋಪ್ರವೃತ್ತಿಯನ್ನು ತಿಳಿದುಕೊಂಡು ಅದನ್ನು ಅವನ ನಾಶಕ್ಕೇನೇ ಉಪಯೋಗಿಸಬೇಕೆಂದು ಸ್ಕಾಲ್ಸ್ಕಿ ಯೋಚಿಸಿದ. ಈ ವಿಷಯವನ್ನು ತಾನು ಬಹಳ ಚಾತುರ್ಯದಿಂದ ತನ್ನ ಮೊದಲೇ ನಿರ್ಧರಿಸಿದ ಗುರಿಯಕಡೆಗೆ ಸಾಗಿಸಬೇಕೆಂದು ನಿಶ್ಚೈಸಿ, ಕಮ್ಯುನಿಸ್ಟ್ ರಾಜ್ಯದ ಅಧಿಕಾರದ ವಿರುದ್ಧ ತನ್ನ ಸಂಪೂರ್ಣ ಬುದ್ಧಿವಂತಿಕೆಯನ್ನು ಪ್ರಯೋಗಿಸಬೇಕೆಂದು ಅವನು ಖಚಿತಮಾಡಿಕೊಂಡನು.

ಅವನಿಗೆ ಅತುಲನಾದ ಆತ್ಮವಿಶ್ವಾಸವಿತ್ತು.` ಜಾದುಗಾರನು ತನ್ನ ಇಚ್ಛಾಶಕ್ತಿಯನ್ನು ಇತರರಮೇಲೆ ಬಲತ್ಕಾರದಲ್ಲಿ ಪ್ರಯೋಗಿಸುವಂತೆ, ತಾನೂ ಅಧಿಕಾರಿಗಳನ್ನು " ಇಂದ್ರಜಾಲದಲ್ಲಿ " ಸಿಕ್ಕಿಸಿಬಿಡುತ್ತೇನೆಂಬ ಧೈರ್ಯ ಅವನಿಗಿತ್ತು.

ಸ್ಕಾಲ್ಸ್ಕಿಗೆ ತನ್ನ ತಂತ್ರವನ್ನು ಹೂಡಲು ತಕ್ಕ ಆಧಾರವಿಲ್ಲದೆ ಇದ್ದಿಲ್ಲ. ಆ ಆಧಾರವನ್ನನುಸರಿಸಿಯೇ ಅವನು ತನ್ನ ಮತ್ತು ಟ್ರುಕ್ಸಾನ ಮತ್ತೆ ಇತರ ಹಲವರ—ಬಾಳುವೆಗೆ ಸಂಬಂಧಿಸಿದ ಗಂಡಾಂತರದ ಸಾಹಸವನ್ನು ಕೈಕೊಂಡಿದ್ದ.

" ಜನತಾಪ್ರಜಾಪ್ರಭುತ್ವ" ಗಳೆಲ್ಲದರಲ್ಲಿಯೂ ಯಾರೂ ಯಾವ ಹೇಳಿಕೆಯನ್ನೂ ಅದರ ಮುಖಮೌಲ್ಯವನ್ನು ನೋಡಿ ಸ್ವೀಕರಿಸುವುದಿಲ್ಲ! ಹೆಚ್ಚು ಕಡಿಮೆ ಎಲ್ಲರೂ, ಎಲ್ಲಾ ಹೇಳಿಕೆಗಳನ್ನೂ ಸಂಪೂರ್ಣವಾಗಿ ನಿಜವೆಂದು ಸ್ವೀಕರಿಸಲು ಸಿದ್ಧರಿಲ್ಲ. ಅಲ್ಲಿ ಬಂಡವಾಳಶಾಹೀ ಸಮಾಜ ತತ್ವದ ಭ್ರಷ್ಟಾಚರಣೆಯೂ ಇಲ್ಲ, ಮಾನವ ಸಂಬಂಧವನ್ನು " ಲಾಭದ ಉದ್ದೇಶ"ವು ಕೆಡಿಸಲಿಕ್ಕೂ ಇಲ್ಲವೆನ್ನುವ "ಅದರಲ್ಲಿ ಅವನಿಗೇನಿದೆ ? " ಎಂಬುದರ ಬದಲು " ಅದರಲ್ಲಿ ನನಗೇನಿದೆ" ಎನ್ನುವುದು ಮಾರ್ಕ್ಸವಾದಿಗಳ ಅಭಿಪ್ರಾಯದಲ್ಲಿ ಬಂಡವಾಳಶಾಹಿಗಳ ವಿಚಾರಗಳ ರೂಪವನ್ನೇ ಕೆಡಿಸಿತ್ತು.

ಆದುದರಿಂದ... ಅದರಲ್ಲಿ ಅವನಿಗೇನಿದೆ ಎಂದು ಅಧಿಕಾರಿಯೇ ಯೋಚಿಸಿದ. ಸ್ಕಾಲ್ಸ್ಕಿಯೂ ಅಧಿಕಾರಿಯು, ಹಾಗೆಯೇ ಯೋಚಿಸುವನೆಂದು ಆಶಿಸಿದ್ದ. ಅದರಮೇಲೆಯೇ ಅವನು ತನ್ನ ವಿಶ್ವಾಸವನ್ನಿಟ್ಟಿದ್ದ ...

ಅಧಿಕಾರಿಯು ಸ್ಕಾಲ್ಸ್ಕಿಯನ್ನು ಕಣ್ಣರಳಿಸಿ ನೋಡಿದ. ನಿಷ್ಠಾವಂತ ಕಮ್ಯುನಿಸ್ಟನಾದ ತಾನು ಯಾವ ಸಲಹೆಯನ್ನು ಪರಿಶೀಲನೆಯಿಲ್ಲದೆ ಸ್ವೀಕರಿಸಲಿಕ್ಕಿಲ್ಲವೆಂಬುದನ್ನು ತನ್ನ ಗಲ್ಲವನ್ನೊರಸಿಕೊಂಡು ವ್ಯಕ್ತಪಡಿಸಿದ.

" ಅವನನ್ನು ಕೂಡಲೇ ಕೈದುಮಾಡಬೇಕೆ .... ? "

" ಖಂಡಿತವಾಗಿ, ಅವನು ಏನಾದರೂ ಹಾನಿಮಾಡುವ ಮುಂಚಿತವಾಗಿಯೇ." ಎಂದನು ಸ್ಕಾಲ್ಸ್ಕಿ.

ಅಧಿಕಾರಿ ತನ್ನ ಗಂಟಲನ್ನು ಕೆರೆದುಕೊಂಡ.

" ಅದೆಲ್ಲ ಒಳ್ಳೆಯದು .... ", ಅದೆಲ್ಲ ಸರಿ. ನಿನ್ನ ಸಲಹೆ ಒಳ್ಳೆಯದು. ಆದರೆ ಅಷ್ಟು ಬಹಿರಂಗವಾಗಿ ನಾವು ಕೈದುಮಾಡುವುದರಿಂದ ಆಗುವ ಪ್ರಚಾರವನ್ನು ಆದಷ್ಟು ದೂರಮಾಡುವುದು ಒಳ್ಳೆಯದಲ್ಲವೇ ನೀನೇ ಹೇಳು .... ? " ಎಂದವನು ಮಾತಿಗೆ ಮೊದಲುಮಾಡಿದಾಗ, ಸ್ಕಾಲ್ಸ್ಕಿಗೆ ಸಂತೋಷವಾಯಿತು.

ಸ್ಕಾಲ್ಸ್ಕಿ ತಾನು ಸೋಲನ್ನೊಪ್ಪಿಕೊಂಡಂತೆ ನಟಿಸಿದ. ಅವನಿಗೆ ಸಂಕೋಚವಾದಂತೆಯೂ ತೋರಿತು.

ಸಂಶಯಗ್ರಸ್ತನಾಗಿ, " ಹೌದು, ನಿಮಗೆ ಯಾವುದು ಒಳ್ಳೆಯದೆಂಬುದು ಗೊತ್ತಿದೆ. ಆದರೆ .... ಹೇಗಿದ್ದರೂ .... " ಎಂದನು.

ಅಧಿಕಾರಿ ಕೂಡಲೇ "ಹೇಗಿದ್ದರೂ ಎಂಬ ವಿಷಯವೇ ಅದರಲ್ಲಿಲ್ಲ! ಇಂಥ ಸಂಗತಿಗಳಲ್ಲಿ ನಾವು ನಮ್ಮ ಅನುಭವದ ಉಪಯೋಗವನ್ನು ಮಾಡಿಕೊಳ್ಳಬೇಕು" ಎಂದನು.

"ಸರಿ, ಸ್ವಾಮಿ," ಸ್ಕಾಲ್ಸ್ಕಿ ದೈನ್ಯತೆಯಿಂದ ನುಡಿದ.

"ಇಂಥ ಸಂದರ್ಭಗಳಲ್ಲಿ ಪ್ರಚಾರವಾಗದಂತೆ ನಾವು ಎಷ್ಟು ಜಾಗ್ರತೆ ವಹಿಸುತ್ತೇವೆ ಎಂದು ನಿನಗೆ ಗೊತ್ತಿದೆ" ಎಂದು ಅಧಿಕಾರಿ ಹೇಳುತ್ತಿರುವಾಗ ಅವನ ಮೇಲ್ದುಟಿ ತುಸು ನಡುಗುತ್ತಿದ್ದುದು ಸ್ಕಾಲ್ಸ್ಕಿಯ ಕಣ್ಣಿಗೆ ಬಿತ್ತು. "ಹೌದು...ನಾವು ರಹಸ್ಯದಲ್ಲಿ ಈ ಸಂದರ್ಭದಲ್ಲಿ ಕೆಲಸಮಾಡಿದರೆ, ಮುಂದಿನ ತನಿಖೆಗಳಿಗೂ ಸಹಾಯವಾದೀತು. ಇದು ಸಾಮಾನ್ಯಪ್ರಸಂಗವೆಂದು ಭಾವಿಸಿ ನಾವು ಒಂದು ನೋಟೀಸು ಕೊಡುವುದು ಈಗ ಒಳ್ಳೆಯದು. ಹಾಗೆಂದು ನನಗೆ ತೋರುತ್ತದೆ," ಎಂದು ಅವನು ಸ್ಕಾಲ್ಸ್ಕಿಗೆ ತನ್ನ ವಿಶೇಷ ಅನುಭವವನ್ನು ಪ್ರದರ್ಶಿಸುತ್ತ, "ಟ್ರ್ರಿಕ್ಸಾನನ್ನು ನಾವು ಬಹಿರಂಗವಾಗಿ ಕೈದುಮಾಡಿದರೆ, ಅದರಿಂದ ತಮಗೂ ಅಪಾಯವಿದೆಯೆಂದು ತಿಳಿದುಕೊಳ್ಳುವವರು ಬೇರೆ ಅನೇಕ ಮಂದಿಯಿರಬಹುದು." ಎಂದ.

"ಹೌದು. ಹೌದು .... ನನಗೆ ಈಗ ಅರ್ಥವಾಯಿತು ...."

"ಅದೇ. ಟ್ರ್ರಿಕ್ಸಾನನ್ನು ಬಹಿರಂಗವಾಗಿ ಕೈದುಮಾಡುವುದು ಜಾಣತನವಲ್ಲವೆಂದು ನನಗೆ ಯಥಾರ್ಥವಾಗಿಯೂ ತೋರುತ್ತದೆ. ಅವನಿಗೊಂದು ನೋಟೀಸು ಕೊಡುವುದು. ಅವನು ಇಲ್ಲಿಗೆ ಬಂದೊಡನೆ ಮೆಲ್ಲನೆ ಕೈದುಮಾಡುವುದು. ನಿನಗೆ ಅದರ ಲಾಭ ತಿಳಿಯದೆಂದು ತೋರುತ್ತದೆ?"

ಸ್ಕಾಲ್ಸ್ಕಿ ತಲೆಯಲ್ಲಾಡಿಸಿದ.

"ಅದು ಬಹಳ ಒಳ್ಳೆಯದೆಂದು ನಿಮಗೆ ಕಂಡರೆ ...." ಎಂದು ಸಂಶಯಪೂರ್ವಕವಾಗಿ ಹೇಳಿದ. ಆ ಮೂಲಕ ತನ್ನ ಒಪ್ಪಿಗೆಯನ್ನು ಸೂಚಿಸಿದನು.

"ನೀವು ತರುಣರೆಲ್ಲ ಹೀಗೆಯೇ, ಬಾಗಿಲಿನಕಡೆ ಓಡುವ ಹೋರಿಯಂತೆ ನೀವು ಮಾಡುತ್ತೀರಿ. ಇಲ್ಲ .... ನಮಗೆ ಬೇಕಾದುದು ಸಮಾಧಾನ. ಅದನ್ನು ನೀವು ತಿಳಿಯಬೇಕು. ನಾನು ಅವನಿಗೆ ಇಲ್ಲಿ ಬರಲು ನೋಟೀಸು ಕೊಡುತ್ತೇನೆ. ಆ ಬಳಿಕ ನಿಧಾನವಾಗಿ ಎಲ್ಲವೂ ನಡೆಯುತ್ತದೆ ...."

"ನೀವು ಹಾಗೆ ಇಚ್ಛಿಸಿದರೆ, ಸ್ವಾಮಿ..."

" ಹೌದು "

ಅಧಿಕಾರಿಯು ನೀಡಿದ ಹಸ್ತವನ್ನು ಬಹಳ ನಮ್ರತೆಯಿಂದ ಶಾಂತತೆಯಿಂದ, ಮತ್ತು ನಿಧಾನವಾಗಿ ಸ್ಕಾಲ್ಸ್ಕಿ ಕುಲುಕಿಸಿದ.

ಸ್ಕಾಲ್ಸ್ಕಿಗೆ ಆಗ ತುಂಬಾ ಆಯಾಸವಾಗಿತ್ತು. ಆದರೆ ರಸ್ತೆಗಿಳಿದ ಬಳಿಕ, ತಾನು ಅಧಿಕೃತ ದೂರುಕೊಡಲು ಒಪ್ಪಿಕೊಂಡುದನ್ನು ಹೇಗೋ ಅಧಿಕಾರಿಯು ಕಡೆಗಣಿಸಿದನೆಂದು ಅವನಿಗೆ ನೆನಪಾಯಿತು.

ಸ್ಕಾಲ್ಸ್ಕಿಗೆ ಮರಳಿ ಪೋಲೀಸು ಠಾಣೆಗೆ ಹೋಗಿ ತನ್ನ ಆರೋಪಣೆಯ ಮುಖ್ಯವಾದೊಂದು ಕಾರ್ಯಕ್ರಮವು ನಡೆಯಲಿಲ್ಲವೆಂದು ಹೇಳುವ ಧೈರ್ಯವಿರಲಿಲ್ಲ. ಅಧಿಕಾರಿಗೆ ಅವನು ಮರೆತುಬಿಟ್ಟದ್ದನ್ನು ಮರಳಿ ನೆನಪು ಹುಟ್ಟಿಸಿದರೆ ಅವನು ಮೆಚ್ಚಲಿಕ್ಕಿಲ್ಲ— ಆದರಲ್ಲೂ ಆರೋಪಣೆಯನ್ನು ಬರೆಸಿಕೊಳ್ಳಲು ತಾನು ಮರೆತೆನೆಂಬುದು ಮುಖ್ಯವಾದ ಸಂಗತಿಯಾದುದರಿಂದ, ಅದನ್ನು ನೆನಪುಮಾಡುವುದನ್ನು ಅವನು ಸ್ವಾಗತಿಸಲಿಕ್ಕಿಲ್ಲ.

ಸ್ಕಾಲ್ಸ್ಕಿ ಹೋಟೀಲೊಂದರಲ್ಲಿ ಬೀರ್ ಬಾಟ್ಲಿಯ ಮುಂದೆ ಕುಳಿತು, ದೂರನ್ನು ಬರೆಸಿಕೊಳ್ಳಲು ಅಧಿಕಾರಿಯು ಅಕಸ್ಮಾತ್ತಾಗಿ ಮರೆತುಬಿಟ್ಟನೆ ಎಂದು ಆಶ್ಚರ್ಯಪಟ್ಟ.

ತನ್ನನ್ನು ಅವನು ಗುರುತುಹಚ್ಚಿದನೆ ? ಬೇಕೆಂದೇ ತನ್ನನ್ನು ಒಮ್ಮೆ ಕಳಿಸಿ, ಮರಳಿ ಮರೆತುದನ್ನು ಹೇಳಲು ಹಿಂದಿರುಗುವೆನೆಂದು ಅವನು ನಿರೀಕ್ಷಿಸಿರುವನೆ? ಹೌದು ... ಆದರೆ ತನ್ನ ಒಡನಾಡಿಗಳೊಡನೆ ವಿಚಾರಿಸಿದ ಬಳಿಕವೇ ತಾನು ಅಲ್ಲಿಗೆ ಮರಳುವೆನೆಂದು ಸ್ಕಾಲ್ಸ್ಕಿ ಯೋಚಿಸಿದನು ....

ಅಂದು ಮಧ್ಯಾಹ್ನ ಸ್ಕಾಲ್ಸ್ಕಿ ಟ್ರ್ರಿಕ್ಸಾನ ಮನೆಗೆ ಮರಳಲಿಲ್ಲ. ಯಾರೂ ತನ್ನನ್ನು ಹಿಂಬಾಲಿಸದಂತೆ ಅವನು ಯಾವುದೋ ಎಲ್ಲ ದಾರಿಗಳಲ್ಲಿ ಹೋದ. ರಾತ್ರಿ ಸ್ವಲ್ಪ ಹೊತ್ತಾದ ಬಳಿಕ ಅವನು ಟ್ರ್ರಿಕ್ಸಾನ ಮನೆಯೊಳಗೆ ಪ್ರವೇಶಿಸಿದ. ಟ್ರ್ರಿಕ್ಸಾನಿಗೆ ನೋಟೀಸು, ದೂರನ್ನು ಬರೆಸಿಕೊಳ್ಳದೆಯೇ ಬಂದಿತ್ತೆಂದೂ, ತನ್ನನ್ನು ಅಧಿಕಾರಿಯು ಗುರುತು ಹಚ್ಚಲಿಲ್ಲವೆಂದೂ ಅಲ್ಲಿ ಅವನಿಗೆ ತಿಳಿಯಿತು.

ಟ್ರ್ರಿಕ್ಸಾ ಮನೆಯಲ್ಲಿದ್ದ. ಸ್ಕಾಲ್ಸ್ಕಿ ದಣಿದಿದ್ದನಲ್ಲದೆ, ಹೆದರಿಕೆಯಿಂದ ತನ್ನ ಸ್ವಾಭಾವಿಕವಾದ ಆಶಾವಾದವನ್ನು ಕಳೆದುಕೊಂಡಿದ್ದ.

ಹೇಗಿದ್ದರೂ ಪಿಂಗಾಣಿಯ ಒಲೆಯ ಬಳಿಯಲ್ಲಿ ಮೆಟ್ಟುಹಾಕಿಕ್ಕೊಂಡು ಕುಳಿತಿದ್ದ ಟ್ರ್ರಿಕ್ಸಾನನ್ನು ನೋಡಿದೊಡನೆಯೇ ಸ್ಕಾಲ್ಸ್ಕಿಯು ಒಂದು ಹೆದರಿಕೆ

ಮಾಯವಾಯಿತು. ಒಂದು ಕಪ್ ಕಾಫಿ ಮತ್ತು ಒಂದು ಗ್ಲಾಸ್ ಮದ್ಯ ಅವನ ದಣಿವನ್ನು ಶಾಂತಗೊಳಿಸಿದುವು, ಆ ಬಳಿಕ ಟ್ರಿಕ್ಸಾ ಹೇಳಿದ ಕತೆಯಿಂದ ಸ್ಕಾಲ್ಸ್ಕಿ ಪುನಃ ಉತ್ತೇಜನಗೊಂಡ.

ಎಗರ್ ಕೋರ್ಟಿನಿಂದ ಅಂದು ಅಪರಾಹ್ನ ಒಬ್ಬನು ಸೈಕಲ್ಲಿನಲ್ಲಿ ಬಂದಿದ್ದನೆಂದು ಟ್ರಿಕ್ಸಾ ಹೇಳಿದ. ಅವನು ಸೈಕಲನ್ನು ನಿಲ್ಲಿಸಿದ ಟ್ರಿಕ್ಸಾನ ಕಚೇರಿಯ ಬಳಿಗೆ ಬಂದು ಬಾಗಿಲನ್ನು ಬಡೆದು, ಟ್ರಿಕ್ಸಾನಿಗೆ "ಸಮ್ಮನ್ಸ್" ಎಂದು ಮುದ್ರಿಸಿದ್ದ ಲಕೋಟೆಯೊಂದನ್ನು ಕೊಟ್ಟಿದ್ದ. ಆ ಸಂದೇಶವಾಹಕನು ಏನೂ ಮಾತನಾಡಿರಲಿಲ್ಲ.

ಟ್ರಿಕ್ಸಾ ಲಕೋಟೆಯನ್ನು ಮೌನವಾಗಿಯೇ ಪಡೆದ, ದೂತನು ಅಲ್ಲಿಂದ ಹಿಂದೆರಳಿದನು.

"ಅದು ಇಲ್ಲಿದೆ" ಎನ್ನುತ್ತ ಒಂದು ಕಾಗದವನ್ನು ಜೇಬಿನಿಂದ ತೆಗೆದು ಟ್ರಿಕ್ಸಾ ಸಾಲ್ಸ್ಕಿಗೆ ಕೊಟ್ಟನು.

ಕಾಗದದಲ್ಲಿ ಹೀಗಿತ್ತು.

**ಎಗರ್ ಡಿಸ್ಟ್ರಿಕ್ಟ್ ಕೋರ್ಟಿನ 185 ನೇ ಕೋಣೆಯಲ್ಲಿ ನೀನು ಬೆಳಗ್ಗೆ 10 ಘಂಟೆಯೊಳಗೆ ಹಾಜರಾಗಬೇಕು.**

"ಬೆಳಗ್ಗೆ ಹತ್ತುಗಂಟೆಯೆಂದರೆ ನಾಳೆ.... ?"

"ಹೌದು" ಟ್ರಿಕ್ಸಾ ನುಡಿದ. "ನೀವು ಕೋಣೆಯ ಸಂಖ್ಯೆಯನ್ನು ಗಮನಿಸಿದಿರಾ ?"

ಸ್ಕಾಲ್ಸ್ಕಿ ತಲೆಯಲ್ಲಾಡಿಸಿದ.

"ಒಳ್ಳೆಯ ಅದೃಷ್ಟ ಸೂಚಕವೆಂದು ತೋರುತ್ತದೆ ಕರೆಲ್."

ಟ್ರಿಕ್ಸಾ ಕಾಗದವನ್ನು ಹಿಂದೆ ಪಡೆದು ಗಂಭೀರವಾಗಿ

"ಅದು ಸ್ವಲ್ಪ ಮಟ್ಟಿಗೆ ನನ್ನನ್ನು ದಂಗು ಬಡಿಸಿತು. ಅದು ನಮ್ಮ ಅದೃಷ್ಟ ಸೂಚಕವೆಂದು ನಾನು ಭಾವಿಸಲಿಲ್ಲ. ಅವರು ನಮ್ಮೊಡನೆ ಏನೋ ಆಟವಾಡುತ್ತಿದ್ದಾರೆಯೋ ಎಂದು ನನಗೆ ಸಂಶಯ ಬಂತು. ನೀವು ಕೋರ್ಟಿಗಂತೂ ಹೋಗಿದ್ದಿರಿ. ಅಲ್ಲಿ 185 ನೇ ನಂಬರಿನ ಕೋಣೆಯೊಂದು ಇದೆಯೇ ಇಲ್ಲವೇ ಎಂಬುದನ್ನು ನೋಡಿರುವಿರಾ... ?"

"ನಾನು ಗಮನಿಸಿಲ್ಲ", ಸ್ಕಾಲ್ಸ್ಕಿ ನಿರುತ್ಸಾಹದಿಂದ ನುಡಿದ.

ಟ್ರ್ರಿಕ್ಸಾನು ತನ್ನ ಹೆಗಲನ್ನು ತಗ್ಗಿಸಿದ.

"ಓಹೊ! ಸರಿ... ಅವರು ನಮ್ಮ ತಂತ್ರವನ್ನು ತಿಳಿದರೂ ಸರಿ, ತಿಳಿಯದಿದ್ದರೂ ಸರಿ. ನಾವು ನಮ್ಮ ಉಪಾಯವನ್ನು ಸಾಧಿಸಲೇಬೇಕು. ಹೇಗಿದ್ದರೂ ಇದು ಸಾಮಾನ್ಯವಾದ ನೋಟೀಸೆಂದು ನಾನು ತಿಳಿದಿದ್ದೇನೆ.

"ನಾನು ನನ್ನ ಕ್ಲಾರ್ಕ್ ಮುಸಿಲ್‌ನನ್ನು ನೋಡಿ, 'ಮುಸಿಲ್ ನಾನು ನಾಳೆ ಕೆಲಸಕ್ಕೆ ಬರುವುದಿಲ್ಲ. ನೀನೇ ನನ್ನ ಕೆಲಸಮಾಡಬೇಕಷ್ಟೆ' ಎಂದೆ. ಅವನಿಗೆ ತುಸು ಆಶ್ಚರ್ಯವಾಯಿತು." ಎಂದು ಟ್ರ್ರಿಕ್ಸಾ ನಸುನಕ್ಕನು. ಡಿಸ್ಟ್ರಿಕ್ಟ್ ಕೋರ್ಟಿಗೆ ಹಾಜರಾಗಬೇಕೆಂದು ನನಗೆ ಸಮನ್ಸ್ ಬಂದಿದೆ. ಆದರೆ ನೀನೇನೂ ಚಿಂತಿಸಬೇಡ; ಇದರಲ್ಲೇನೂ ಗಾಬರಿಯಿಲ್ಲ. ನಾನು ಕಾರ್ಯನಿರ್ವಾಹಕ ಸಮಿತಿಗೆ ತಿಳಿಸುತ್ತೇನೆ, ನಾನು ಹಿಂದಿರುಗುವತನಕ ನೀನು ಆದಷ್ಟು ದಕ್ಷತೆಯಿಂದ ಕೆಲಸಮಾಡು ಎಂದು ನಾನೆಂದೆ" ಎಂದು ಟ್ರ್ರಿಕ್ಸಾನು ಸ್ಕಾಲ್ಸಿಕ್ಕಗೆ ಹೇಳಿದನು.

"ನಾನು ಅಷ್ಟು ವಿವರಿಸಿದುದರಿಂದ ಮುಸಿಲ್ ತುಸು ಆಶ್ಚರ್ಯಪಟ್ಟಿರಬೇಕು. ನಾನು ಅವನೊಡನೆ ಎಂದೂ ಹೆಚ್ಚು ಮಾತಾಡಿದ್ದಿಲ್ಲ. ಮತ್ತೆ ಅವನಿಗೆ ಆಜ್ಞೆಯನ್ನೀಯುವುದಲ್ಲದೆ; ವಿವರವಾಗಿ ಹೇಳುವುದಂತೂ ಎಂದೂ ಇಲ್ಲವೇ ಇಲ್ಲ.

"ನಾನು ಎಲ್ಲಿ ಹೋಗಿದ್ದೇನೆ ಎಂದು ಯಾರಾದರೂ ಟೆಲಿಫೋನಿನಲ್ಲಿ ಕೇಳಿದರೆ ಏನೂ ಹೇಳಬೇಡವೆಂದು ಅವನಿಗೆ ಹೇಳಿದ್ದೇನೆ. ಬೇರೇನು ನನ್ನ ವಿಷಯ ಕೇಳಿದರೂ ಉತ್ತರಿಸಬಾರದೆಂದೆ.... ನಾನು ಧಾರಾಳವಾಗಿ ಮಾತಾಡಿದೆನೆಂದು ಮುಸಿಲ್ ಯೋಚಿಸಿದರೆ ಅವನಿಗೆ ಅದರ ಕಾರಣವೂ ಬೇಗನೇ ತಿಳಿಯದಿರದು...."

"ಇದು ವಿಚಿತ್ರವಾಗಿದೆ" ಎನ್ನುತ್ತ ಸ್ಕಾಲ್ಸಿಕ್ಕ, ಒಲೆಯಮೇಲೆ ಬಾಗಿ, ನಮ್ಮ ಅದೃಷ್ಟ ಚೆನ್ನಾಗಿದ್ದರೆ ನಾಳೆ ಇಷ್ಟು ಸಮಯದೊಳಗೆ ನಾವು ಪಲಾಯನಮಾಡಿಯಾಗುತ್ತದೆ! ಮುಸಿಲ್ ಮತ್ತು ಎಲ್ಲರಿಂದಲೂ ನಾವು ದೂರವಿರುತ್ತೇವೆ ....

ಟ್ರ್ರಿಕ್ಸಾ ಎದ್ದು ಮೈನೇವರಿಸುತ್ತ,

"ನಮಗೆ ಏನೇ ಸಂಭವಿಸಿದರೂ ಒಂದು ವಿಷಯವನ್ನು ನಾವು ಗಮನಿಸಬೇಕು, ರೆನೆ ಅದೇನೆಂದರೆ ನಮಗೆ ಎಷ್ಟು ಸಾಧ್ಯವಿದೆಯೋ ಅಷ್ಟರಮಟ್ಟಿಗೆ ನಾವು ಎಲ್ಲವನ್ನು ಸಿದ್ಧಗೊಳಿಸಿದ್ದೇವೆ. ಇನ್ನೆಲ್ಲ ದೇವರ ಕೈಯ್ಯಲ್ಲಿದೆ..."

ಸ್ಕಾಲ್ನಿಕ್ಕ ಗಂಭೀರವಾಗಿ ತಲೆಯುಲ್ಲಾಡಿಸಿದ.

"ಹೌದು, ಉಳಿದುದೆಲ್ಲ ದೇವರ ಕೈಯ್ಯಲ್ಲಿದೆ...." ಎಂದ.

1951 ನೇ ಸೆಪ್ಟೆಂಬರ್ 11 ನೇ ದಿನ ಬೆಳಿಗ್ಗೆ ಮೂವತ್ತೊಂಭತ್ತು ಜನರ ವೈಯುಕ್ತಿಕ ಜೀವನದಲ್ಲಿ ಒಂದು ಅಪೂರ್ವ ಸಮಯವಾಗಿತ್ತು.

ಆ ಮೂವತ್ತೊಂಭತ್ತು ಮಂದಿಯಲ್ಲಿದ್ದ ಮಕ್ಕಳು ದೊಡ್ಡವರೂ ಹೆಚ್ಚಿನ ಮಂದಿ ಇದ್ದರು— ಅಂದಿನ ದಿನದ ಪ್ರಾಮುಖ್ಯವನ್ನು ತಿಳಿಯಲಿಲ್ಲ, ಆದರೆ ತಮ್ಮ ಹೆತ್ತವರ ವರ್ತನೆಯಲ್ಲುಂಟಾಗಿದ್ದ ಬದಲಾವಣೆಯನ್ನು ನೋಡಿ, ಆ ದಿನವು ಎಂದಿಗಿಂತ ಸಂಪೂರ್ಣ ಭಿನ್ನವಾಗಿದೆಯೆಂಬ ಸಂಶಯವು ವಯಸ್ಸಾದ ಮಕ್ಕಳಲ್ಲಿ ಮೂಡಿತ್ತು.

ಒಂದಿಷ್ಟೂ ತೊಡಕಿಲ್ಲದೆ ಸಂಘಟನೆಯು ನಡೆದಿತ್ತು. ಕಾಗದ, ತಂತಿ, ಟೆಲಿಫೋನ್ ಮತ್ತು ಮುಖತಃ ತಪ್ಪಿಸಿಕೊಂಡಿದ್ದವರಿಗೆ ಪಲಾಯನಮಾಡುವ ಸಿದ್ಧತೆಯಲ್ಲಿರಲು ಸಂದೇಶಗಳು ಹೋಗಿದ್ದುವು. ಬಹಳ ಜಾಗ್ರತೆಯಿಂದ ಕಾಲಕ್ರಮದ ಪಟ್ಟಿಯನ್ನು ತಯಾರಿಸಿ ಇಂಥಿಂಥಾವರು ಇಂಥಿಂಥ ಕಡೆ ರೈಲನ್ನು ಹತ್ತಬೇಕೆಂದು ಅವರಿಗೆಲ್ಲ ತಿಳಿಸಲಾಗಿತ್ತು.

ಪಲಾಯನ ಮಾಡುವವರೆಲ್ಲ, ಪಲಾಯನ ಮಾಡಿಯಾಗುವವರೆಗೂ, ತಾವು ತಮ್ಮ ಉಳಿದ ಜೀವಮಾನವನ್ನೆಲ್ಲ ಜೆಕೊಸ್ಲೋವಾಕಿಯಾದಲ್ಲೇ ಕಳೆಯಲಿರುವೆವೆಂದು ಭಾವಿಸಿ ವರ್ತಿಸಬೇಕಾಗಿ ಅವರನ್ನೆಲ್ಲ ಕೇಳಿಕೊಳ್ಳಲಾಗಿತ್ತು. ನಿತ್ಯದ ಹಾಲು ಸರಬರಾಯಿಯನ್ನು ನಿಲ್ಲಿಸಕೂಡದು. ಕೆಲಸದವರಿಗೆ ಏನನ್ನೂ ಹೇಳಬಾರದು. ತಾವು ರಜೆಯಲ್ಲಿ ಹೋಗುತ್ತೇವೆಂಬ ನೆವನದಲ್ಲಿ ಕೂಡಾ ಕೆಲಸಗಾರರನ್ನು ಅವರು ನಿವೃತ್ತಿಮಾಡಕೂಡದು.

ಪ್ರತಿಯೊಬ್ಬನೂ ಕೊನೆಯ ಘಳಿಗೆಯತನಕ ಪಲಾಯನದ ವಿಷಯವನ್ನು ಸಾಧ್ಯವಿದ್ದಷ್ಟು ಮಟ್ಟಿಗೆ ಮರೆಯಬೇಕೆಂದು ಟ್ರ್ನಕ್ಕಾ ಕೊನೆಯದಿನದ ಆಜ್ಞೆಯಲ್ಲಿ ಒತ್ತಾಯಪೂರ್ವಕ ತಿಳಿಸಿದ್ದ. ಹಾಗಿದ್ದರೆ ಮಾತ್ರ ಪ್ರತಿಯೊಬ್ಬನೂ ತನ್ನ ಸ್ವಭಾವಿಕವಾದ, ಭಾವೋದ್ರೇಕ, ಹೆದರಿಕೆ, ಕುತೂಹಲಗಳನ್ನು ಅಡಗಿಸಬಹುದಿತ್ತು.

ಸೂಚಿಸಲ್ಪಟ್ಟ ನಿಲ್ದಾಣಗಳಲ್ಲಿ ರೈಲು ಹತ್ತಲು ಹೆಚ್ಚಿನ ಪಲಾಯನಗಾರರಿಗೆ ಏನೂ ಸಿದ್ಧತೆ ಮಾಡಬೇಕಾಗಿರಲಿಲ್ಲ. ಆಹಾರವನ್ನು ಮಾತ್ರ

ತುಂಬಿಸಿದ ಸಣ್ಣ ಪೆಟ್ಟಿಗೆ ಇಲ್ಲವೇ ಕಟ್ಟುಗಳಿಗಿಂತ ಹೆಚ್ಚಿಗೆ ಸಾಮಾನನ್ನು ಯಾರೂ ತರಕೂಡದೆಂದು ತಿಳಿಸಲಾಗಿತ್ತು. ಇಂದಿನ "ಪ್ರಜಾಸತ್ತೆ"ಯ ಜೆಕೊಸ್ಲೋವಾಕಿಯಾದಲ್ಲಿ ಹೆಚ್ಚು ಸಾಮಾನಿನೊಡನೆ ಪ್ರಯಾಣಮಾಡುವ ವ್ಯಕ್ತಿಯು ಅಧಿಕಾರಿಗಳ ಗಮನವನ್ನು ತನ್ನೆಡೆಗೆ ಸುಲಭವಾಗಿ ಸೆಳೆಯುತ್ತಿದ್ದನು.

ಡಾಕ್ಟರ್ ಸ್ಪೆಕ್ ಎಂದಿನಂತೆ ಎದ್ದು ಆಸ್ಪತ್ರೆಗೆ ಸಕಾಲದಲ್ಲಿಯೇ ಹೋದರು.

ಅವರು ಮೇಟ್ರನ್‌ಳನ್ನು ಕರೆದು ಅವಳೊಡನೆ ಆಸ್ಪತ್ರೆಯ ಕುರಿತು ನಿತ್ಯದ ಕೆಲಸಗಳನ್ನು ಚರ್ಚಿಸಿ ಅವಳನ್ನು ಕಳುಹಿಸಿಕೊಟ್ಟರು. ಆ ಬಳಿಕ ತಮ್ಮ ಕಾರ್ಯದರ್ಶಿಯನ್ನು ಕರೆದು ಒಂದು ಕಾಗದವನ್ನು ಒರೆಯಿಸುವಾಗ ವಾಸ ಸ್ಥಾನಗಳ ನಿಯೋಗದ ಅಧಿಕಾರಿಯೊಬ್ಬನು ಬಂದನು. ಅವನು ದಪ್ಪಗಿದ್ದು ಅಂದಿನ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ತುಫಾನುಗಳನ್ನು ಎದುರಿಸಬಲ್ಲವನೆಂದು ತೋರುತ್ತಿದ್ದ. ಅವನ ಕೋಟಿನಮೇಲೆ ಒಂದು ಕೆಂಪು ನಕ್ಷತ್ರದ ಗುರುತು ಇತ್ತು. ಅವನು ಡಾಕ್ಟರರಿಗೆ ಬಿಗಿದ ಮುಷ್ಟಿಯಿಂದ ನಮಸ್ಕರಿಸಿ, ಸ್ನೇಹಭಾವವನ್ನು ನಟಿಸುತ್ತ ಕೈನೀಡಿದ.

"ಡಾಕ್ಟರ್, ನಿಮಗೆ ನನ್ನ ಪರಿಚಯವಿಲ್ಲ. ವಾಸ ಸ್ಥಾನಗಳ ನಿಯೋಗದ ಒಬ್ಬ ಅಧಿಕಾರಿ, ನಿಮಗೆ ಆ ದಿನ ... ಹೂಂ, ನಿಮಗೆ ನೆನಪಿದೆಯಷ್ಟೆ!" ಹೀಗೆನ್ನುತ್ತ, ಹೇಳದೆ ಕೇಳದೆ ಅಲ್ಲಿದ್ದ ಕುರ್ಚಿಯಲ್ಲಿ ಅವನು ಕುಳಿತು ತನ್ನ ಸಿಗರೇಟು ಪೆಟ್ಟಿಗೆಯಿಂದ ತಾನೊಂದು ಸಿಗರೇಟನ್ನು ತೆಗೆದು, ಡಾಕ್ಟರರಿಗೆ ಪೆಟ್ಟಿಗೆಯನ್ನು ಕೊಟ್ಟ. "ನೀವು ಸ್ವಲ್ಪ ವಿವರಗಳನ್ನು ನನಗೆ ತಿಳಿಸುವಿರಾ?" ಎಂದು ಅವನು ವ್ಯವಹಾರ ಶೀಲನಂತೆ ನಗುತ್ತ ಕೇಳಿದನು.

ಡಾಕ್ಟರ್ ಸ್ಪೆಕ್ ಸಿಗರೇಟೊಂದನ್ನು ತೆಗೆದುಕೊಂಡು, "ಸರಿ .. ಏನೂ ಹೆಚ್ಚು ವಿಶೇಷವಿಲ್ಲ. ಆದರೆ ಇಂದು ಸರಿಯಾದ ಆಫೀಸು ಮತ್ತು ಆಲೋಚಿಸುವ ಕೋಣೆಗಳು ತರುಣ ಡಾಕ್ಟರರನೇಕರಿಗೆ ಸಿಗದೆ ಪೇಚಾಟಪಡುತ್ತಿದ್ದಾರೆ. ನನಗೆ ಈ ಆಸ್ಪತ್ರೆಯನ್ನು ನಡೆಸುತ್ತ ಖಾಸಗಿ ಚಿಕಿತ್ಸೆಯನ್ನು ಮಾಡುವುದು ಸಾಧ್ಯವಿಲ್ಲ. ಆದ್ದರಿಂದ ಯಾರಾದರೂ ತರುಣ ಡಾಕ್ಟರರಿಗೆ ಒಂದು ಆಲೋಚಿ

ಸುವ ಕೋಣೆ ಬೇಕಾಗಿದ್ದರೆ ನಿಮಗೆ—ಅಂದರೆ ವಾಸ ಸ್ಥಾನಗಳ ನಿಯೋಗಕ್ಕೆ ಗೊತ್ತಿರಬಹುದೆಂದು ಯೋಚಿಸಿದೆ. ನನ್ನ ಕೋಣೆಯನ್ನು ಅಂಥವರು ಯಾರಾದರೂ ಉಪಯೋಗಿಸಲು ನನ್ನ ಅಡ್ಡಿಯಿಲ್ಲ ... " ಅಧಿಕಾರಿಯು ಒಂದು ನೋಟ್ ಪುಸ್ತಕವನ್ನು ಪರಿಶೀಲಿಸುತ್ತ, " ಈ ಆಲೋಚಿಸುವ ಕೋಣೆ, ನಿಮ್ಮ ಮನೆಯಲ್ಲೇ ಇದೆಯೆ, ಡಾಕ್ಟರ್ ? " ಎಂದು ಪ್ರಶ್ನಿಸಿದನು.

" ಹೌದು, ಆದರೆ ನಮ್ಮ ಮನೆಯ ಭಾಗದಿಂದ ಅದು ಪ್ರತ್ಯೇಕವಿದೆ. ಅದು ಸಾಕಷ್ಟು ಗೋಪ್ಯವಾಗಿಯೂ ಇದೆ ", ಅವರು ತಮ್ಮ ಕೈಗಡಿಯಾರವನ್ನು ನೋಡುತ್ತ, "ನಿಮಗೆ ಅದನ್ನು ನೋಡಬೇಕೆಂದಿದ್ದರೆ ನನ್ನ ಕಾರಿನಲ್ಲಿ ನಿಮ್ಮನ್ನು ಕೊಂಡುಹೋಗುತ್ತೇನೆ ... " ಎಂದರು.

" ಅದೇ ಒಳ್ಳೆಯದೆಂದು ನನಗೆ ತೋರುತ್ತದೆ, ಸ್ವಾಮಿ ", ಎಂದು ಅಧಿಕಾರಿಯು, ತಾನು ಬಹಳ ಕೆಲಸವಿದ್ದವನಂತೆ ನಟಿಸುತ್ತ " ಅದು ಬಹಳ ದೂರವಿದೆಯೆ, ಡಾಕ್ಟರ್ .... ? " ಎಂದು ಕೇಳಿದನು.

" ಓಹೋ, ಅಲ್ಲಿಯೇ ಇದೆ- ಎರಡು ರಸ್ತೆಗಳನ್ನು ದಾಟಬೇಕು .... ಅಷ್ಟೆ. "

" ಒಳ್ಳೆಯದಾಯಿತು ! "

ಕೆಲವು ನಿಮಿಷಗಳಲ್ಲೇ ಆ ಅಧಿಕಾರಿಯನ್ನು ಸ್ವೆಕ್ ತಮ್ಮ ಹೆಂಡತಿಗೆ ಪರಿಚಯಮಾಡಿಸಿ, ಅವನಿಗೆ ಸ್ವಲ್ಪ ಪಾನಕವನ್ನೂ ಬಿಸ್ಕುಟಗಳನ್ನೂ ಕೊಡಿಸಿದರು. ಅಧಿಕಾರಿಯು ಗಂಭೀರವಾಗಿ ಡಾಕ್ಟರರ ಖಾಸಗಿ ಆಲೋಚಿಸುವ ಕೋಣೆಯನ್ನು ಅಳತೆಮಾಡುತ್ತಿದ್ದ.

ಅವನಿಗೆ ಡಾಕ್ಟರರು " ವಿಶ್ವಾಸಾರ್ಹರಲ್ಲ " ವೆಂದೂ, ಅವರನ್ನು ಒಂದು ಸಲವಾದರೂ ಆ ಬಗ್ಗೆ ವಿಚಾರಣೆ ಮಾಡಲಾಗಿತ್ತೆಂದೂ ಸುದ್ದಿ ಸಿಕ್ಕಿತ್ತು. ಆದರೆ ಆ ಪಾನಕವನ್ನು ಕುಡಿದು, ಕೋಣೆಯ ಅಳತೆಗಳನ್ನು ಬರೆದುಕೊಳ್ಳುವಾಗ ಡಾಕ್ಟರರನ್ನು ಯಾರೋ ದ್ವೇಷಸಾಧನೆಗಾಗಿ ತೊಂದರೆಗೊಳಪಡಿಸಿದ್ದರೆಂದು ಅವನಿಗೆ ತೋರಿತು. ಶ್ರೀಮತಿ ಸ್ವೆಕ್ ಅವನ ಗ್ಲಾಸಿಗೆ ಪುನಃ ಪಾನಕ ಸುರಿದಾಗಲಂತೂ, ಪ್ರಜಾರಾಜ್ಯಕ್ಕೆ ಆ ಡಾಕ್ಟರರಷ್ಟು ನಿಷ್ಠಾವಂತ ಸ್ನೇಹಿತರು ಬೇರೆ ಯಾರೂ ಇಲ್ಲವೆಂಬ ತೀರ್ಮಾನಕ್ಕೆ ಅವನು ಬಂದಿದ್ದನು.

ಅವನದನ್ನು ಒಡನೆಯೇ ಹೇಳಿಯೇಬಿಟ್ಟನು.

"ಡಾಕ್ಟರ್, ನೀವು ಜನತೆಯ ನಿಜವಾದ ಸ್ನೇಹಿತರು, ಹೀಗೆ ನಿಮ್ಮ ಖಾಸಗಿ ಮನೆಯನ್ನೇ ನಮ್ಮ ಸ್ವಾಧೀನ ಕೊಡುವುದೆಂದರೆ ಸಾಮಾನ್ಯವೇ!"

"ನಾನು ಚಿಕ್ಕವಯಸ್ಸಿನಲ್ಲಿ ಈ ವೃತ್ತಿಯನ್ನು ಆರಂಭಮಾಡುವಾಗ ನನ್ನ ಒಂದು ಸ್ವಂತ ಆಲೋಚಿಸುವ ಕೋಣೆಗಾಗಿ ಎಷ್ಟಾದರೂ ಖರ್ಚು ಮಾಡಲೂ ಸಿದ್ಧನಿದ್ದೆ. ಈ ಸಂಗತಿಯನ್ನು ಮರೆಯುವುದು ಅಸಾಧ್ಯ...."

"ಅವನ್ನು ಬೇಗನೆ ಕೆಲವರು ಮರೆತುಬಿಡುತ್ತಾರೆ" ಎಂದನು ಅಧಿಕಾರಿ. ಆದರೆ ಅಲ್ಲಿಂದ ಹೋದ ಬಳಿಕ ಅವನು ಡಾಕ್ಟರರನ್ನು ಖಂಡಿತವಾಗಿಯೂ ನಂಬಬಹುದೆಂದು ಕಮಿಸ್ಸಾರ್ ಪ್ರಡೆಲ್ಕನಿಗೆ ವರದಿಮಾಡಿದ್ದ. ಇದಕ್ಕೆ ಅವರು ಹೂಡಿದ್ದ ತಂತ್ರದಲ್ಲಿ ಪ್ರಮುಖ ಸ್ಥಾನವಿತ್ತು.

ಅಧಿಕಾರಿಯು ಕೋಣೆಯನ್ನು ಪರಿಶೀಲಿಸುತ್ತಿದ್ದಾಗ ಒಂದು ವಿಲಕ್ಷಣ ಘಟನೆ ಸಂಭವಿಸಿತು. ಆದರೆ ಅದು ಮಾತ್ರ ಕಮಿಸ್ಸಾರ್ ಪ್ರಡೆಲ್ಕನ ಕಿವಿಗೆ ಬೀಳಲಿಲ್ಲ. ಅದು ಕಮಿಸ್ಸಾರ್‌ನಿಗೆ ತಿಳಿಯುತ್ತಿದ್ದರೆ, ಅವನು ಏನು ಭಾವಿಸುತ್ತಿದ್ದನೋ ಹೇಳಲಾಗದು.

ಅಧಿಕಾರಿಯು ಕೋಣೆಯನ್ನು ಅಳೆಯುತ್ತಿದ್ದಾಗ ಟೆಲಿಫೋನಿನ ಘಂಟೆ ಬಾರಿಸಿತು.

"ಕ್ಷಮಿಸಿ," ಎನ್ನುತ್ತ ಡಾಕ್ಟರರು ಅದನ್ನೆತ್ತಿ, "ಡಾಕ್ಟರ್ ಸ್ಟೈಕ್ ಇದು ..." ಎಂದರು.

"ಡಾಕ್ಟರ್ ಸ್ಟೈಕ್...?"

"ಹೌದು. ಸ್ಟೈಕ್ ಮಾತಾಡುತ್ತಿರುವುದು..."

ಒಂದು ಧ್ವನಿ ಹೇಳಿತು.

"ನೀನು ದುಷ್ಟ ಹಂದಿ! ದುರುಳ ಕಮ್ಯುನಿಸ್ಟ್! ನೀನು ಹೆಚ್ಚು ಸಮಯ ಬಾಳದಂತೆ ನಾವು ನೋಡುತ್ತೇವೆ! ನೋಡು!"

ಡಾಕ್ಟರ್ ಸ್ಟೈಕ್ ಹೇಳಿದರು.

"ಯಾರದು? ಯಾರು ಮಾತಾಡುವುದು...?"

ಆಗ ಮತ್ತೆ ಉತ್ತರವಿಲ್ಲ. ಆಚೆ ಕಡೆ ಆದ ಕ್ಲಿಕ್ ಶಬ್ದವನ್ನು ಕೇಳಿ ತಮ್ಮ ಕೈಯಲ್ಲಿದ್ದ ಟೆಲಿಫೋನನ್ನು ಡಾಕ್ಟರರು ಯೋಚಿಸುತ್ತ ಕೆಳಗಿಟ್ಟರು.

ವಾಸಸ್ಥಾನ ನಿಯೋಗದ ಅಧಿಕಾರಿಯು, ಒಂದು ಮೂಲೆಯಲ್ಲಿ ಗೋಡೆಯನ್ನು ಮೊಣಕಾಲೂರಿ ಅಳೆಯುತ್ತಿದ್ದ. ಅವನಿಗೆ ಟೆಲಿಫೋನಿನ ಧ್ವನಿ ಕೇಳಿರಲಿಲ್ಲ.

ಆದರೆ ಯಾರಿದು, ಎಂದು ಡಾಕ್ಟರರಿಗೆ ಆಶ್ಚರ್ಯವಾಯಿತು. ತಮ್ಮನ್ನು ದ್ರೋಹಿಯೆಂದು ಯಾರಾದರೂ ನಂಬಿರುವರೆ? ಕಮಿಸ್ಸಾರ್ ಪ್ರಡೆಲ್ಕನ ಪಕ್ಷಕ್ಕೆ ತಾನು ಸೇರಿರುವೆನೆಂದು ಯಾರಾದರೂ ನಂಬಿರುವರೆ? ಅಥವಾ ಟ್ರ್ರಿಕ್ಸಾ ತಾನು ಇನ್ನು ಬಂಧನಕ್ಕೊಳಗಾಗಿಲ್ಲವೆಂದು ತಿಳಿಸಲಿಕ್ಕಾಗಿ ಈ ವಿಚಿತ್ರ ಉಪಾಯವನ್ನು ಕೈಕೊಂಡನೆ?

ಅಧಿಕಾರಿ ತನ್ನ ಅಳತೆಯ ಕೋಲನ್ನು ಮಡಚಿ ಜೇಬಿಗೆ ಸೇರಿಸಿ, ನೋಟ್ ಪುಸ್ತಕವನ್ನು ಇನ್ನೊಂದು ಕಿಸೆಯಲ್ಲಿ ಹಾಕಿಕೊಂಡ.

ಅವನು ತನ್ನ ಕೋಟಿನ ಗುಂಡಿಗಳನ್ನು ಹಾಕಿಕೊಳ್ಳುತ್ತ, ತನ್ನ ಮೆಚ್ಚುಗೆಯ ದೃಷ್ಟಿಯನ್ನು ಕೋಣೆಯ ಸುತ್ತು ಬೀರಿದ.

" ಇನ್ನೊಂದು ಗ್ಲಾಸ್ ... ಹೋಗುವಾಗ ಕುಡಿಯುವಿರೆ ? " ಡಾಕ್ಟರ್ ಪ್ರಶ್ನಿಸಿದರು.

" ಸರಿ .... ನಿಮ್ಮ ಒತ್ತಾಯಕ್ಕೆ ಬೇಡುವುದಿಲ್ಲ, ಡಾಕ್ಟರ್ ".

ಡಾಕ್ಟರ್ ಸ್ವೆಕ್ ಇನ್ನೊಂದು ಗ್ಲಾಸ್ ಪಾನಕವನ್ನು ಅವನಿಗೆ ಕೊಟ್ಟರು.

" ಧನ್ಯವಾದ, ಡಾಕ್ಟರ್ ! ನೀವು ಮರಮುಟ್ಟುಗಳನ್ನು ಇಲ್ಲಿ ಬಿಡುವುದಿಲ್ಲವೆಂದು ಕಾಣುತ್ತದೆ ? ಹ್ಹ ಹ್ಹ ! "

" ಕೆಲವನ್ನು ಬಿಡಲು ಅಡ್ಡಿಯಿಲ್ಲ. ಅಗತ್ಯವಿದ್ದುದನ್ನು ಮಾತ್ರವಾದರೂ ಬಿಡುತ್ತೇನೆ. "

ಅಧಿಕಾರಿ ನಗುತ್ತ,

* * * *

" ಸರಿ, ಡಾಕ್ಟರ್ ! ಬಹಳ ಉಪಕಾರ ! "

" ನನಗೆ ಅದು ಅಗತ್ಯವಿಲ್ಲ. ಬೇರೆ ಅಗತ್ಯವಿದ್ದವರಿಗೆ ಯಾಕೆ ಅದನ್ನು ಬಿಟ್ಟುಕೊಡಬಾರದು ? ''

" ನೀವಂದಂತೇ ಆಗಲಿ. ಆದರೂ .... ನಿಮ್ಮಂತೆ ಎಲ್ಲರೂ ಭಾವಿಸಿದರೆ ಲೋಕ ಒಳ್ಳೆಯದಾದೀತು. ಆದರೆ .... ಹ್ಹ ಹ್ಹ ! ಆ ಅಂದವಾದ ರೇಡಿಯೋವನ್ನು ಬಿಡಲಿಕ್ಕಿಲ್ಲ ತಾನೇ .... ? ''

" ಇಲ್ಲ .... ರೇಡಿಯೋ ಬಿಡುವುದಿಲ್ಲ .... ಸ್ವೆಕ್ ಒಮ್ಮೆಲೇ ಭಯ ಪೀಡಿತರಾಗಿ ಹೇಳುತ್ತಿದ್ದಂತೆ, ಅಧಿಕಾರಿಯು ಅದನ್ನು ಬಗ್ಗಿ ಪರಿಶೀಲಿಸುತ್ತಿದ್ದುದನ್ನು ಕಂಡರು.

" ರೇಡಿಯೋ ಬಹಳ ಚೆನ್ನಾಗಿದೆ. ಡಾಕ್ಟರ್ ! ಅದಕ್ಕೆ ನೀವು ಬಹಳ ಹಣ ಖರ್ಚುಮಾಡಿರಬೇಕು "

" ಇದು ಜರ್ಮನ್ ರೇಡಿಯೋ. ನಾನು .... ಸರಿ ; ಸೈನ್ಯದ ಮೂಲಕ ಯಾವಾಗಲೊಮ್ಮೆ ಹಲವು ವಸ್ತುಗಳು ಸಿಗುವುದುಂಟು, ಅದು ನಿಮಗೆ ಗೊತ್ತಿದೆಯಷ್ಟೆ. ಇದರ ಒಡೆತನವನ್ನು ಕಂಡುಹಿಡಿಯುವುದು ಸುಲಭವಲ್ಲ .... " ಎಂದು ತನಗಾದ ಕಳವಳವನ್ನು ಅಡಗಿಸುತ್ತ ನಸುನಕ್ಕು ಹೇಳಿದರು.

ಅವನು ಗಟ್ಟಿಯಾಗಿ ನಕ್ಕ.

" ಡಾಕ್ಟರ್ ! ಹಾಗಾದರೆ ನೀವು ಸೈನ್ಯದಲ್ಲಿದ್ದಿರೇ ? ಅಲ್ಲಿ ಇಂಥ ಚಿಕ್ಕ ಉಡುಗೊರೆಗಳು ಸಿಗುತ್ತವೆ ಅಲ್ಲವೆ? ಹ್ಹ ! ಹ್ಹ ! " ಡಾಕ್ಟರ್ ಸ್ವೆಕ್‌ರ ಹೃದಯ ಕಂಪಿಸುತ್ತಿದ್ದಂತೆಯೇ ಅವನು ರೇಡಿಯೋ ಸ್ವಿಚ್ಚನ್ನು ಹುಡುಕತೊಡಗಿದ. ಅವನು ಮೂರು ಕಪ್ಪು ಗುಂಡಿಗಳ ಮೇಲೆ ಕೈಯಾಡಿಸುತ್ತಿದ್ದಾಗ, ಡಾಕ್ಟರರ ಕೈ ಮೇಜಿನ ಮೇಲಿದ್ದ ದೊಡ್ಡ ಕಂಚಿನ ಪ್ರತಿಮೆಯೊಂದನ್ನು ಅಪ್ಪಿಹಿಡಿದಿತ್ತು.

ಸ್ವೆಕ್‌ರ ಕುತೂಹಲ ಹೆಚ್ಚಿತು. ತಮ್ಮ ಮತ್ತು ಅಧಿಕಾರಿಯ ಮಧ್ಯದಲ್ಲಿದ್ದ ಅಂತರವನ್ನೊಮ್ಮೆ ಅಳೆದರು. ಅವನು ಸ್ವಿಚ್ ಹಾಕಿದರೆ ಅವನ ಕಿವಿಯ ಕೆಳಗೆ ತಾನು ಎಲ್ಲಿಗೆ ಹೊಡೆಯಬೇಕೆಂಬುದನ್ನು ನಿರೀಕ್ಷಿಸಿದರು.

ಅವರಿಗೆ " ಕರೆಂಟ್ ಇಲ್ಲ ", ಅಥವಾ " ರೇಡಿಯೋ ಹಾಳಾಗಿದೆ " ಎಂದು ಹೇಳಬೇಕೆಂದು ತೋರಿತ್ತು. ಆದರೆ ಅವರು ಅವನು ರೇಡಿಯೋವನ್ನು ಪರಿಶೀಲಿಸುವುದನ್ನು ಮಾತ್ರ ನೆಟ್ಟದೃಷ್ಟಿಯಿಂದ ನೋಡುತ್ತಿದ್ದರು.

ಆ ಮೇಲೆ ... ಅವನು ನಸುನಗುತ್ತ ಹಿಂತಿರುಗಿದ.

" ನನಗೆ ರೇಡಿಯೋದ ಹುಚ್ಚು ಬಹಳ, ಡಾಕ್ಟರ್. ನಿಮಗೆ ಅದು ಒಪ್ಪುವುದೆ ... ? ನಾನು ಒಂದು ಕಾರ್ಯಕ್ರಮವನ್ನು ಕೇಳಲು ಆರಂಭಿಸಿದರೆ ಮತ್ತೆ ಬೆಳಗ್ಗೆ ಇಲ್ಲಿಯೇ ಇರಬಲ್ಲೆ. ಸರಿ ... ನನಗೆ ಈಗ ಹೋಗಬೇಕಾಗಿದೆ, ಡಾಕ್ಟರ್. ನನಗೆ ತುಂಬಾ ಕೆಲಸವಿದೆ. ನೀವೂ ಕೆಲಸವಿರುವವರು. ಆದ್ದರಿಂದ .... "

ಅವನು ಮುಂದೆ ನೀಡಿದ ಕೈಯ್ಯನ್ನು ಕುಲುಕುತ್ತ ಡಾಕ್ಟರರು ತಮ್ಮ ಕಂಚಿನ ಪ್ರತಿಮೆಯ ಹಿಡಿತವನ್ನು ಸಡಿಲುಮಾಡಿದರು.

ಡಾಕ್ಟರರು ಅಧಿಕಾರಿಗೆ ಹೊರಗೆ ಹೋಗಲು ದಾರಿಬಿಟ್ಟರು. ಅವನು ಹೊರ ನಡೆದೊಡನೆ ಅವರು ಒಳಗೆ ಬಂದು ರೇಡಿಯೋದ ಸ್ಟೇಶನ್ ಹುಡುಕುವ ಕೀಲನ್ನು ತಿರುಗಿಸಿದರು.

ಯಾಕೆಂದರೆ ಅದು ರೇಡಿಯೋ ಫ್ರೀ ಯೂರೋಪ್ ಬಾನುಲಿಯ ಪ್ರಸಾರವನ್ನು ಕೇಳಲು ತಿರುಗಿಸಲ್ಪಟ್ಟಿತು. ಅದನ್ನು ನೋಡುತ್ತಿದ್ದರೆ ಅಧಿಕಾರಿಯು "ನ್ಯಾಯ ಬಾಹಿರವಾಗಿ ರೇಡಿಯೋ ಕೇಳುತ್ತಾರೆ" ಎಂಬ ಮಹಾಪರಾಧವನ್ನು ವರದಿಮಾಡುತ್ತಿದ್ದ, ಅದನ್ನು ತಪ್ಪಿಸಲಿಕ್ಕಾಗಿ ಅವನನ್ನು ಕೊಲ್ಲಲೇ ಬೇಕಾಗುತ್ತಿತ್ತು.

"ಕಾರಿನಲ್ಲಿ ಬರುವಿರೆ?" ಎಂದು ಡಾಕ್ಟರ್ ತಮ್ಮ ಆವೇಶವನ್ನು ಜಗ್ಗಿ ಹಿಡಿಯುತ್ತ ಅವನನ್ನು ಕೇಳಿದರು.

"ನೀವು ರೈಲ್ವೇ ನಿಲ್ದಾಣದ ಬಳಿಯಿಂದ ಹೋಗುತ್ತೀರಾ .... ?"

"ರೈಲ್ವೇ ನಿಲ್ದಾಣ? ಸಂತೋಷ!" ಡಾಕ್ಟರರು ತಮ್ಮ ಕೈಯ್ಯ ಬೆವರನ್ನು ಹಿಂದುಗಡೆ ಅಂಗಿಗೆ ಒರಸುತ್ತ ಹೇಳಿದರು. "ನಾನೂ ಅದೇ ದಾರಿಯಿಂದ ಹೋಗುತ್ತೇನೆ."

ಒಂಭತ್ತನೇ ಪ್ಲಾಟ್ ಫಾರ್ಮಿನಲ್ಲಿ ಗಡಿಯಾರವು 9-15 ಘಂಟೆಯನ್ನು ಸೂಚಿಸುತ್ತಲೇ ಪಿಲ್ಸೆನ್‌ನಿಂದಾಗಿ ಹೋಗುವ ಪ್ರೇಗ್-ಎಗರ್ ಎಕ್ಸ್‌ಪ್ರೆಸ್ ಹೊರಡುತ್ತಿದೆಯೆಂದು ಧ್ವನಿವರ್ಧಕದಲ್ಲಿ ಘೋಷಿಸುವುದು ಕೇಳಿಸಿತು. "ಎಲ್ಲಾ ಪ್ರಯಾಣಿಕರೂ ದಯವಿಟ್ಟು ರೈಲು ಹತ್ತಿರಿ!" ಎನ್ನುವ ಹೆಂಗಸಿನ ಕರ್ಕಶಯವಾದ ಧ್ವನಿ ಪ್ರೇಗ್ ಸೆಂಟ್ರಲ್ ನಿಲ್ದಾಣದಲ್ಲಿ ಪ್ರತಿಧ್ವನಿಸಿತು.

ಹೀಗೆಯೇ ನೋಡುವವರಿಗೆ ಹೊಸ ಕಮ್ಯುನಿಸ್ಟ್ ಸರ್ಕಾರವು ಹೆಚ್ಚಿನ ಬದಲಾವಣೆ ಮಾಡಿಲ್ಲವೆಂದು ತೋರುತ್ತಿತ್ತು: ಆದರೆ ಸ್ಟಾಲಿನರ ಹೊಸದೊಂದು ಭಾಷಣ ಇಲ್ಲವೇ ಪ್ರೆಸಿಡೆಂಟ್ ಗೊಟ್ವಾಲ್ಡರಿಂದ ಸಾರಲ್ಪಟ್ಟ ಹೊಸದೊಂದು ಶಾಸನದ ಶಿರೋನಾಮೆಗಳುಳ್ಳ ವಾರ್ತಾ ಪತ್ರಿಕೆಗಳು ಮಾತ್ರ ಅಂಗಡಿಗಳಲ್ಲಿ ಕಾಣುತ್ತಿದ್ದುವು.

ಕಮ್ಯುನಿಸ್ಟರ ಅಧಿಕಾರಾಪಹರಣದ ಬಳಿಕ ರೈಲ್ವೇ ನಿಲ್ದಾಣಕ್ಕೆ ಹೋಗದವನಿಗೆ ಈಗ ಹಿಂದಿಗಿಂತ ಹೆಚ್ಚು ಸಂಖ್ಯೆಯಲ್ಲಿದ್ದ ಪೋಲೀಸರನ್ನೂ, ನಿಲ್ದಾಣದ ಅಧಿಕಾರಿಗಳನ್ನೂ ಕಂಡು ಆಶ್ಚರ್ಯವಾಗಬಹುದಿತ್ತು.

ಆದರೆ ಮೇಲಿಂದಮೇಲೆ ಏನೂ ಬದಲಾವಣೆಯಾಗಿರಲಿಲ್ಲ. ಜನರು ತೋರಿಕೆಗೆ ಎಂದಿನಂತೆಯೇ ರೈಲುಗಳನ್ನು ಹತ್ತುತ್ತಿದ್ದರು. ಅವುಗಳಿಂದ ಕೆಳಗಿಳಿಯುತ್ತಿದ್ದರು. ಸ್ನೇಹಿತರು ಮತ್ತು ಬಂಧುಗಳು, ರೈಲುಗಳು ಬರುವಾಗ ಪ್ಲಾಟ್‌ಫಾರ್ಮುಗಳಲ್ಲಿ ಕಾದು ನಿಲ್ಲುತ್ತಿದ್ದರು. ಹಾಗೆಯೇ ರೈಲುಗಳು ಹೋಗುವಾಗಲೂ ಅವರು ಒಂದು ಶತಮಾನದಿಂದ ಮಾಡುತ್ತಿದ್ದಂತೆಯೇ ಪ್ಲಾಟ್‌ಫಾರ್ಮಿನಲ್ಲಿ ನಿಂತುಕೊಂಡು ಕರವಸ್ತ್ರಗಳನ್ನೋ, ಹ್ಯಾಟುಗಳನ್ನೋ, ಕೈಗಳನ್ನೋ ಬೀಸುತ್ತ ಪ್ರಯಾಣಿಕರನ್ನು ಬೀಳ್ಕೊಡುತ್ತಿದ್ದರು.

ಮೂರನೇ ತರಗತಿಯ ಬಂಡಿಯೊಂದರೊಳಗೆ ಮೆಲ್ಲನೆ ಹತ್ತಿ ಮರದ ಆಸನದ ಮೇಲೆ ಕುಳಿತ ಕಟ್ಟಡದ ಕೆಲಸಗಾರ, ಕಾರ್ಲ್ ಹೊವರ್ತ ಸಾಮಾನ್ಯ ವ್ಯಕ್ತಿಯಾಗಿಯೇ ತೋರುತ್ತಿದ್ದ. ತನ್ನ ಸಂಗೀತದಲ್ಲೆಲ್ಲೋ ಪೆಟ್ಟಿಗೆಯನ್ನು ಜಾಗ್ರತೆಯಾಗಿ ಅವನು ಸಾಮಾನುಗಳನ್ನಿಡುವಲ್ಲಿ ಇಟ್ಟಿದ್ದ.

ಅವನು ಧಾಂಡಿಗ ಮನುಷ್ಯ. ಮೆಲ್ಲನೆ ಸರಿಯುತ್ತಿದ್ದ ನಿಲ್ದಾಣದ ಗಡಿಯಾರದ ಮುಳ್ಳನ್ನು ನೋಡುವಾಗ ಅವನ ಮನಸ್ಸಿನಲ್ಲಾಗುತ್ತಿದ್ದ ವೇದನೆ ಹೊರಗೆ ಒಂದಿಷ್ಟೂ ತೋರುತ್ತಿರಲಿಲ್ಲ.

ಎಲ್ಲವನ್ನೂ ನೋಡುತ್ತಿದ್ದ ಸಾದಾ ಉಡುಪುಗಳನ್ನು ಧರಿಸಿದ್ದ ಪೋಲೀಸರು ಇತರ ಜನರ ನಡುವೆ ನಿಂತುಕೊಂಡಿದ್ದಾರೆಂಬುದು ಅವನಿಗೆ ಜೆಕೊಸ್ಲೋವಾಕಿಯಾದಲ್ಲಿ ಪ್ರತಿಯೊಬ್ಬರಿಗೂ ತಿಳಿದಿರುವಂತೆ–ತಿಳಿದಿದ್ದಿತು.

ಅವನು ಗಡಿಯಾರವನ್ನು ನೋಡುತ್ತಿದ್ದುದು ಆ ಪೋಲೀಸರ ಗಮನಕ್ಕೆ ಎಲ್ಲಾದರೂ ಬರಬಹುದೆಂದು ಕಾರ್ಲ್ ಹೆದರಿ ತನ್ನ ಕಿಸೆಯಿಂದೊಂದು ಪತ್ರವನ್ನು ತೆಗೆದು ಅದನ್ನು ಓದತೊಡಗಿದ. ಅದು ಎರಡು ದಿನಗಳ ಹಿಂದೆ—ಅನಿರೀಕ್ಷಿತವಾಗಿಯಲ್ಲ ಅವನಿಗೆ ಬಂದಿತ್ತು. ಕಾರ್ಲ್ ಅದರ ಪ್ರತಿಯೊಂದು ದ್ವಯಾರ್ಥವುಳ್ಳ ಪದಸಮೂಹವೂ ತನಗೆ ಕಂಠಪಾಠವಾಗುವತನಕ ಓದಿದ.

"…. ನಾನು ನಿನ್ನನ್ನು ಕಾಣುವಂತೆ ಕೊನೆಯ ಬಂಡಿಯಲ್ಲಿ ಸಾಧ್ಯವಾದರೆ ಕುಳಿತುಕೋ" ಎಂದು ಅದರಲ್ಲಿತ್ತು. "ನಿನ್ನ ಸೆಲ್ಲೋ ಪೆಟ್ಟಿಗೆಯನ್ನು ತರಲು ಮರೆಯಬೇಡ. ನಾವು ಇಬ್ಬರೂ ಅದನ್ನೇ ಬಾರಿಸಿದರೆ ತುಂಬಾ ತಮಾಷೆಯಾದೀತು …."

ಒಂದು ವ್ಯಕ್ತಿ, "ಅವಳು ಬರೆದಳೆ ….?" ಎಂದು ಕೇಳಿತು.

ಕಾರ್ಲ್ ಕಳವಳದಿಂದ ಮೇಲೆ ನೋಡಿದ. ಅವನನ್ನು ಪ್ರಶ್ನಿಸಿದ ವ್ಯಕ್ತಿ ಒಂದು ಮುದುಕಿಯಾಗಿತ್ತು. ಸಾದಾ ಉಡುಪುಗಳನ್ನು ಧರಿಸಿ ಕೊಂಡು ಅವನಿದಿರು ಕುಳಿತುಕೊಂಡಿದ್ದ ಅವಳನ್ನು ನೋಡಿ ಅವನಿಗೆ ಸ್ವಲ್ಪ ಸಮಾಧಾನವಾಯಿತು.

ಗುಪ್ತ ಪೋಲೀಸು ದಳದವಳೆ .... ? ಅವರು ಯಾವ ಯಾವ ತಂತ್ರ ವನ್ನು ಮಾಡಿಯಾರೆಂಬುದನ್ನು ಹೇಳಲು ಸಾಧ್ಯವಿಲ್ಲ !

ಆದರೆ ಆ ಮುದುಕಿ ನಸುನಗುತ್ತಿದ್ದಳು. ಅವನು ದಿಗಿಲುಬಿದ್ದುದನ್ನು ಅವಳು, ತರುಣ ಪ್ರಣಯಿಯ ಸಂಕೋಚಪ್ರವೃತ್ತಿ ಎಂದು ಅರ್ಥಮಾಡಿದಳು.

"ಹೌದು ...." ಎಂದು ಪತ್ರವನ್ನು ಮಡಚುತ್ತ ಕಾರ್ಲ್ ನುಡಿದ.

"ಓಹೊ ನನ್ನ ವಿಷಯದಲ್ಲಿ ಚಿಂತಿಸಬೇಡ! ನಿನಗೆ ನನ್ನ ಆಶೀರ್ವಾದ .... ನನಗೆ ನಿನಗಿಂತ ಹಿರಿಯರಾದ ಮಕ್ಕಳೂ ಮೊಮ್ಮಕ್ಕಳೂ ಇದ್ದಾರೆ! ನೀನು ನಿನ್ನ ಪ್ರೇಯಸಿಯ ಪತ್ರವನ್ನೋದಿದೆ. ಮಗನೇ ನಿನ್ನ ಅದೃಷ್ಟ ಒಳ್ಳೆಯದಾಗಲಿ! ನಾವು ಜೀವಮಾನದಲ್ಲಿ ಒಮ್ಮೆ ಮಾತ್ರ ಕಿರಿಯರಾಗ ಬಹುದು. ಅದು ದೊಡ್ಡ ಕಷ್ಟದ ಸಂಗತಿ !" ಎಂದಳು.

ಉಳಿದ ಪ್ರಯಾಣಿಕರು ತಮಾಷೆಯಿಂದ ತನ್ನನ್ನು ನೋಡುತ್ತಿದ್ದುದು ಕಾರ್ಲ್‌ಗೆ ಅರಿವಾಗದಿರಲಿಲ್ಲ. ಆ ಪತ್ರದ ಆಜ್ಞೆ—ಅದು ಆಜ್ಞೆಯೇ ಆಗಿತ್ತು—ಅಷ್ಟು ಸ್ಪಷ್ಟವಿರದಿರುತ್ತಿದ್ದರೆ ಅವನು ತಾನಾಗಿಯೇ ಆಗ ಗಾಡಿಯನ್ನು ಈ ನೆವನಕ್ಕಾಗಿ ಬದಲಾಯಿಸಿಬಿಡುತ್ತಿದ್ದ.

"ಹ್ಞೊ ... ನಾನು .... ಆಗಲೇ ಓದಿಯಾಗಿಧೆ", ಎಂದು ಕಾರ್ಲ್ ತಡೆತಡೆದು ಹೇಳುವಾಗ ಅವನ ಬದಿಯಲ್ಲಿದ್ದ ಮುದುಕನೊಬ್ಬ ಗೊಳ್ಳನೆ ನೆಗಾಡಿದ.

"ನೀನು ಖಂಡಿತ ಓದಿಯಾಗಿದೆ, ಮಗನೆ! ಆದರೂ ನೀನು ಅದನ್ನು ಮರಳಿ ಓದುವೆ .... "

ಧ್ವನಿವರ್ಧಕವು ಕೊನೆಯ ಎಚ್ಚರಿಕೆಯನ್ನಿತ್ತಿತ್ತು. ಬಾಗಿಲುಗಳನ್ನು ಮುಚ್ಚುವ ಮತ್ತು ಬೀಳ್ಕೊಡುವ ಚೀತ್ಕಾರಗಳು ಆಗ ಕೇಳಿದುವು. ಗಾರ್ಡ್ ಸಿಳ್ಳುಹಾಕಿದ. ರೈಲು ಆವಿಯನ್ನು ಕಾರುತ್ತ ಮೆಲ್ಲನೆ ನಿಲ್ದಾಣದಿಂದ ಹೊರಟಿತು.

ಕಾರ್ಲ್ ಕ್ಷಣಕಾಲ ತನ್ನ ಕಣ್ಣುಗಳನ್ನು ಮುಚ್ಚಿದ. ಅವನಿಗೆ ತನ್ನ ದೇಹವಿಡೀ ಮುಗ್ಗರಿಸಿ ಬೀಳುವಂತೆ ಭಾಸವಾಯಿತು. ರೈಲು ಬಂಡಿ ಹೊರಡುವವರೆಗೆ ಅವನು ಅನುಭವಿಸಿದ್ದ ಕುತೂಹಲ ಅಸಹನೀಯವಾಗಿ, ಅವನನ್ನು ಕ್ಷಣಕಾಲ ನಿಶ್ಚೇತನನನ್ನಾಗಿ ಮಾಡಿತ್ತು.

ಅನನು ಸೆಲ್ಲೋ ಪೆಟ್ಟಿಗೆಯನ್ನು ಕಣ್ತೆರೆದು ಪುನಃ ನೋಡುತ್ತಿದ್ದಾಗ ಮುದುಕಿ,

" ನಿನಗೆ ಸಂಗೀತವೂ ತಿಳಿದಿದೆಯೆ, ಮಗೂ ... ? " ಎಂದಳು.

ಕಾರ್ಲ್ ತಾನು ಇಷ್ಟು ಜಿಜ್ಞಾಸೆಯುಳ್ಳ ಸಹ ಪ್ರಯಾಣಿಕರಿರುವ ಬಂಡಿಗೆ ಹತ್ತಿದ ತನ್ನ ದುರ್ದೈವಕ್ಕಾಗಿ ಹಳಿದುಕೊಂಡ.

" ಹೌದು, ನಾನು ಒಂದು ಸಂಗೀತ ಕೂಟದವ .... "

ಅವನ ಮೈ ಬೆವರಿತ್ತು. ತಾನು ಮಾತಾಡಿದುದು ಹೆಚ್ಚಾಯಿತೇ ಎಂದು ಅವನಿಗೆ ತೋರುತ್ತಿತ್ತು. ಇನ್ನು ಆ ಮುದುಕಿ " ಒಂದು ರಾಗವನ್ನು ಕೇಳುವ " ಎಂದು ವಾಡಿಕೆಯಂತೆ ಕೇಳಿದರೆ ತಾನೇನು ಮಾಡಬೇಕು ಎಂದು ಅವನು ಕಳವಳಗೊಂಡನು.

ರೈಲು ಬಂಡಿ ಒಂದೆಡೆ ತಿರುಗುವಲ್ಲಿ ತನ್ನ ಸೆಲ್ಲೋ ಪೆಟ್ಟಿಗೆ ಸ್ವಲ್ಪ ಕೆಳಗೆ ಜಾರಿದುದನ್ನು ಕಾರ್ಲ್ ಕಂಡ. ಅವನು ಎದ್ದು ನಿಲ್ಲುವಾಗ ಅವನ ನಾಲಿಗೆ ಒಣಗಿತ್ತು. ಅವನು ಪೆಟ್ಟಿಗೆಯನ್ನು ಹಿಂದೆ ದೂಡಿದ. ರೈಲು ಬಂಡಿ ವೇಗವಾಗಿ ಪ್ರೇಗಿನ ಹೊರಭಾಗಗಳನ್ನು ದಾಟಿ ಹೋಯಿತು.

ಕಾರ್ಲ್ ಒಂದು ಕೈಯಲ್ಲಿ ಹಲಗೆಯನ್ನು ಹಿಡಿದುಕೊಂಡು ಮತ್ತೊಂದು ಕೈಯಲ್ಲಿ ಪೆಟ್ಟಿಗೆಯನ್ನು ಹಿಂದೆ ತಳ್ಳುತ್ತಿದ್ದ. ಅದೆಲ್ಲಾದರೂ ಕೆಳಗೆ ಬಿದ್ದರೆ ತಾನು ಮೂರ್ಛೆಹೋಗಬಹುದೆಂದು ಅವನಿಗೆನಿಸುತ್ತಿತ್ತು. ಅವನಿಗೆ ಮರಳಿ ತನ್ನ ಆಸನದಲ್ಲಿ ಕುಳಿತುಕೊಳ್ಳುವ ಮನಸ್ಸಿರಲಿಲ್ಲ. ಆಸ್ಟ್ರಿವರೆಗೂ ತಾನು ಪೆಟ್ಟಿಗೆಯನ್ನು ಹಿಡಿದುಕೊಂಡೇ ನಿಲ್ಲುವೆನೆಂದು ಅವನು ಒಮ್ಮೆ ಭಾವಿಸಿದ. ಮತ್ತೆ ಹೇಗೋ ಪ್ರಯತ್ನಿಸಿ ಆ ಪೆಟ್ಟಿಗೆಯನ್ನು ಬಹಳ ಹಿಂದಕ್ಕೆ ದೂಡಿ ತನ್ನ ಆಸನದ ಮೇಲೆ ಬಿದ್ದುಬಿಟ್ಟ.

" ನಿನಗೆ ರೈಲು ಪ್ರಯಾಣ ಹಿಡಿಸುವುದಿಲ್ಲವೆಂದು ತೋರುತ್ತದೆ " ಎಂದು ಮುದುಕಿ ಸಹಾನುಭೂತಿ ಪೂರ್ವಕವಾಗಿ ಕೇಳಿದಳು. " ನನ್ನ ಹಿರೇ

ಮಗನಿಗೂ ಹೀಗೆಯೇ ಆಗುತ್ತದೆ. ಹಡಗಿನಲ್ಲಿ ಡಾನ್ಯೂಬ್ ನದಿಯುದ್ದಕ್ಕೂ ಪ್ರಯಾಣಮಾಡಿದರೂ ಕೂಡಾ ಅವನಿಗೆ ಏನೂ ಆಗದು. ಇತರರಿಗೆ ಸಮುದ್ರದ ಜಾಡ್ಯ ಹಿಡಿದರೂ ಅವನು ಆರೋಗ್ಯವಾಗಿರುತ್ತಾನೆ. ಆದರೆ ಕೇವಲ ಎರಡು ನಿಲ್ದಾಣಗಳ ಪ್ರಯಾಣಕ್ಕೆ ರೈಲು ಹತ್ತಿದರೂ ಅವನಿಗೆ ಕೂಡಲೇ ಜಾಡ್ಯ ಹಿಡಿಯುತ್ತದೆ. ಇಲ್ಲಿ, "ಅವಳು ತನ್ನ ಹಾಸಿಗೆಯ ಕಟ್ಟಿನಿಂದ ಲವಣದ ಬಾಟ್ಲಿಯೊಂದನ್ನು ತೆಗೆದು ಅವನಿಗಿತ್ತು" ಸ್ವಲ್ಪ ಇದರ ವಾಸನೆ ಹೀರಿನೋಡು" ಎಂದಳು.

ಕಾರ್ಲ್ ಅವಳಿಗೆ ಮೆಲ್ಲನೆ ಧನ್ಯವಾದವನ್ನೀಯುತ್ತ ಅದನ್ನು ತೆಗೆದು ಕೊಂಡ. ಉಪ್ಪನ್ನು ಮೂಸಿದೊಡನೆ ಅವನ ಮನಸ್ಸು ತಿಳಿಯಾಯಿತು. ಆ ಸೆಲ್ಲೋ ಪೆಟ್ಟಿಗೆಯಲ್ಲಿ ಹೆಚ್ಚು ನಾಜೂಕಿಲ್ಲದ ಕೆಳಗೆ ಬಿದ್ದರೂ ಸಿಡಿಯ ಬಹುದಾದ ಜರ್ಮನ್ ಎಂ. ಪಿ. 38 ಪಿಸ್ತೂಲು ಇತ್ತು. ಅದನ್ನೆಲ್ಲಾದರೂ ತಾಯಿಯಂತೆ ಸಂರಕ್ಷಿಸಲು ಸಿದ್ಧಳಿರುವ ಈ ಹೆಂಗಸು ಕಂಡರೆ ಏನು ಮಾಡಿ ಯಾಳೆಂದು ಚೋದ್ಯಪಟ್ಟ, ಕಾರ್ಲ್.

ಅವನು ಲವಣದ ಬಾಟ್ಲಿಯನ್ನು ಹಿಂದೆ ಕೊಡುತ್ತ,

"ಈಗ ಸ್ವಲ್ಪ ಗುಣವಾಯಿತು, ನಿಮಗೆ ಧನ್ಯವಾದ!" ಎಂದ.

ಮುದುಕಿ ನಕ್ಕಳು.

"ಹೌದು! ನಿನಗೆ ಗುಣವಾದೀತೆಂದು ನನಗೆ ಗೊತ್ತಿತ್ತು! ಇಲ್ಲ...." ಅವಳು ಪುನಃ ತನ್ನ ಕಟ್ಟಿನೊಳಗೆ ಕೈಹಾಕಿ ಒಂದು ಮದ್ಯದ ಬಾಟ್ಲಿಯನ್ನು ಅವನಿಗಿತ್ತಳು. "ಮಗು! ಇದನ್ನು ಸ್ವಲ್ಪ ಕುಡಿ, ನೀನು ಸಂಪೂರ್ಣ ಹುಷಾರಾಗುತ್ತೀ, ನೋಡು ......"

ಕಾರ್ಲ್ ಅದನ್ನು ತೆಗೆದುಕೊಂಡ. ಆದರೆ ಅವನಿಗೆ ಹುಷಾರಾಗಲು ಮದ್ಯ ಬೇಕಾಗಿರಲಿಲ್ಲ. ಟ್ರ್ರಿಕ್ಸಾ ಆ ಕ್ಷಣದಲ್ಲಿ ಏನುಮಾಡುತ್ತಿದ್ದಾನೆಂದು ಅವನಿಗೆ ತಿಳಿಯುತ್ತಿದ್ದರೆ, ಒಂದು ಬಾಟ್ಲಿ ಮದ್ಯವನ್ನು ಕುಡಿದುದಕ್ಕಿಂತಲೂ ಹೆಚ್ಚು ಉದ್ರೇಕ ಕಾರ್ಲ್‌ನಿಗೆ ಆಗಬಹುದಿತ್ತು.

ಟ್ರ್ರಿಕ್ಸಾ ಅಂದು ಮುಂಜಾನೆ ಆಸ್ಚ್‌ಗೆ ಹೋಗಿದ್ದ. ರೈಲು ಬಂಡಿ 185 ಪ್ರೇಗಿನಿಂದ ವೈಭವದಿಂದ ಹೊರಡುವಾಗ ಅವನು ಆ ಗಡಿಪ್ರದೇಶದ ನಿಲ್ದಾಣದಲ್ಲಿದ್ದ.

ಅವನನ್ನು ಆಸ್ಟ್‌ಗೆ ಯಾಕೆ ಬಂದನೆಂದು ಯಾರೂ ಪ್ರಶ್ನಿಸಲಿಲ್ಲ. ಅವನಿಗೆ ಸಮನ್ಸ್ ಬಂದಿದೆಯೆಂಬ ಸುದ್ದಿಯು (ಮುಸಿಲ್‌ನ ಮೂಲಕವಾಗಿಯೇ ಆಗಿರಬೇಕು) ಹರಡಿದೊಡನೆ ಅವನನ್ನು ಕಂಡವರು, ಅವನು ಆಸ್ಟ್‌ನಲ್ಲಿದ್ದ ತನ್ನ ಯಾರೋ ಹಳೆಯಗೆಳೆಯರನ್ನೋ ಸಹೋದ್ಯೋಗಿಗಳನ್ನೋ ಕೊನೆಯ ಬಾರಿ ಕಾಣಲು ಹೊರಟಿದ್ದನೆಂದು ಭಾವಿಸಿದ್ದರು. ಇನ್ನು ಅವನು ರೈಲ್ವೆ ಕೆಲಸಕ್ಕೆ ಮರಳದಿರಲೂಬಹುದು ಎಂದು ಅವರಿಗೆ ತೋರಿತ್ತು.

ಟ್ರ್ರಿಕ್ಸಾ ಆಸ್ಟ್‌ನಲ್ಲಿ ಹೆಚ್ಚು ಹೊತ್ತು ನಿಲ್ಲಲಿಲ್ಲ. ರೈಲು ಮಾರ್ಗದಲ್ಲಿ ಒಂದು ಎಂಜಿನ್ನೂ ಇರಲಿಲ್ಲ. ಅಂದರೆ ಸರಕಿನ ಬಂಡಿಗಳಿಂದ ಪಶ್ಚಿಮಕ್ಕೆ ಹೋಗುವ ದಾರಿಯನ್ನು ಅಡ್ಡಗಟ್ಟಲು ಸಾಧ್ಯವಿಲ್ಲವೆಂದು ಅವನಿಗೆ ನೋಡಿ ದೊಡನೆ ಅರಿವಾಯಿತು. ಮುಖ್ಯ ಮಾರ್ಗ ಮಾತ್ರವಲ್ಲ, ಕವಲು ಮಾರ್ಗ ಗಳಲ್ಲಿ ಕೂಡಾ ಯಾವುದೂ ತಡೆಯಿಲ್ಲದುದನ್ನು ಕಂಡು ಅವನಿಗೆ ಸಂತೋಷವೂ, ಆಶ್ಚರ್ಯವೂ ಆಯಿತು.

ಸಾಧ್ಯವಿದ್ದಷ್ಟು ಮಟ್ಟಿಗೆ ಯಾವುದನ್ನೂ ಅದೃಷ್ಟದ ಪಾಲಿಗೆ ಬಿಡಬಾರದು; ಟ್ರ್ರಿಕ್ಸಾ ತಾನು ಬೆಳಗ್ಗೆ ಆಸ್ಟ್‌ನಲ್ಲಿ ಏನನ್ನು ಕಂಡರೂ, ಮರಳಿ ಮಧ್ಯಾಹ್ನ ಅಲ್ಲಿಗೆ ಹೋಗಿ ಕೊನೆಯಬಾರಿ ಎಲ್ಲವನ್ನು ನೋಡಿ ಬರುವೆ ನೆಂದು ತನ್ನ ಒಡನಾಡಿಗಳಿಗೆ ಹೇಳಿದ್ದ, ಅಲ್ಲಿ ಏನೂ ಆತಂಕಗಳಿರಕೂಡದು.

ರೈಲುಬಂಡಿ 185 ಆಸ್ಟ್‌ನಲ್ಲಿ ನಿಲ್ಲಕೂಡದು.

* * *

ರೈಲು ಬಂಡಿಗಳು ಓಡುವಾಗ ಚಕ್ರಗಳು ಮಾಡುತ್ತಿದ್ದ ಕರ್ಕಶ ಧ್ವನಿಗಿಂತಲೂ ಗಟ್ಟಿಯಾಗಿ ಕೂಗುತ್ತ "ನಿನಗೆ ನಾನು ಏನೆಂದು ಹೇಳುತ್ತೇನೆ. ನೀನು ಸ್ವಲ್ಪ ನಿದ್ರಿಸು, ನೀನಿಳಿಯಬೇಕಾದ ನಿಲ್ದಾಣದಲ್ಲಿ ನಾನು ಎಚ್ಚರಿಸು ತ್ತೇನೆ. ನೀನು ಎಲ್ಲಿಗೆ ಹೋಗುತ್ತೀ ಮಗನೆ?"

"ಓಹೊ.... ಇನ್ನೂ ದೂರವಿದೆ," ಕಾರ್ಲ್ ಅಸ್ಪಷ್ಟವಾಗಿ, "ಆದರೆ ನಿಮ್ಮ ಸಲಹೆಯನ್ನು ನಾನು ಅನುಸರಿಸುತ್ತೇನೆ, ತಾಯಿ." ಎಂದ.

ಅವನಿಗೆ ನಿದ್ರಿಸಲು ಇಚ್ಛೆಯಿರಲಿಲ್ಲ. ಆದರೆ ತಾನೊಮ್ಮೆ ಕಣ್ಣು ಗಳನ್ನು ಮುಚ್ಚಿಕೊಂಡರೆ ಮತ್ತೆ ಮುದುಕಿ ಮೌನವಾಗಬಹುದೆಂದು ಯೋಚಿಸಿದ.

ಅವನು ಕಣ್ಣುಗಳನ್ನು ಮುಚ್ಚಿದ.... ಹಲವು ನಿಮಿಷಗಳಲ್ಲಿ ಮುದು ಕಿಯು ಅವನು ಶಾಂತವಾಗಿ ಮಲಗಿದ್ದುದನ್ನು ಕಂಡು ನಸುನಕ್ಕಳು.

"ನನ್ನ ಮಗ ಪಾವುಲ್ ಹಾಗೆಯೇ" ಅವಳು ಮೆಲು ಧ್ವನಿಯಿಂದ "ಯಾವಾಗಲೂ ಅವನು ರೈಲು ಗಾಡಿಯಲ್ಲಿ ನಿದ್ರಿಸುವನು" ಎಂದಳು.

* * *

ಎಗರ್‌ನಿಂದ ಇಪ್ಪತ್ತು ಕಿಲೋಮಿಟರ್ ದಕ್ಷಿಣಕ್ಕಿದ್ದ ಫ್ರಾಂಜೆನ್ಸ್‌ಬಾಡ್‌ನ ಟ್ರುಕ್ಸಾನ ಮನೆಯೊಳಗೆ ವಿಲಕ್ಷಣವಾದ ವಿದ್ಯಮಾನಗಳು ನಡೆಯುತ್ತಿದ್ದುವು. ಸ್ಕಾಲ್ಸ್ಕಿ ಮತ್ತು ಲೊಸ್ಕೊಟ್, ಎಲ್ಲವನ್ನೂ ಕ್ರಮ ಪ್ರಕಾರ ನಾಶ ಮಾಡುತ್ತಿದ್ದರು. ಶ್ರೀಮತಿ ಟ್ರುಕ್ಸಾಳ ಅಮೂಲ್ಯ ಸಂಗ್ರಹಗಳನ್ನು ಪಿಂಗಾಣಿ, ಗಾಜು, ಕನ್ನಡಿ ಮತ್ತು ಬಣ್ಣದ ಚಿತ್ರಗಳು ಎಲ್ಲವನ್ನೂ ಒಡೆದು ಚೂರು ಚೂರು ಮಾಡುತ್ತಿದ್ದರು. ಅವರ ಆಗಿನ ಕೆಲಸವನ್ನು ಯಾರಾದರೂ ನೋಡುತ್ತಿದ್ದರೆ ಅವರಿಬ್ಬರಿಗೂ ಏನೋ ಭಾವೋದ್ರೇಕವಾಗಿ ಹುಚ್ಚುಹಿಡಿದು ಹಾಗೆ ವರ್ತಿಸುತ್ತಿದ್ದರೆಂದು ತಿಳಿದುಕೊಳ್ಳಬಹುದಿತ್ತು.

ಸ್ಕಾಲ್ಸ್ಕಿಯು ಚಂದವಾದ ಮೇಜಿನ ಮೇಲೆ ಹಾಸುವ ವಸ್ತ್ರವನ್ನು ಹರಿಯುತ್ತ "ಲೊಸ್ಕೊಟ್, ನಾವು ಈ ದಿನ ಈ ದೇಶದ ಹೊರಗೆ ಪಲಾಯನ ಮಾಡದಿದ್ದರೆ ಮತ್ತೆ ನಾನು ಇಲ್ಲಿಗೆ ಹಿಂದಿರುಗಲಾರೆ.... ಶ್ರೀಮತಿ ಟ್ರುಕ್ಸಾಳನ್ನು ಎದುರಿಸಲಿಕ್ಕೆ..."

ಲೊಸ್ಕೊಟ್ ಜಮುಖಾನದ ಮೇಲೆ— ಅದನ್ನು ಚೂರಿಯಿಂದ ಚೂರು ಚೂರು ಮಾಡಲಾಗಿತ್ತು— ಹರಡಿದ್ದ ಗಾಜು ಮತ್ತು ಪಿಂಗಾಣಿಯ ಚೂರುಗಳನ್ನು ನೋಡಿ, ಎಲ್ಲಾದರೂ ಪಲಾಯನದ ದಿನವು ಮುಂದರಿಸಲ್ಪಟ್ಟರೆ ಮತ್ತೇನು ಮಾಡಬಹುದೆಂದು ಯೋಚಿಸಿ ನಡುಗಿದ.

ಸ್ಕಾಲ್ಸ್ಕಿಗೆ ಅವನ ಯೋಚನೆ ತಿಳಿಯಿತು. ಅವನು ನಗುತ್ತ,

"ಜಾರ್ಡ್, ಇಲ್ಲ! ನಾವು ಈಗ ಇದನ್ನು ನಿಲ್ಲಿಸಿದರೂ ಕೂಡಾ ಇಷ್ಟರ ತನಕ ನಡೆದುದೇ ಸಾಕಷ್ಟು ಭೀಕರವಾಗಿದೆ! ಶ್ರೀಮತಿ ಟ್ರುಕ್ಸಾಳಾಗಲೀ ನಾವಾಗಲೀ ಈ ಮನೆಯನ್ನು ಎಂದೂ ಪುನಃ ನೋಡದಂತೆ ದೇವರು ಮಾಡಿಯಾರೆಂದು ನಾವು ಈಗ ನಂಬಬಹುದು, ಅಷ್ಟೇ...."

ಅವನು ದೊಡ್ಡ ಬೆಳ್ಳಿಯ ಹಣ್ಣಿನ ಪಾತ್ರೆಯೊಂದನ್ನು ತೆಗೆದು ಅದನ್ನು ಕೈಯ್ಯಲ್ಲಿ ಜಜ್ಜಿ ಕೊನೆಗೆ ಒಲೆಯ ಕಲ್ಲಿನ ಅಡಿಯಲ್ಲಿಟ್ಟು ಅದರ ಮೇಲೆ ಹಾರಿದ. ಪರದೆಗಳಿಗೆ ಮಾತ್ರ ಹೆಚ್ಚಿನ ಹಾನಿಯಾಗಿರಲಿಲ್ಲ. ಸ್ಕಾಲ್ಸ್ಕಿ ಅವುಗಳನ್ನೂ ಒಟ್ಟು ಮಾಡಿ, ಶಾಯಿ ಮುಂತಾದ ದ್ರಾವಕಗಳನ್ನೆಲ್ಲ ಆ ರಾಶಿಯ ಮೇಲೆ ಸುರಿದ.

"ಸರಿ," ಸ್ಕಾಲ್ಸ್ಕಿ ಭಾವೋನ್ಮತ್ತತೆಯಿಂದ ನಕ್ಕ—ಅವನಿಗೆ ಕಮ್ಯುನಿಸಂ ಎಷ್ಟರ ಮಟ್ಟಿಗೆ ಹಾನಿಕಾರಕವೆಂಬುದು ಈಗ ತನ್ನ ಸ್ನೇಹಿತನ ಮನೆಯನ್ನು ಲೂಟಿ ಮಾಡಿ ನಾಶ ಮಾಡುವಾಗ ಹೊಳೆಯುತ್ತಿತ್ತು. ಇದನ್ನು ಸ್ನೇಹಪೂರ್ವಕವಾಗಿ ನಡೆದಿದ್ದರೂ, ಇದರಲ್ಲಿದ್ದ ವಿನಾಶದ ಸಂಕೇತ ಸ್ಪಷ್ಟವಾಗಿ ಕಾಣುತ್ತಿತ್ತು. "ಗುಪ್ತಾಚಾರರಿಗೂ ಪೋಲೀಸರಿಗೂ ಈ ಮನೆಯಲ್ಲಿ ಇನ್ನು ಸೂರೆಗೈಯ್ಯಲು ಏನಾದರೂ ದೊರೆತರೆ, ಅದನ್ನು ಕೊಂಡು ಹೋಗಲು ಅವರು ಯೋಗ್ಯರು!"

ಲೊಸ್ಕೊಟ್, "ನಾನು.... ಅವಳೆಂದೂ ಇದನ್ನು ನೋಡಲಿಕ್ಕಿಲ್ಲವೆಂದು ಆಶಿಸುತ್ತೇನೆ, ರೆನೆ ..." ಎಂದ.

ಸ್ಕಾಲ್ಸ್ಕಿ ದೀರ್ಘ ಶ್ವಾಸವನ್ನು ಬಿಡುತ್ತ ತಲೆಯಲ್ಲಾಡಿಸಿದ.

"ನನಗೆ ತೋರುತ್ತದೆ, ನಾವು ಇನ್ನು ಹೋಗುವ ಯೋಚನೆ ಮಾಡಬೇಕು ಜಾರ್ಡಾ .." ಎಂದ.

"ಹೌದು" ಆ ಮೇಲೆ ಅವನು ದೃಢವಾದ ಧ್ವನಿಯಿಂದ ಸ್ಕಾಲ್ಸ್ಕಿ ತೆರಳುವಂತೆ "ರೆನೆ: ನೀನು ಯಾವಾಗಲಾದರೂ ನಿನ್ನ ವಿಷಯದಲ್ಲಿ ಸತ್ಯನಿಷ್ಠನಾಗಿದ್ದೀಯಾ.... ನಿನ್ನ ವಿಷಯದಲ್ಲಿ....?" ಎಂದ ಲೊಸ್ಕೊಟ್.

"ಕೆಲವು ಬಾರಿ...."

"ಅದು ಕಷ್ಟ, ಅಲ್ಲವೆ ?"

"ನಾವು ಅದರಿಂದ ತಪ್ಪಿಸಿಕೊಳ್ಳಲು ನೋಡುತ್ತೇವೆ ಎಂದು ನೀನು ಯೋಚಿಸುವೆಯಾದರೆ, ಅದು ನಿಜ, ಆದರೆ ಅದು ಮನುಷ್ಯರ ಸ್ವಭಾವ ಜಾರ್ಡಾ." ಎಂದು ಸ್ಕಾಲ್ಸಿ ನಸುನಗುತ್ತ ಹೇಳಿದನು.

"ನನಗೆ ಈಗ ತೋರುತ್ತದೆ," ಎನ್ನುತ್ತ ಲೊಸ್ಕೊಟ್, ತನ್ನ ಸ್ನೇಹಿತನ ಮಾತಿಗೂ ಕಿವಿಗೊಡದೆ, "ಈ ಉದ್ದೇಶಪರವಾದ ವಿನಾಶವನ್ನು ನಾನು ದ್ವೇಷಿಸುತ್ತಿದ್ದೇನೆ. ಆದರೂ ನಾನು ಇಲ್ಲಿ ಎಲ್ಲವನ್ನೂ ಏಕೆ ಹಾಳುಮಾಡುತ್ತಾ ಹೋದೆನೆಂದರೆ— ಇನ್ನೂ ನನಗೆ ಸ್ವಲ್ಪ ಅದನ್ನು ಮಾಡಲಿಕ್ಕಿರಬಹುದೆಂದು ಆಶಿಸುತ್ತ— ನನಗೆ ನಾವು ಹೊರಡುವ ಘಳಿಗೆಯನ್ನು ಯೋಚಿಸಿ ಆಗುವ ಭಯವನ್ನು ತಡೆಯಲಿಕ್ಕಾಗಿ. ರೆನೆ ನೀನು ನನ್ನನ್ನು ದ್ವೇಷಿಸುವೆಯಾ?"

ಸ್ಕಾಲ್ಸ್ಕಿ ಮುಂದೆ ಹೋಗಿ ಲೊಸ್ಕೊಟ್‌ನ ಹೆಗಲಿಗೆ ಕೈಹಾಕಿದ.

" ಸತ್ಯದಿಂದ ಏನೂ ನಷ್ಟವಾಗಲಾರದು, ಜಾರ್ಡ್ಜ್ ಅದರಲ್ಲೂ ಸಂಭಾವಿತರ ಮರ್ಯಾದೆ ಎಂದೂ ಹೋಗದು. ಬಾ.... ನೀನು ಊಟ ಮಾಡಿದೆಯಾ....? " ಎಂದ. ಅವನು ಸಮಾಧಾನದಿಂದ ಹೇಳಿದನು.

" ಹೌದು, ರೆನೆ. ನಿನಗೆ ಆಹಾರ ಇದೆಯೆ...."

ಸ್ಕಾಲ್ಸ್ಕಿ ಹುಬ್ಬು ಹಾರಿಸುತ್ತ ತನ್ನ ಅಂಗಿಯನ್ನು ತೆರೆದು ಅದರೊಳಗೆ ಇದ್ದ ತಿಂಡಿಯ ಕಟ್ಟನ್ನು ತೋರಿಸಿದನು.

ಲೊಸ್ಕೊಟ್ ಎಷ್ಟೋ ತಿಂಗಳಲ್ಲಿ ಮೊದಲ ಬಾರಿ ನಕ್ಕನು.

" ನಿನಗೆ ಅದರಿಂದ ಯಾರಾದರೂ ತಲೆಯನ್ನು ಕೂಡಾ ಒಡೆಯಲು ಸಾಧ್ಯವಿದೆ, ರೆನೆ ! "

" ಬಹುಶಃ ನನಗೆ ತಲೆ ಒಡೆಯಬೇಕಾದೀತು ! ಈಗ.... ಇನ್ನೊಂದು ವಿಷಯ ಉಳಿದಿದೆ. ಅದೇನು....? ಹಾಂ.... ಹೌದು. ಆ ಪತ್ರ."

ಸ್ಕಾಲ್ಸ್ಕಿ ಪೆಟ್ಟಿಗೆಯೊಳಗಿಂದ ಒಂದು ತುಂಡು ಕಾಗದವನ್ನೂ ಒಂದು ಲಕೋಟೆಯನ್ನೂ ತೆಗೆದ. ಆ ಕಾಗದದಲ್ಲಿ ಏನೋ ಬರೆದು, ಅದನ್ನು ಒಂದು ಬೀಗದ ಕೀಲಿಯನ್ನೂ ಲಕೋಟೆಯೊಳಗೆ ತುಂಬಿಸಿದ.

ಆ ಮೇಲೆ ಲಕೋಟೆಯ ಮೇಲೆ ಮೊಹರು ಹಾಕಿ, ಹೆಸರು ವಿಳಾಸಗಳನ್ನು ಬರೆದ.

" ಇದನ್ನು ಟಪ್ಪಾಲಿಗೆ ಹಾಕಲು ನನಗೆ ನೆನಪು ಹುಟ್ಟಿಸು ಜಾರ್ಡ್ಜ್," ಅವನು ಲಕೋಟೆಯನ್ನು ಜೇಬಿನೊಳಗೆ ಸೇರಿಸುತ್ತ ಹೇಳಿದನು." ಈಗ... ಎಲ್ಲವೂ ಸರಿಯಾಯಿತೆ ? "

ಇದು ಲೊಸ್ಕೊಟ್‌ನನ್ನು ಮರಳಿ ನಗುವಂತೆ ಮಾಡಿತು. ಆ ಅರ್ಥರಹಿತ ಮಾತು, ಆ ವಿನಾಶದ ದೃಶ್ಯಗಳು ಅವನಿಗೆ ತುಂಬಾ ತಮಾಷೆಯಾಗಿ ಕಂಡುವು. ಅವನು ನಗು ತಡೆಯಲಾರದೆ ಕುರ್ಚಿಯಲ್ಲಿ ಕುಳಿತುಕೊಂಡು ಒಂದೇ ಸವನೆ ಕಣ್ಣೀರು ಬರುವವರೆಗೆ ನಕ್ಕ.

" ನಗುವುದು," ಸ್ಕಾಲ್ಸ್ಕಿ ಉಪಾಧ್ಯಾಯರುಗಳಂತೆ ಮಾತಾಡುತ್ತ " ಯಾರಿಗೂ ಎಂದೂ ಹಾನಿ ಮಾಡಿಲ್ಲ. ಈಗ, ಜಾರ್ಡ್ಜ್ ನೀನು ಇಷ್ಟು

ಪ್ರಸನ್ನತೆಯಲ್ಲಿರಲು ಶಕ್ತನಾದರೆ, ನಾವು ಎಲ್ಲಿ ಬೇಕಾದರೂ ಹೋಗ ಬಲ್ಲೆವು..."

ಲೊಸ್ಕೊಟ್‌ನ ನಗು ನಿಂತಿತು. ಅವರು ಗಂಭೀರವಾಗಿ ಮಾತಾಡದೆ ಕುರ್ಚಿಯಿಂದೆದ್ದು ತನ್ನ ತಿಂಡಿಯ ಕಟ್ಟನ್ನು ತೆಗೆದುಕೊಂಡು— ಅದರಲ್ಲಿ ರೊಟ್ಟಿಯ ಎಂಟು ತುಂಡುಗಳಿದ್ದುವಲ್ಲದೆ, ಅವುಗಳ ಮಧ್ಯದಲ್ಲಿ ಒಂದು ಜರ್ಮನ್ ಆಟೋಮೆಟಿಕ್ ಪಿಸ್ತೂಲು ಇತ್ತು— ಬಾಗಿಲ ಬಳಿ ಹೋಗಿ ನಿಂತುಕೊಂಡನು.

ಅವರು ಎಗರ್‌ನ ಬದಲು ಫ್ರಾಂಜೆನ್ಸ್ ಬಾಡ್‌ನಲ್ಲೇ ರೈಲು ಹತ್ತುವೆ ವೆಂದು ಟ್ರಿಕ್ಸಾನಿಗೆ ಹೇಳಿದ್ದರು. ಏಕೆಂದರೆ ಎಗರ್‌ನಲ್ಲಿ ಯಾವಾಗಲೂ ಬಹಳ ಮಂದಿ ಗುಪ್ತಾಚಾರರಿರುತ್ತಿದ್ದರು. ಆದರೆ ಫ್ರಾಂಜೆನ್ಸ್ ಬಾಡ್ ಚಿಕ್ಕದಾಗಿದ್ದುದರಿಂದ ಅಲ್ಲಿ ಯಾರೂ ಹೆಚ್ಚಾಗಿ ಇರುತ್ತಿರಲಿಲ್ಲ. ಅದಕ್ಕೆ ಇನ್ನೊಂದು ಕಾರಣವೂ ಇತ್ತು: ಲೊಸ್ಕೊಟ್‌ನೊಡನೆ ಯಾವ ಗುರುತು ಹಚ್ಚುವ ಪ್ರಮಾಣ ಪತ್ರವೂ ಇರಲಿಲ್ಲ. ಸ್ಕಾಲ್ಸ್ಕಿಯೊಡನೆ ತನ್ನ ಪತ್ರ ಇದ್ದರೂ, ಅದು ನಂಬಲರ್ಹವಾಗಿರಲಿಲ್ಲ.

ಸ್ಕಾಲ್ಸ್ಕಿ ತಿಂಡಿಯ ಕಟ್ಟನ್ನು ಅಂಗಿಯೊಳಗಿಟ್ಟುಕೊಂಡು ಗುಂಡಿ ಗಳನ್ನು ಹಾಕಿಕೊಂಡು, ಒಂದು ರೊಟ್ಟಿಯ ತುಂಡನ್ನು ಜೇಬಿನೊಳಗೆ ಸೇರಿಸಿ ಅವನು ತನ್ನ ಆಯುಧವನ್ನು ಬಿಚ್ಚಿಸಿ ಚಂದವಾಗಿ ಕಟ್ಟಿಟ್ಟಿದ. "ನಾನು ಹೀಗೆ ಇದನ್ನು ಕೊಂಡು ಹೋಗುವುದೇ ಒಳ್ಳೆಯದು, ಎಷ್ಟೆಂದರೂ, ನನಗೆ ಅದನ್ನು ಕೈಯಲ್ಲಿ ಹಿಡಿದುಕೊಂಡು ನಡೆಯುವುದು ಸಾಧ್ಯವಿಲ್ಲ...." ಎಂದು ವಿವರವಾಗಿ ಹೇಳಿದನು.

ಅವರು ಮೆಲ್ಲನೆ ಮನೆಯಿಂದ ಹೊರಗೆ ಬಂದು ರಸ್ತೆಗಿಳಿಯುವಾಗ ಸ್ಕಾಲ್ಸ್ಕಿ ಏಕೋ ನಸುನಗುತ್ತಿದ್ದುದು ಲೊಸ್ಕೊಟ್‌ಗೆ ಕಾಣಿಸಿತು. ಸ್ಕಾಲ್ಸ್ಕಿ ತನ್ನ ಕಿಸೆಯಲ್ಲಿದ್ದ ಕಾಗದವನ್ನು ಟಪ್ಪಾಲು ಪೆಟ್ಟಿಗೆಯೊಳಗೆ ಹಾಕಿದ ಮೇಲೆ ಅವನು ಏಕೆ ನಸು ನಗುತ್ತಿದ್ದನೆಂದು ಲೊಸ್ಕೊಟ್‌ಗೆ ತಿಳಿಯಿತು.

"ನಾನು ಬೀಗದ ಕೀಲಿಯನ್ನು ಟಪ್ಪಾಲಿಗೆ ಹಾಕಿದೆ ಜಾರ್ಡ್...."

"ಒಹ್...? ಮನೆಯ ಕೀಲಿ ?"

"ಹೌದು. ಅದನ್ನು ಕಳಿಸುವುದು ಒಳ್ಳೆಯದೆಂದು ನನಗೆತೋರಿತು."

" ಯಾರಿಗೆ ? ಮನೆಯ ಒಡೆಯರಿಗೆ...."

ಸ್ಕಾಲ್ನಿಕ್ಕ ಗಟ್ಟಿಯಾಗಿ ನಕ್ಕ :

" ಒಡೆಯರಿಗೆ, ಜಾರ್ಡಾ? ಯಾರಿಗದು ಬೇಕು ? ಯಾರಿಗೂ ಬೇಡ ಮಹಾರಾಯಾ ? ನಮ್ಮ ವಂದನೆಗಳೊಡನೆ... ನಾನದನ್ನು ಕಮಿಸ್ಸಾರ್ ಪ್ರಡೆಲ್ಕನಿಗೆ ಕಳುಹಿಸಿದೆ.

* * * *

ರೈಲುಬಂಡಿ 185 ಹೋಗುವ ಮಾರ್ಗದಲ್ಲಿರುವ ಬೇರೆ ಬೇರೆ ರೈಲ್ವೆ ನಿಲ್ದಾಣಗಳಲ್ಲಿ ಪಲಾಯನ ಮಾಡುವವರೆಲ್ಲರೂ, ರಹಸ್ಯವಾದ ದಾರಿ ಹಾಗೂ ಕಾಲುವೆಗಳ ಮೂಲಕ ಬಂದು ಸೇರಿದರು. ಹೋವರ್ತ, ಪ್ರೇಗಿನಲ್ಲಿ ರೈಲು ಹತ್ತಿದ್ದ. ಪಿಲ್ಸೆಸ್‌ನಲ್ಲಿ ಶ್ರೀಮತಿ ಟ್ರುಕ್ಸಾ ತನ್ನ ಮಕ್ಕಳೊಡನೆ ಒಂದು ರೈಲುಗಾಡಿಯಲ್ಲಿ ಕುಳಿತಳು, ಅವಳಿಗೊಂದು ಪತ್ರ ಬಂದಿತ್ತು : " ಮನೆಗೆ ಕೂಡಲೇ ಬಾ. ನೀನು ಎಗರ್‌ಗೆ 2-05 ಗಂಟೆಗೆ ತಲಪುವ ಪ್ರೇಗ್ ಎಕ್ಸ್ಪ್ರೆಸ್ ಗಾಡಿಯಲ್ಲಿ ಬರುವಾಗ ನಾನು ಎಗರ್‌ನಲ್ಲಿ ಕಾದು ನಿಲ್ಲುತ್ತೇನೆ." ಎಂದಿತ್ತು ಅದರಲ್ಲಿ.

ಸ್ಕಾಲ್ನಿಕ್ಕ ಮತ್ತು ಲೊಸ್ಕೊಟ್, ಫ್ರಾಂಜೆನ್ಸ್ ಬಾಡ್‌ನಲ್ಲಿ ರೈಲುಗಾಡಿಗೆ ಹತ್ತಲಿದ್ದರು. ಆದರೆ ಎಗರ್‌ನಲ್ಲಿ ರೈಲು ಬಂಡಿ 185 ರಲ್ಲಿ ಕುಳಿತುಕೊಳ್ಳಲು ಬಹಳ ದೊಡ್ಡ ಗುಂಪು— ಆದರೆ ಎಲ್ಲರೂ ಬೇರೆ ಬೇರೆ ಇದ್ದರು—ಇತ್ತು : ಶ್ರೀಮತಿ ಕೊನ್ಸಲಿಂಕಾ ಮತ್ತು ಅವಳ ಇಬ್ಬರು ಮಕ್ಕಳು ; ಹೋಟೆಲ್ ಕುಟುಂಬದವರು, ಅವರಿಗೆ, " ದೇಶಭಕ್ತರು " ಪಲಾಯನ ಮಾಡುವ ಒಂದು ಸಂಭವವಿದೆಯೆಂದು ಕೊನೆಯ ಘಳಿಗೆಯಲ್ಲಿ, ಕ್ರಿಮಿನಲ್ ಇನ್ವೆಸ್ಟಿಗೇಶನ್ ಡಿಪಾರ್ಟ್‌ಮೆಂಟಿನಿಂದ ಆಗತಾನೇ ಅಧಿಕಾರದಿಂದ ತಳ್ಳಿಹಾಕಲ್ಪಟ್ಟಿದ್ದ ಇನ್ಸ್‌ಪೆಕ್ಟರ್ ಟ್ರೊಬ್ಲ್ ; ಮತ್ತು ಟ್ರುಕ್ಸಾ ಎಚ್ಚರಿಸಿದ್ದರು.

ಇವರೆಲ್ಲರೂ ತಮ್ಮಷ್ಟಕ್ಕೆ ರೈಲು ಹತ್ತಿದರಲ್ಲದೆ, ಒಬ್ಬರನ್ನೊಬ್ಬರು ನೋಡಿ ಪರಿಚಯದ ಸಂಜ್ಞೆಯನ್ನು ಮಾಡಿಕೊಳ್ಳಲಿಲ್ಲ.

ಆದರೆ ರೈಲು ಬಂಡಿ 185 ರಲ್ಲಿ ಇನ್ನಿಬ್ಬರು ಪಲಾಯನ ಮಾಡುವವರಿದ್ದರು. ಅವರ ಪರಿಚಯ ಯಾರಿಗೂ ಇರಲಿಲ್ಲ— ಪಲಾಯನವನ್ನು ಸಂಘಟಿಸಿದ ಸಂಸ್ಥೆಗೂ ಅವರ ಗುರುತು ಇರಲಿಲ್ಲ.

ಯಾಕೆಂದರೆ ವ್ಲಾಸ್ಟಾ ಮತ್ತು ಮಾರ್ತಾ ಪಿತೂರಿಗಾರರೂ ಮತ್ತು— ಒಂದು ರೀತಿಯಲ್ಲಿ— ಪಲಾಯನ ಮಾಡುವವರಾಗಿದ್ದರೂ, ಅವರಿಗೊಂದು

ರಹಸ್ಯವಾದ ಕೆಲಸವಿತ್ತು; ರೈಲು ಬಂಡಿ 185 ರಲ್ಲಿ ಕೊಂಡು ಹೋಗುವ ಪ್ರಯಾಣಿಕರ ವ್ಯವಸ್ಥೆಗೂ ಅದಕ್ಕೂ ಸಂಬಂಧವಿರಲಿಲ್ಲ.

ಅವರಿಬ್ಬರೂ ಎರಡನೆಯ ತರಗತಿಯ ಬಂಡಿಯಲ್ಲಿ ಕೈ ಕೈ ಹಿಡಿದು ಕೊಂಡು, ತಮಗೆ ಮತ್ತು ಇತರರಿಗೆ ಸಂಭವಿಸಿದ್ದ ಆಶ್ಚರ್ಯಕರ ಘಟನೆಯ ಯೋಚನೆಯಿಲ್ಲದೆ ಕುಳಿತುಕೊಂಡಿದ್ದರು.

ಪ್ರೇಗಿನಿಂದ ರೈಲು ಹೊರಡುತ್ತಿರುವಾಗ ವ್ಲಾಸ್ಟಾ ನಗುತ್ತ "ಕೊನೆಗಾದರೂ ಇದು ಆಯಿತಲ್ಲ, ಪ್ರಿಯೆ! ಅದು ಸುಲಭವಿರಲಿಲ್ಲ ಅಲ್ಲವೆ?"

"ಆದರೆ ಚಿಂತಿಲ್ಲ," ಎನ್ನುತ್ತ ಮಾರ್ತಾ ಅವನ ಮುಖವನ್ನು ಚುಂಬಿಸುತ್ತ, "ಇದು ಒಂದೇ ದಿನವಾದರೂ ಚಿಂತಿಲ್ಲ..." ಎಂದಳು.

ಅವರಿಬ್ಬರಿಗೆ ಕೆಲವು ಗಂಟೆ ಕೂಡಾ ಒಟ್ಟಿಗಿರಲು ಕಷ್ಟವಿತ್ತು; ಅವರು ರಹಸ್ಯವಾಗಿಯೇ ಒಬ್ಬರನ್ನೊಬ್ಬರು ಯಾರಿಗೂ ಕಾಣ ಸಿಗದೆ, ಸಂಧಿಸುತ್ತಿದ್ದರು. ಅದಕ್ಕೂ ಎಷ್ಟೋ ವಂಚನೆ ಮಾಡಬೇಕಾಗುತ್ತಿತ್ತು.

ಮಾರ್ತಾ ಕೆಲಸ ಮಾಡುತ್ತಿದ್ದ ಕಾರ್ಖಾನೆಯ ವ್ಯವಸ್ಥಾಪಕನು ಅವಳಿಗಾಗಿ ಮನ ಸೋತಿದ್ದನಲ್ಲದೆ, ತನ್ನ ಎದುರಾಳಿಯಾಗಿ ಯಾರೂ ಬಾರದಂತೆ ಎಚ್ಚರದಿಂದಿದ್ದ.

ಅವನು ಜಾಗರೂಕತೆಯಲ್ಲಿಯೇ ವರ್ತಿಸುತ್ತಿದ್ದ: ಮಾರ್ತಾಳ "ವಿಶ್ವಾಸಾರ್ಹತೆ" ಸಂದೇಹಾಸ್ಪದವಾಗಿದ್ದುದರಿಂದ, ಅವನು ಅವಳೊಡನಿದ್ದ ಎಂಥಹ ವಿಶ್ವಾಸಾಹಕ ವ್ಯಕ್ತಿಗೂ ತೊಂದರೆ ಕೊಡಲು ಸಮರ್ಥನಿದ್ದ. ವ್ಲಾಸ್ಟಾ ಮತ್ತು ಮಾರ್ತಳಿಗೆ ತಮ್ಮ ಪ್ರಣಯ ವ್ಯವಹಾರವು ತಿಳಿದರೆ ಅವನು ಏನು ಮಾಡುವನೊ ಎಂಬ ಹೆದರಿಕೆ ಸದಾ ಕಾಡುತ್ತಿತ್ತು.

ಇನ್ನೊಂದು ಆಕಸ್ಮಿಕ ಘಟನೆಯಿಂದಾಗಿ ಅವರಿಬ್ಬರಿಗೂ ವ್ಯವಸ್ಥಾಪಕನಿಂದ ದೂರವಿದ್ದು ಒಟ್ಟಾಗಿ ಕೆಲವು ತಾಸುಗಳ ಕಾಲ ಇರುವ ಸಂದರ್ಭ ದೊರಕಿತು. ವ್ಯವಸ್ಥಾಪಕನಿಗೆ ಸರ್ವೆ ಕೆಲಸದಲ್ಲಿ ನಗರದ ಹೊರಗೆ ಹೋಗಬೇಕಾಯಿತು. ಮಾರ್ತಾಳಿಗೆ ಎಗರ್‌ನಲ್ಲಿದ್ದ ತನ್ನ ಅತ್ತೆಯು ಕಾಯಿಲೆಯಿಂದ ನರಳುತ್ತಿದ್ದಾಳೆಂಬ ವರ್ತಮಾನವೂ ಬಂತು.

ರೈಲು ಬಂಡಿ 185 ಸೆಂಟ್ರಲ್ ಸ್ಟೇಷನ್ನಿನಿಂದ ಹೊರಗೆ ಹೊರಟಾಗ ಅವರಿಬ್ಬರೂ ಲಜ್ಜೆಯಿಂದ ನಸುನಕ್ಕರು. ಅವರು ಪ್ರೇಮಿಸತೊಡಗಿದಂದಿ

ನಿಂದ ಅಂದು ಮೊದಲ ಬಾರಿ ಇನ್ನೂ ಒಟ್ಟಿಗೆ ತಾವಿಬ್ಬರೂ ರಹಸ್ಯವಾಗಿ ಇರಬಹುದೆಂದು ಅವರಿಗೆ ತೋರಿತು.

ಸಾಧಾರಣ ಮಟ್ಟಿಗೆ ಅದು ಚಿಂತಿಲ್ಲವೆಂದು ಅವರು ಭಾವಿಸಿದ್ದರು. ಅದು ಅವರ ಎಣಿಕೆಗಿಂತ ಹೆಚ್ಚಾಗಿತ್ತು: ಅದು ಸರ್ವಸ್ವವಾಗಿತ್ತು....

ಹೊವರ್ತ್ ಮತ್ತು ಇಬ್ಬರು ಪ್ರಣಯಿಗಳೊಡನೆ ಪ್ರೇಗಿನಿಂದ ರೈಲು ಬಂಡಿ ಹೊರಡುವ ಕಾಲು ತಾಸಿನ ಮುಂದೆ ಮೊದಲೇ ಕೊನ್ವಲಿಂಕಾ ಎಗರ್-ಕೊಮೊಟೊ ರೈಲು ಬಂಡಿಯನ್ನು ಹತ್ತುತ್ತಿದ್ದ.

ಫಾಯರ್‌ಮ್ಯಾನ್ ಸಿದ್ಧನಾಗಿ ನಿಂತಿದ್ದ. ಕುವಾಸೆಕ್‌ನ ಬದಲಿಗೆ ಕೊನ್ವಲಿಂಕಾನನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಕುವಾಸೆಕ್ ಅಂದು ಆ ಬಂಡಿಯನ್ನು ಓಡಿಸಬೇಕಾಗಿತ್ತು.

ಫಾಯರ್‌ಮ್ಯಾನ್ "ಓಹೋ! ಏನು ಸಂಗತಿ? ಇಂದು ನಿಮ್ಮ ಕೆಲಸಲ್ಲವಲ್ಲ? ಅಲ್ಲದೆ ನೀವು ರಜೆಯಲ್ಲಿದ್ದೀರೆಂದು ನಾನು ಯೋಚಿಸಿದ್ದೆ....?" ಎಂದ.

ಕೊನ್ವಲಿಂಕಾ, "ನಾನು ರಜೆಯಲ್ಲಿದ್ದೇನೆಂಬುದು ನಿಜ. ಆದರೆ," ಅವನು ಕಣ್ಣು ಸನ್ನೆ ಮಾಡುತ್ತ "ನಿನಗದು ಗೊತ್ತಿಲ್ಲವೆ? ನನಗೆ ಕೊಮೊಟೋದಲ್ಲಿ ಸ್ವಲ್ಪ ಕೆಲಸ ಮಾಡಲಿಕ್ಕಿದೆ. ಹಾಗೆ ಕುವಾಸೆಕ್ ನನಗೆ ಉಪಕಾರ ಮಾಡಿದ ಅಷ್ಟೆ. ಹೋಗೋಣವೆ....?

ಎಂಜಿನಿನಲ್ಲಿ ಆವಿ ತುಂಬಿತ್ತು. ಸಮಯಕ್ಕೆ ಸರಿಯಾಗಿ ಕೊನ್ವಲಿಂಕಾ ನಡೆಸುತ್ತಿದ್ದ ರೈಲು ಬಂಡಿ ಎಗರ್‌ನಿಂದ ಕೊಮೊಟೋಗೆ ಹೊರಟಿತು.

ಅವರೆಗೆ—ಸೆಪ್ಟೆಂಬರ 11 ರಂದು ಮುಂಜಾನೆ 9 ಗಂಟೆಯಾಗಿ ಕೆಲವು ನಿಮಿಷಗಳು ಸಂದಿದ್ದುವಷ್ಟೆ—ಎಲ್ಲವೂ ಯೋಜನಾ ಬದ್ಧವಾಗಿಯೇ ನಡೆದಿತ್ತು. ಆಕಾಶ ಶುಭ್ರವಾಗಿತ್ತು. ಕೊನ್ವಲಿಂಕಾ ಉಲ್ಲಸಿತನಾಗಿ, ವೇಗವನ್ನು ಹೆಚ್ಚು ಕಡಿಮೆ ಮಾಡುತ್ತಿರುವಾಗ, ಒಂದು ವಿನೋದದ ಹಾಡನ್ನು ಹಾಡಿದ. ಅವನ ಹಿಂದೆ ಕಲ್ಲಿದ್ದಲನ್ನು ಒಳಗೆ ದೂಡುತ್ತಿದ್ದ ಫಾಯರ್ ಮ್ಯಾನ್ ಕೂಡಾ ಅವನೊಡನೆ ಧ್ವನಿ ಸೇರಿಸಿದ.

ಕೊಮೊಟೋದಲ್ಲಿ ಕೊನ್ವಲಿಂಕಾ ವಾಡಿಕೆಯಂತೆ ಎಂಜಿನನ್ನು ಗಾಡಿಗಳಿಂದ ಬೇರ್ಪಡಿಸಿದ. ಅವನು ಎಗರ್‌ನಿಂದ ತಂದ ರೈಲುಬಂಡಿ ಪ್ರೇಗಿಗೆ ಬೇರೊಂದು ಎಂಜಿನಿನೊಡನೆ, ಬೇರೊಬ್ಬ ಡ್ರೈವರನೊಡನೆ ಮುಂದುವರಿಯುತ್ತಿತ್ತು.

ಎಗರ್‌ಸಿಂದ ರೈಲು ಬಂಡಿಯನ್ನು ಕೊನ್ವಲಿಂಕಾ ತರುತ್ತಿರುವಾಗಲೇ ಪ್ರೇಗಿನಿಂದ ಒಂದು ಎಕ್ಸ್‌ಪ್ರೆಸ್ ಬಂಡಿ ಬರಲಿಕ್ಕಿತ್ತು. ಈ ಪ್ರೇಗಿನಿಂದ ಬಂದ ಬಂಡಿಗೆ ತನ್ನ ಎಂಜಿನನ್ನು ಕೊನ್ವಲಿಂಕಾ ಜೋಡಿಸಿ ಎಗರಿಗೆ ಪ್ರೇಗ್-ಕೊಮೊಟೋ ಎಕ್ಸ್‌ಪ್ರೆಸ್ಸನ್ನು ಲೋಕಲ್ ಬಂಡಿಯಾಗಿ ನಡೆಸಲಿದ್ದ.

ಭೂಗತ ಚಳವಳಿಯ ದಕ್ಷತೆಯು ಚಟುವಟಿಕೆಯಾವುದನ್ನು ಮರೆತಿರಲಿಲ್ಲ. ಆ ಮಹಾಕಾರ್ಯವನ್ನು ಸಾಧಿಸಲು ಅದು, ಸಂಪೂರ್ಣ ಪ್ರಯತ್ನವನ್ನು ಮಾಡಿತ್ತು.

ಮುಂದಾಳುವು ಸಕಾಲದಲ್ಲಿ ಎಲ್ಲರಿಗೂ ಶಸ್ತ್ರಗಳನ್ನು ಹಂಚಿದ್ದ. ಹಾಗೆಯೇ ಕೊಮೊಟೋವಲ್ಲಿ ಎರಡು ಮೂಟೆ ಸೀಬೆ ಹಣ್ಣುಗಳು ಒಂದಿಷ್ಟೂ ಸಂದೇಹಕ್ಕೆ ಎಡೆಗೊಡದೆ—ರೈಲು ಬಂಡಿಯಲ್ಲಿ ಪಿತೂರಿಗಾರರಲ್ಲೊಬ್ಬನಿಂದ ಹಾಕಲ್ಪಟ್ಟುವು.

ಫಾಯರ್‌ಮ್ಯಾನ್ ಕಲಬ್ಜ ಆ ಸೀಬೆ ಹಣ್ಣಿನ ಮೂಟೆಗಳನ್ನು ಎತ್ತಿ ಮೇಲೆ ಹಾಕುವುದನ್ನು ನೋಡಿ ನಸುನಕ್ಕ.

"ಓಹ್ಹೊ? ಇದೆಯೇ ಇಲ್ಲಿ ನಿಮಗಿದ್ದ ಸಣ್ಣ ವ್ಯವಹಾರ! ಸರಿ, ಸರಿ........ ..."ಎಂದ.

ಕೊನ್ವಲಿಂಕಾ ಆ ಮೂಟೆಗಳನ್ನೆತ್ತುತ್ತ ಆಯಾಸದಿಂದ,

"ಕಲಬ್ಜ, ನೀನು ನಗುವುದಕ್ಕಿಂತ ಇದಕ್ಕೆ ಒಂದು ಕೈ ಕೊಟ್ಟರೆ ಒಳ್ಳೆಯದು, ಮತ್ತೆ, ನಿನ್ನ ಹೆಂಡತಿ ಮಕ್ಕಳಿಗೆ ಕೆಲವು ಸೀಬೆ ಹಣ್ಣುಗಳನ್ನು ಕೊಂಡು ಹೋಗಬಹುದಲ್ಲ,?"

"ಒಹೋ ... ...ಖಂಡಿತ,!" ಎನ್ನುತ್ತ ಫಾಯರ್‌ಮ್ಯಾನ್ ಬಾಗಿ ಮೂಟೆಗಳನ್ನು ಎತ್ತಿದ್ದ. "ಮೇಲೆ ಬಂತು! ನೋಡಿ!"

ಸೀಬೆಹಣ್ಣುಗಳನ್ನು ತಂದಿದ್ದ ವ್ಯಕ್ತಿಗೆ ಕೊನ್ವಲಿಂಕಾ ಹೇಳಿದ,

"ಧನ್ಯರಾದ ಕಾಮ್ರೇಡ್! ನಿಮಗೂ ಒಂದು ದಿನ ಹೀಗೆಯೇ ಮಾಡುತ್ತೇನೆ........" ಇದರ ಅರ್ಥ ಕಮ್ಯುನಿಸ್ಟ್ ಕಲಬ್ಜನಿಗೆ ಹೊಳೆಯಲಿಲ್ಲ.

ಭೂಗತ ಕಾರ್ಯಕರ್ತ ನಸುನಕ್ಕು ನಮಸ್ಕರಿಸಿದ.

"ನಿಮಗಿಬ್ಬರಿಗೂ ಸುಖಪ್ರಯಾಣವನ್ನು ಹಾರೈಸುತ್ತೇನೆ!"

“ಸರಿ!” ಎನ್ನುತ್ತ ಕೊಪ್ಪಲಿಂಕಾ ಕಣ್ಣು ಕೊಂಕಿಸಿದ. ಫಾಯರ್ ಮ್ಯಾನೇಸ್. ಅದನ್ನು ನೋಡಲಿಲ್ಲ. “ಸೀಬೆ ಹಣ್ಣುಗಳಿಗೆ ಧನ್ಯವಾದ, ಕಾಮ್ರೇಡ್!”

* * *

ಒಂದಿಷ್ಟೂ ವಿಳಂಬಮಾಡದೆ ನಿಶ್ಚಿತ ಸಮಯಕ್ಕೆ ಸರಿಯಾಗಿ ಪ್ರತಿಯೊಬ್ಬನೂ ತನ್ನ ಕೆಲಸವನ್ನು ತಪ್ಪದೆ ಮಾಡಬೇಕೆಂಬ ಒಂದು ಮುಖ್ಯ ವಾದ ವಿಷಯವನ್ನು ಪಿತೂರಿಗಾರರೆಲ್ಲರಿಗೂ ಮುಂದಟ್ಟು ಮಾಡಲಾಗಿತ್ತು.

ಆತನಕ, ಏನೂ ದುರ್ಘಟನೆ ನಡೆಯದಿದ್ದುದರಿಂದಲೂ, ಎಲ್ಲಾ “ಪ್ರಯಾಣಿಕರು” ಸಕಾಲದಲ್ಲಿ ಬಂದುದರಿಂದಲೂ ಎಲ್ಲವೂ ಸಮಯಕ್ಕೆ ಸರಿಯಾಗಿಯೇ ನಡೆದಿದ್ದುವು. ರೈಲು ಹತ್ತಿದವರು ಆಯಾ ನಿಲ್ದಾಣದಲ್ಲಿ ಆಯಾ ಸಮಯಕ್ಕೆ ಸರಿಯಾಗಿ ಬಂದಿದ್ದರು. ಶಸ್ತ್ರಧಾರಿಗಳೆಲ್ಲ, ತಮ್ಮ ಶಸ್ತ್ರಗಳೊಡನೆ ರೈಲು ಬಂಡಿಯಲ್ಲಿ ಮೊದಲೇ ನಿರ್ಣಯಿಸಿದ ಸ್ಥಳಗಳಲ್ಲಿ ಕುಳಿತಿದ್ದರು. ಕೊನೆಯ ಘಟ್ಟದಲ್ಲಿ ರೈಲು ಗಡಿಯುತ್ತ ಸಾಗುವಾಗ ಪ್ರಯಾಣಿಕರ್ಯಾರೂ ತೊಂದರೆಯನ್ನೀಯದಂತೆ ಅವರು ನೋಡಬೇಕಾಗಿತ್ತು.

ಕೊಪ್ಪಲಿಂಕಾ ಕೊಮೊಟೋದಿಂದ ರೈಲು ಬಂಡಿಯನ್ನು ಎಗರ್‌ನ ಸಮೀಪ ತರುತ್ತಿದ್ದಾಗ ಡಾಕ್ಟರ್ ಸ್ವೆಕ್ ಪಲಾಯನಕ್ಕೆ ತನ್ನಿಂದ ಆಗಬೇಕಾದ ಕಾರ್ಯದಲ್ಲಿ ಮಗ್ನರಾದರು.

ವಾಸಸ್ಥಾನಗಳ ನಿಯೋಗದ ಅಧಿಕಾರಿಯು ಡಾಕ್ಟರರ ಸೂರೆಮಾಡಿದ್ದ ರೇಡಿಯೋದಮೇಲೆ —ಅದು ರೇಡಿಯೋ ಫ್ರೀ ಯುರೋಪ್ ಬಾನುಲಿ ಕೇಂದ್ರ ವನ್ನು ಸೂಚಿಸುತ್ತಿತ್ತು —ವಹಿಸಿದ ಆಸಕ್ತಿಯಿಂದಾಗಿ ಅವರಿಗೆ ತುಂಬಾ ಅಸಮಾಧಾನವಾಗಿದ್ದರೂ, ಮತ್ತೆ, ತಮ್ಮ ಯೋಜನೆಯು ನಿಷ್ಫಲವಾಗಬಹು ದೆಂಬ ದೌರ್ಬಲ್ಯದ ಯೋಚನೆಯನ್ನೆಲ್ಲ ಹತ್ತಿಕ್ಕಲು ನಿರ್ಧರಿಸಿದರು. ಆ ಅಧಿಕಾರಿಯನ್ನು ಎಗರ್ ರೈಲ್ವೇ ನಿಲ್ದಾಣದಲ್ಲಿ ಬಿಟ್ಟು ಅವರು ಆಸ್ಚ್‌ಗೆ ಕಾರಿನಲ್ಲಿ ಹೋಗುತ್ತಿದ್ದಾಗ, ಜೆಕ್ ಜನಾಂಗದ, ಧೀರ ಇತಿಹಾಸದಲ್ಲಿ ನಡೆದಿದ್ದ ಅತ್ಯಂತ ಕೀರ್ತಿದಾಯಕವಾದ ಸಾಹಸಕ್ಕೆ ರೈಲು ಬಂಡಿಯು ಸಂಬಂಧವಿತ್ತೆಂದು ಯೋಚಿಸಿ ಅವರು ಬಹಳ ಉತ್ತೇಜನಗೊಂಡರು. ಐವತ್ತು ಸಾವಿರ ಮಂದಿ ಜೆಕ್ ಯುದ್ಧ ಕೈದಿಗಳು ಶಿಬಿರದಲ್ಲಿ ದಂಗೆಯೆದ್ದು,

ಒಂದು ರೈಲು ಬಂಡಿಯನ್ನು ಸ್ವಾಧೀನಪಡಿಸಿಕೊಂಡು, ವಿಚಿತ್ರವಾದ ಸಹನಾ ಭಾವದಿಂದ, ತನ್ನ ಹೆಂಡತಿ ಮಕ್ಕಳು, ಮುದುಕರು ಮತ್ತು ರೋಗಿಗಳೊಡನೆ ಏಷಿಯಾಟಿಕ್ ರಷ್ಯಾದ ವಿಶಾಲ ಭೂಮಿಯನ್ನು ದಾಟಿದ್ದರು. ಅವರ ಪ್ರಯಾಣದ ಪ್ರತಿಯೊಂದು ಘಟ್ಟದಲ್ಲೂ ಅವರ ಮೇಲೆ ಹಲ್ಲೆ ನಡೆದಿತ್ತು. ಅವರು ಯುದ್ಧವನ್ನು ಮಾಡುತ್ತಲೇ ಮಕ್ಕಳಿಗೆ ಬೇಕಾದ ವಿದ್ಯಾಭ್ಯಾಸವನ್ನೀಯಲು ಶಾಲೆಗಳನ್ನು, ರೋಗಿಗಳ ಚಿಕಿತ್ಸೆಗಾಗಿ ಆಸ್ಪತ್ರೆಗಳನ್ನು ನಡೆಸಿದ್ದರು. ಅವರು ಕಾಡುಮನುಷ್ಯರಂತೆ ಅಲ್ಲಲ್ಲಿ ನಿಂತು, ಬೀಜ ಬಿತ್ತಿ, ಬೆಳೆ ಕೊಯ್ಯುವ ತನಕ ಕಾದಿದ್ದರು. ಅವರು ಮಹಾ ನಗರವಾದ ಇರ್ಕುಟ್ಸ್ಕ್‌ನ್ನು ವಶಪಡಿಸಿದ್ದರು: ಅಲ್ಲಿ ಅಂಚೆಚೀಟಿಗಳನ್ನೂ ವರ್ತಮಾನ ಪತ್ರಿಕೆಗಳನ್ನು ಶಾಲೆಯ ಪಠ್ಯ ಪುಸ್ತಕಗಳನ್ನು ಮುದ್ರಿಸಿದ್ದರು. ಮರಳಿ ಅಲ್ಲಿಂದ, ಗುಂಡಿನೇಟುಗಳಿಂದ ನಜ್ಜುಗುಜ್ಜಾದ ರೈಲುಗಾಡಿಗಳನ್ನು, ಸವೆದುಹೋದ ಹಳೆಯ ಎರಡು ಎಂಜಿನುಗಳಿಗೆ ಜೋಡಿಸಿದ್ದರು. ಮರಳಿ ಬಹಳ ದೂರ ಪೂರ್ವಕ್ಕಿರುವ ಸೈಬೀರಿಯಾಕ್ಕೆ—ವ್ಲಾಡಿವಾಸ್ಟಾಕ್ ನತ್ತ, ಸಮುದ್ರದೆಡೆಗೆ, ಸ್ವತಂತ್ರ ಮತ್ತು ಶಾಂತಿಯುತ ಪ್ರಪಂಚಕ್ಕೆ, ಸಾಗಿದ್ದರು ....

ಆ ಮಹ ಸಾಹಸವನ್ನು ಅದು ಹತ್ತುಸಾವಿರ ಜನರ ಮಹತ್ವವಾದ ಮುನ್ನಡೆ, ಈಜಿಪ್ಟಿನಿಂದ ಹೊರಬಿದ್ದುದು, ಮೆಕ್ಸಿಕೋವನ್ನು ಗೆದ್ದುದು, ಕಾರ್ಥೇಜಿನವನ್ನು ನಾಶಮಾಡಿದುದು, ಮತ್ತು ಚಾರ್ಟರರ ಮಹಾಧಾಳಿ ಮುಂತಾದ ಯಾವ ಐತಿಹಾಸಿಕ ಸಾಹಸದ ಕಾರ್ಯಕ್ಕಿಂತಲೂ ಕಡಿಮೆಯಾಗಿರಲಿಲ್ಲ—ಯೋಚಿಸಿ ಡಾಕ್ಟರ್‌ಸ್ವೆಕ್‌ರ ಕಣ್ಣುಗಳಲ್ಲಿ ಅಭಿಮಾನದಿಂದ ನೀರು ಉಕ್ಕಿ ಬಂತು. ಮೂವತ್ತು ಜನರನ್ನೊಳಗೊಂಡ ಸಣ್ಣ ಕೂಟವೊಂದು ಕೆಲವು ಕಿಲೋಮೀಟರ್ ದೂರ ಹೋಗುವುದು, ಈ ಸಾವಿರಾರು ಜನರು, ಶತ್ರು ದೇಶಗಳ ಮೂಲಕ ಲೆಕ್ಕವಿಲ್ಲದಷ್ಟು ಮೈಲಿ ಪ್ರಯಾಣಮಾಡುವ ಸಾಹಸದ ಮುಂದೆ, ಅದೆಂತಹ ಮಾತು?

ಇದು ಅಷ್ಟು ಅಲ್ಪವಾದ ಸಾಹಸವೆಂದು ಒಮ್ಮೆ ತೋರಿದರೂ, ಇದೂ ಅಂಥಹ ಮಹಾಸಾಹಸಗಳ ಸಾಲಿಗೇ ಚಿಕ್ಕ ಪ್ರಮಾಣದಲ್ಲಾದರೂ—ಚರಿತ್ರೆಯಲ್ಲಿ ಸೇರಬಹುದು, ಆದರೆ ಯಾರೂ ತಪ್ಪು ಮಾಡಬಾರದು, ಯಾರೂ

ಹೆದರಬಾರದು, ಯಾರೂ ಭಯಪಟ್ಟು ಅನಿಶ್ಚಿತತೆಯಿಂದ ತಮ್ಮ ಪಾಲಿನ ಕರ್ತವ್ಯವನ್ನು ಮಾಡದಿರಕೂಡದು.

ಬಹುಶಃ ಈ ಕೊನೆಯ ಕೆಲಸ—ತಾವು ಉಳಿದವರೊಡನೆ ಸೇರುವ ಮುಂಚಿನ, ಡಾ॥ಸ್ವಿಕ್‌ರ ಬಹಳ ಮುಖ್ಯವಾದ ಹೊಣೆಗಾರಿಕೆಯ ಮತ್ತು ಏಕಮಾತ್ರ ಉದ್ದೇಶವನ್ನಿಟ್ಟುಕೊಂಡಿರುವ ಆ ಗುಂಪಿನ ಸದಸ್ಯನಾಗಿ ಮಾಡುವ ನಿಸ್ವಾರ್ಥದ ಕೆಲಸ ಎಲ್ಲಕ್ಕಿಂತಲೂ ಮುಖ್ಯವಾದುದು. ಟ್ರಿಕ್ಸಾ ಡಾಕ್ಟರರಿಗೆ ತಾನು ಬೆಳಗ್ಗೆ ಆಸ್ಟ್‌ಗೆ ಹೋದಾಗ ರೈಲು ಮಾರ್ಗದಲ್ಲಿ ಏನೊಂದೂ ತಡೆಯಿಲ್ಲವೆಂದು ಹೇಗೋ ತಿಳಿಸಿದ್ದ, ಪುನಃ ಮಧ್ಯಾಹ್ನದ ಮೇಲೆ ರೈಲು ಮಾರ್ಗವು ಸ್ವಚ್ಛವಾಗಿದೆಯೆಂದು ಟ್ರಿಕ್ಸಾ ಎರಡನೆಬಾರಿ ಕಳುಹಿಸಿದ ಸಂದೇಶವೂ ಡಾ॥ ಸ್ವಿಕ್‌ರಿಗೆ ಸಿಕ್ಕಿತು.

ಡಾಕ್ಟರ್ ಸ್ವಿಕ್‌ ಈಗ ಸಾಧ್ಯವಿದ್ದಷ್ಟು ಸಮಯದತನಕ ರೈಲುಮಾರ್ಗ ಸರಿಯಿದೆಯೇ ಇಲ್ಲವೋ ಎಂಬುದನ್ನು ನೋಡಬೇಕಾಗಿತ್ತು. ಹಾಗಾದರೇನೇ ರೈಲು ಬಂಡಿಯು ಆಸ್ಟ್‌ನಲ್ಲಿ ನಿಲ್ಲದೆ, ಗಡಿದಾಟಿ ಹೋಗಬಹುದಿತ್ತು.

ಕೊನ್ಸಲಿಂಕಾ ಎಗರ್‌ಗೆ ರೈಲು ಬಂಡಿಯನ್ನು ತರುವಾಗ, ಡಾಕ್ಟರ್ ಸ್ವಿಕ್ ಆಸ್ಟ್ ಸಿಲ್ದಾಣದ ಅಂಗಳಕ್ಕೆ ಹೋಗಿ ಕಾರನ್ನು ನಿಲ್ಲಿಸಿದರು. ಅವರ ಮುಂದೆ ಇದ್ದ ಸರಕುಗಳನ್ನು ಕೂಡಿಟ್ಟ ಕೋಣೆಯ ಮುಂದೆ ದೊಡ್ಡದೊಂದು ಕರಿಹಲಗೆಯನ್ನು ತೂಗಹಾಕಿತ್ತು. ಅದರಲ್ಲಿ ಹೀಗೆ ಬರೆದಿತ್ತು.

“ ಅಧಿಕಾರ ಹೊಂದಿದವರಿಗೆ ಮಾತ್ರ ಪ್ರವೇಶ ! ”

ಡಾಕ್ಟರ್‌ರು ಕಾರು ನಿಲ್ಲಿಸುವಾಗ ಅದನ್ನು ನೋಡಲೂ ಇಲ್ಲ. ಆಸ್ಟ್ ಸಿಲ್ದಾಣದಲ್ಲಿ ಅವರು ಒಳ್ಳೆಯ ಪರಿಚಿತರಿದ್ದುದರಿಂದ ಪ್ರವೇಶದ ನಿರ್ಬಂಧ ಅವರಿಗೆ ಅನ್ವಯಿಸುತ್ತಿರಲಿಲ್ಲ.

ಅವರು ಮೆಲ್ಲನೆ ಸಿಗರೇಟನ್ನು ಉರಿಸುತ್ತ ಸ್ವಲ್ಪ ಹೊತ್ತು ಅಲ್ಲಿ ನಿಂತು ಬೇರೆ ಬೇರೆ ಗಡಿಗೆ ಹೋಗುವ ರೈಲು ಮಾರ್ಗಗಳನ್ನು—ಮುಖ್ಯಮಾರ್ಗ, ಚಿಕ್ಕ ಕವಲು ಮಾರ್ಗಗಳು—ಸೂಕ್ಷ್ಮವಾಗಿ ನೋಡಿದರು.

ಅವರು ದೀರ್ಘಶ್ವಾಸವನ್ನೊಂದು ಬಿಟ್ಟು, ಮೈಯ್ಯನ್ನು ನೇವರಿಸಿಕೊಂಡರು. ಅವರ ಮುಂದೆ ಉಗ್ರಾಣ ಇತ್ತು. ಅದರಾಚೆ ಕೆಲವು ಕವ

ಲೊಡೆದ ರೈಲು ಮಾರ್ಗಗಳಿದ್ದುವು. ಅವುಗಳಿಂದಲೂ ಆಚೆ ಒಂದು ಗರಗಸದ ಮಿಲ್ಲು ಇತ್ತು. ಅದು ಅವರಿಗೆ ಕಾವಲುಗಾರನು ವಿಚಾರಿಸಿದರೆ ತಕ್ಕ ಸೇವನ ವನ್ನೊದಗಿಸಬೇಕಿತ್ತು. ತಾನು ಆಸ್ಟನಲ್ಲಿ ಮಧ್ಯಾಹ್ನ ಎರಡು ಗಂಟೆಗೆ ಕೆಲಸವಿರುವ ದಿನದಲ್ಲಿ ಇರುವೆನೆಂಬುದಕ್ಕೆ ಹೇಳಬೇಕಾದ ಕಾರಣ ಅವರಿಗೆ ಆಗಲೇ ಹೊಳೆದಿತ್ತು.

ಡಾಕ್ಟರರು ಮನಸ್ಸನ್ನು ಗಟ್ಟಿಮಾಡಿ—"ಈಗ ಬಾ ನಿನಗೆ ಕೆಲಸವಿದೆ! ಕೈಕಾಲುಗಳನ್ನು ನೇವರಿಸುವುದು ಈ ಸಮಯದಲ್ಲಿ ಎಷ್ಟೇ ಹಿತಕರವಾಗಿದ್ದರೂ ಈ ಅಪರಾಹ್ನದಲ್ಲಿ ಸಮಯವನ್ನು ಹಾಳುಮಾಡಬಾರದು!"— ಗರಗಸದ ಮಿಲ್ಲಿನ ಕಡೆಗೆ, ತಮ್ಮ ಬದಿಯಲ್ಲಿದ್ದ ಸಿಲ್ದಾಣ ಮತ್ತು ಪ್ಲಾಟ್‌ಫಾರ್ಮು ಗಳನ್ನು ನೋಡುತ್ತ ನಡೆದರು. ಅಲ್ಲಿ ಬಂಡಿಗಳು ಮಾತ್ರವಲ್ಲದೆ, ಅವನ್ನು ಎಳೆಯುವ ಎಂಜಿನ್ನುಗಳು ಕೂಡಾ ಇಲ್ಲದಿದ್ದುದನ್ನು ಕಂಡು ಅವರ ಎದೆ ಉಬ್ಬಿತು. ಇನ್ನೂ ಒಂದು ಗಂಟೆಯೇ ಏನೊಂದೂ ಅಭ್ಯಂತರಗಳಿಲ್ಲದೆ ಇರಲಿ ಎಂದು ಪ್ರಾರ್ಥಿಸುತ್ತ, ಅವರು ರೈಲು ಕಂಬಿಗಳನ್ನು ದಾಟಿ ಗರಗಸದ ಮಿಲ್ಲಿನ ಕಡೆಗೆ ಹೆಜ್ಜೆ ಹಾಕಿದರು.

ಆಚೆಕಡೆ ಗಡಿ ಸ್ಥಳವಿತ್ತು—ಸಾವಿರದನೂರು ಮೀಟರುಗಳ, ಅಂದರೆ ಐದು ಫರ್ಲಾಂಗು ದೂರವಿತ್ತು ಅಲ್ಲಿಗೆ. ಗಡಿ ಸ್ಥಳದ ಕೆಲವು ಜೆಕ್ ಕಾವಲು ಗಾರರು ರೈಲುಮಾರ್ಗದ ಬದಿಯಲ್ಲಿ ಆಲಸ್ಯದಿಂದ ಒರಗಿ ಕುಳಿತಿದ್ದುದು ಡಾಕ್ಟರರಿಗೆ ಕಾಣುತ್ತಿತ್ತು.

ಅವರು ಶಸ್ತ್ರಧಾರಿಗಳೆಂದೂ ಡಾಕ್ಟರರಿಗೆ ಕಾಣುತ್ತಿತ್ತು. ಆದರೆ ಈ ತಂತ್ರದ ವಿಸ್ಮಯದಿಂದಾಗಿ ಈ ಕೊನೆಯ ಗಂಡಾಂತರವನ್ನು ದಾಟ ಬಹುದೆಂದು ಅವರು ಧೈರ್ಯಗೊಂಡರು.

ಒಳಗೊಳಗೆ ಹೆದರಿಕೆಯಾಗುತ್ತಿದ್ದರೂ ಅವರು ಮುನ್ನಡೆದರು. ಆ ಸೈನಿ ಕರು ಆಲಸಗಾರರಂತೆ ಕಾಣುತ್ತಿದ್ದರೂ ಅವರನ್ನು ಕೇವಲ ಅಲಂಕಾರಕ್ಕಾಗಿ ಅಲ್ಲಿ ನಿಲ್ಲಿಸಿರಲಿಲ್ಲ. ಅವರೊಡನೆ ರೈಫಲ್, ಸಬ್–ಮೆಷೀನ್‌ಗನ್ ಮತ್ತು ಆಟೊಮೆಟಿಕ್ ಪಿಸ್ತೂಲುಗಳಲ್ಲದೆ, ಇನ್ನೂ ಭಯಂಕರವಾದ ಶಸ್ತ್ರಗಳಿರ ಬಹುದು. ಅವರೊಡನೆ ಒಂದು ಹಗುರವಾದ ಟ್ಯಾಂಕೂ ಇರಬಹುದು. ಅದರ ಎಂಜಿನು ಸದಾ ನಡೆಯುತ್ತಿದ್ದು ಅಗತ್ಯವಿದ್ದಾಗ ಅದನ್ನು ಕೂಡಲೇ

ರೈಲು ಮಾರ್ಗಕ್ಕೆ ಅಡ್ಡತರಬಹುದು. ರೈಲು ಮಾರ್ಗದಲ್ಲಿ ತೋಟಿಗಳನ್ನು ಅವರು ಇಟ್ಟಿರಬಹುದು. ಅವರು ...

ಡಾಕ್ಟರ್ ಸ್ಪೆಕ್ ತನ್ನಲ್ಲೇ ಕೋಪಗೊಂಡು ಇಂಥಹ ಅಪಾಯಕರ ವಾದ ಸಂದರ್ಭಗಳ ಕಲ್ಪನೆಗಳನ್ನು ಬದಿಗಿರಿಸಿದರು.

ಅವರು ಗರಗಸದ ಮಿಲ್ಲಿಗೆ ಹೋಗಿ ಆಫೀಸಿನ ಬಾಗಿಲನ್ನು ತಟ್ಟಿದರು.

ಮ್ಯಾನೇಜರನೇ ಸ್ವತಃ ಅವರ ಮುಂದೆ ಬಂದ.

"ಹಲ್ಲೊ! ನೀವು ಹೇಗಿದ್ದೀರಿ, ಡಾಕ್ಟರ್ ಸ್ಪೆಕ್! ಒಳಗೆ ಬನ್ನಿ, ಸ್ವಾಮಿ, ಬನ್ನಿ! ನಿಮಗೆ ನನ್ನಿಂದೇನಾಗಬೇಕಾಗಿದೆ, ಡಾಕ್ಟರ್?"

"ಸ್ವಲ್ಪ ಮರದ ಹುಡಿ ಬೇಕು" ಎನ್ನುತ್ತ ಡಾಕ್ಟರರು ಕಚೇರಿಯ ಒಳಹೊಕ್ಕು, "ನಾನು ಕಳೆದವರ್ಷ ಪಡಕೊಂಡಂತೆ ಆಸ್ಪತ್ರೆಯಲ್ಲಿ ಉರಿಸಲು ಸ್ವಲ್ಪ ಮರದ ಹುಡಿ ಈ ವರ್ಷವೂ ಸಿಗಬಹುದೋ ಎಂದು ತಿಳಿಯಬೇಕಾಗಿದೆ."

ಮ್ಯಾನೇಜರ್ ನಸುನಕ್ಕ.

"ಅದೇನೂ ಕಷ್ಟವಿಲ್ಲ, ಡಾಕ್ಟರ್". ನಗದಿಯಾಗಿ ಹಣ ಕೊಡುವ ವರಲ್ಲಿ ಡಾಕ್ಟರರೊಬ್ಬರು ಎಂದು ಅವನಿಗೆ ನೆನಪಾಯಿತು. ಆ ನೆನಪಿನಿಂದಾಗಿ ಅವನ ವರ್ತನೆಯೂ ಬದಲಿತು. "ನಿಮಗೆಷ್ಟು ಬೇಕು? ಐನೂರು ಕಿಲೋ ಹೆಚ್ಚಾದೀತೆ?"

"ಇಲ್ಲ. ಅದು ಸಾಕು .... ನೀವು ಹೆಚ್ಚು ಬೆಲೆ ಹೇಳದಿದ್ದರೆ'' ಎಂದು ಡಾಕ್ಟರರು ನಗುತ್ತ, ಅವರು ತಮ್ಮ ಹಣದ ಚೀಲವನ್ನು ತೆಗೆದು ಅದನ್ನು ಬಿಡಿಸಿ ಅದರಲ್ಲಿ ತುಂಬಿಸಿದ್ದ ಹಣದ ನೋಟಿನ ಕಟ್ಟನ್ನು ಮ್ಯಾನೇಜರನಿಗೆ ತೋರುವಂತೆ ಹಿಡಿದರು. "ಹಿಂದಿನ ಸಲ ನನಗೆ ತೃಪ್ತಿಯಾಗಿತ್ತು....''

"ಹೌದು .... ಈ ಮರದ ಹುಡಿ ಒಳ್ಳೆಯದಿದೆ" ಎಂದು ತುಟಿಕಚ್ಚಿ ಕೈಯನ್ನು ತುರಿಸುತ್ತಾ ಡಾಕ್ಟರರಿಂದ ಒಮ್ಮೆಲೇ ಆದಷ್ಟು ಹೆಚ್ಚು ಬೆಲೆಯನ್ನು ಪಡೆಯುವುದೋ, ಅಥವ ಅವರನ್ನು ತನ್ನ ಕಾಯಂ ಗಿರಾಕಿಯನ್ನಾಗಿ ಮಾಡು ವುದೋ ಎಂದು ಮನಸ್ಸಿನಲ್ಲಿ ಚರ್ಚಿಸಿದ.

ಡಾಕ್ಟರ್ ಸ್ಪೆಕ್‌ರಿಗೆ ಈ ಸಮಸ್ಯೆ ತಿಳಿಯದಿರಲಿಲ್ಲ. ತಾವು ಮ್ಯಾನೇಜರ ನಿಗೆ ಈಗ ಎಷ್ಟು ಹಣ ಕೊಟ್ಟರೂ—ಸರಕನ್ನು ಕಳಿಸುವುದು ಸಾಧ್ಯವಿಲ್ಲದುದ ರಿಂದ–ಆ ಹಣ ಕೇವಲ ಉಡುಗೊರೆಯ ರೂಪದಲ್ಲೇ ಸಿಗುವುದೆಂದು ಅವನಿಗೆ

ಹೇಳಿದರೆ ಅವನೇನು ಭಾವಿಸಬಹುದೋ, ಎಂದು ಯೋಚಿಸಿ ಅವರು ಒಳಗಿಂದೊಳಗೆ ನಕ್ಕರು. ಅವರಿಗೆಂದೂ ಸರಕು ಸಿಕ್ಕದು ....

"ಸರಿ, ಡಾಕ್ಟರ್ ...." ಮ್ಯಾನೇಜರ್ ತಾನು ಬ್ಲಾಟಿಂಗ್ ಕಾಗದದ ಮೇಲೆ ಮಾಡಿದ ಕೆಲವು ಲೆಕ್ಕಗಳನ್ನು ನೋಡುತ್ತ ಕೊನೆಗೆ, "ನಿಮಗೆ ಒಳ್ಳೆಯ ಬೆಲೆಗೆ ಮಾರಬೇಕೆಂಬುದು ನನ್ನ ಇಚ್ಛೆ. ನೀವು ನನ್ನ ಗಿರಾಕಿ". ಅವನು ಪ್ರಾಮಾಣಿಕತೆಯನ್ನು ನಟಿಸುತ್ತ ಡಾಕ್ಟರರನ್ನು ನೋಡಿ, ಮತ್ತೆ ತನ್ನ ಅಸಾಧ್ಯ ನಿಪುಣತನವನ್ನು ಮರೆಮಾಡಲಿಕ್ಕಾಗಿಯೇ ಎಂಬಂತೆ ಕೆಳಗೆ ನೋಡಿದ. "ಏನು ... ಸರಿ, ನಿಮಗೆ ಅದನ್ನು—ನಿಮ್ಮ ಮನೆಗೇ ಸಾಗಿಸಿ ಕೊಡುತ್ತೇನೆ — ಕಿಲೋವಿಗೆ .... ಒಂದು .... ಕ್ರೌನ್ ಪ್ರಕಾರ? ಹೇಗೆ, ಡಾಕ್ಟರ್, ಒಪ್ಪಿಗೆಯೆ?" ಎಂದು ಅವನು ಕೈಗಳೆರಡನ್ನೂ ತಿಕ್ಕುತ್ತ ಕಣ್ಣರಳಿಸಿ ಪ್ರಶ್ನಿಸಿದನು.

ಅದು ಲೋಕದಲ್ಲಿಲ್ಲದ ಕ್ರಯವೆಂದು ಅವರಿಬ್ಬರೂ ತಿಳಿದಿದ್ದರಲ್ಲದೆ, ಅದು ತಮಗಿಬ್ಬರಿಗೂ ಗೊತ್ತಿದೆಯೆಂದು ಅರಿತಿದ್ದರು. ತಮಗೆ ಇನ್ನು ಮುಂದೆ ಮರದ ಹುಡಿಯ ಆಗತ್ಯವಿಲ್ಲವೆಂಬುದನ್ನು ಡಾಕ್ಟರರು ಮಾತ್ರ ನೆನೆಸಿದರು.

ಅವರು ಕೋಪದಲ್ಲಿ ತಮ್ಮ ಹಣದ ಚೀಲವನ್ನು ನೋಡಿದರು

"ಕೇವಲ ಮರದ ಹುಡಿಗಾಗಿ ಐನೂರು ಕ್ರೌನುಗಳನ್ನು ಕೊಡುವುದೆಂದರೆ ದೊಡ್ಡ ವಿಷಯ ...." ಎಂದವರು ಗೊಣಗುಟ್ಟಿದರು.

ಮ್ಯಾನೇಜರ್ ಅವಸರದಲ್ಲಿ ಅವನ ಉದಾರತೆಯ ಪ್ರತೀತಿಗೆ ಆ ಅವಸರ ತಕ್ಕುದಾಗಿರಲಿಲ್ಲ—"ಹಾಗಾದರೆ," ನಾನು ಹೇಳುತ್ತೇನೆ. ನಾನು ಬೆಲೆಯನ್ನು ಇನ್ನು ಕಡಿಮೆ ಮಾಡುತ್ತೇನೆ, ಡಾಕ್ಟರ್. (ಆಸ್ಪತ್ರೆಯಿಲ್ಲದೆ, ಏನೆಂದರೂ, ನಾವು ಏನು ಮಾಡಬಲ್ಲೆವು? ಅದನ್ನು ಆಲೋಚಿಸಬೇಕು, ಅಲ್ಲವೆ?) ನೀವು ಒಂದು ಸಾವಿರ ಕಿಲೋಗಳನ್ನು ಪಡಕೊಂಡರೆ—ಅದನ್ನು ಒಮ್ಮೆಲೇ ಕೊಡಲಾಗುವುದಿಲ್ಲ; ನನ್ನ ಮಿಲ್ಲು ಸಣ್ಣದಾದ್ದರಿಂದ ಅದನ್ನು ನಾವು ಸಂಗ್ರಹಿಸಿದಂತೆ, ಹಲವು ಕಂತುಗಳಲ್ಲಿ ಕೊಡುತ್ತೇನೆ. ನಾನು ನಿಮಗೆ ಬೆಲೆ ಬಹಳ ಕಡಿಮೆ ಮಾಡುತ್ತೇನೆ. ಒಂದು ಸಾವಿರ ಕಿಲೋ ತೆಗೆದುಕೊಳ್ಳಿರಿ, ನಾನದನ್ನು—ಏಳ್ನೂರೈವತ್ತಕ್ಕೆ ಕೊಡುತ್ತೇನೆ. ಹೇಗೆ, ಆಗಬಹುದೇ!"

ಡಾಕ್ಟರ್ ಸ್ಪೆಕ್ ನಸುನಕ್ಕರು.

"ಅದನ್ನು ಆರ್ನ್ನೂರು ಮಾಡಿ. ಅಥವಾ—ನಾನು ಏನೆಂದು ಹೇಳಲಿ? ನಾಲ್ಕುರೈವತ್ತಕ್ಕೆ ಖರೀದಿ ಪಟ್ಟಿಯನ್ನು ತಯಾರಿಸಿರಿ. ಉಳಿದ ನೂರೈವತ್ತು ನಗದಿಯಾಗಿ ಕೊಡುತ್ತೇನೆ ಆಗದೆ?"

"ಆಯಿತು!" ಎಂದು ಮ್ಯಾನೇಜರ್ ಹೇಳಿದ, ತಾನು ತನ್ನದು ಎಂಬ ಸ್ವಾರ್ಥದ ತತ್ವವನ್ನು ಒಂದು ಜನಾಂಗದಲ್ಲಿ ಬೆಳೆಸಲು ಕಮ್ಯುನಿಸಮ್ಮನ್ನು ಮೀರಿಸುವ ಸಂಸ್ಥೆ ಬೇರೊಂದಿಲ್ಲವೆಂದು ಚಿಂತಿಸುತ್ತಾ, ಡಾಕ್ಟರ್ ಸ್ವೆಕ್ ಆರ್ನ್ನೂರು ಕ್ರೌನ್‌ಗಳ ನೋಟುಗಳನ್ನು ಲೆಕ್ಕಮಾಡಿದರು.

ಮ್ಯಾನೇಜರನು ಡಾಕ್ಟರರ ಕೈಯ್ಯನ್ನು ಚೆನ್ನಾಗಿ ಕುಲುಕಿ ಅವರೊಡನೆ ರೈಲು ಮಾರ್ಗದತನಕ ನಡೆದು, ಪುನಃ ಅವರ ಕೈಕುಲುಕಿ ಹಿಂದೆ ಹೋದನು. ಅವರಿಗೆ ಪುನಃ ತಮ್ಮ ಕಣ್ಣುಗಳನ್ನು ಹೊರಳಿಸಿ ಮುಖ್ಯವಾದ ಹಾಗು ಕವಲು ರೈಲು ಮಾರ್ಗ ನೋಡಲು ಸಂದರ್ಭ ದೊರಕಿತು. ಅವುಗಳಿನ್ನು ಅಡ್ಡಿ ರಹಿತವಾಗಿ, ಸ್ಪಷ್ಟವಾಗಿದ್ದುವು.

ಸ್ವೆಕ್ ತಮ್ಮ ಕಾರಿಗೆ ಹತ್ತಿ ವೇಗವಾಗಿ ತಮ್ಮ ಮನೆಗೆ ತೆರಳಿದರು. ಅವರಿಗೆ ಮತ್ತು ಅವರ ಕುಟುಂಬಕ್ಕೆ ಸಮಯ ಸನ್ನಿಹಿತವಾಗುತ್ತಿತ್ತು.

ಅವರ ಹೆಂಡತಿಗೆ ಸ್ಪಷ್ಟವಾಗಿ ಎಲ್ಲವನ್ನು ಹೇಳಿದ್ದರು. ಅವರ ಮೂವರು ಹುಡುಗರೂ ಅವರ ಮಾತನ್ನು ಮೀರುವವರಲ್ಲ.

ಡಾಕ್ಟರರ ಕೂಟ ಹಾಸ್ಲೊವಿನಲ್ಲಿ ರೈಲು ಹತ್ತಬೇಕೆಂದು ಮುಂದಾಳು ನಿಶ್ಚಯಿಸಿದ್ದ. ಅದು ಫ್ರಾಂಜೆನ್ಸ್‌ಬಾಡ್ ಮತ್ತು ಆಸ್ಚ್‌ಗಳ ಮಧ್ಯದ ನಿಲ್ದಾಣ. ಮತ್ತೆ ಡಾಕ್ಟರ್ ಸ್ವೆಕ್ ತನ್ನ ಕುಟುಂಬವನ್ನು ನಿಲ್ದಾಣದ ಪರಿಶೀಲನೆ ಮುಗಿದೊಡನೆ ಆಸ್ಚ್‌ನಿಂದ ಹಾಸ್ಲೊವಿಗೆ ಕರೆದುಕೊಂಡು ಹೋಗುವೆನೆಂದು ತನ್ನ ಪತ್ನಿಯೊಡನೆ ಹೇಳಿದ್ದರು.

ಆಸ್ಚ್ ರೈಲ್ವೆ ನಿಲ್ದಾಣದಿಂದ ಹೊರಡುವಾಗ ಮನೆಯಲ್ಲಿ ತೊಂದರೆ ಇರಬಹುದೆಂಬುದನ್ನು ಅವರು ತಿಳಿದಿರಲಿಲ್ಲ. ತನ್ಮಧ್ಯೆ ಕೊನ್ವಲಿಂಕಾ ದಿಗಿಲು ಬೀಳುವಂಥಹ ದೊಡ್ಡ ಗಂಡಾಂತರದಲ್ಲಿ ಸಿಕ್ಕಿ ಬಿದ್ದಿದ್ದ.

* * *

ಆ ಸೆಪ್ಟೆಂಬರ 11 ರಂದು ಬೆಳಗ್ಗೆ ಆತನಕ ಎಲ್ಲವೂ ಯೋಜನಾಬದ್ಧವಾಗಿಯೇ ನಡೆದಿತ್ತು. ಕೊನ್ವಲಿಂಕಾ ತನ್ನ ರೈಲು ಬಂಡಿಯನ್ನು ಎಗರ್

ಸಿಲ್ದಾಣಕ್ಕೆ ತಂದು ಪ್ಲಾಟ್‌ಫಾರ್ಮಿನಲ್ಲಿ ರೈಲು ಬಂಡಿ 185 ಇದ್ದುದನ್ನು ನೋಡಿದ. ಅವನಿಗೆ ಆಗ, ಸ್ವಲ್ಪ ಸಮಯದಲ್ಲಿ ಒದಗಲಿದ್ದ ಗಂಡಾಂತರದ ಸುಳಿವು ಕೂಡಾ ತಿಳಿದಿರಲಿಲ್ಲ.

ತನ್ನ ಎಂಜಿನ್ನಿನ ಬೆಂಕಿಯನ್ನು ಅವನು ನಂದಿಸಿದ.

ರೈಲು ಬಂಡಿ 185 ರ ಮುಂಭಾಗದ ಬಂಡಿಗಳು ಬೇರ್ಪಡಿಸಲ್ಪಟ್ಟು ಇನ್ನೊಂದು ಜತೆ ಕಂಬಿಗಳಲ್ಲಿರುವುದನ್ನು ನೋಡಿದನು. ಅದರ ಕೊನೆಯ ಮೂರು ಗಾಡಿಗಳು—ಇನ್ನೊಂದು ತಾಸಿನಲ್ಲಿ ಪಲಾಯನ ಮಾಡುವವರನ್ನು ಕೊಂಡು ಹೋಗಲಿದ್ದ ಗಾಡಿಗಳು—ಕೊನ್ಸಲಿಂಕಾನ ಎಂಜಿನ್ನಿಗೆ ಜೋಡಿಸಿ ಆಸ್ಟ್‌ಗೆ ಹೋಗಲು ಸಿದ್ಧವಾಗಿದ್ದುವು.

ಕೊನ್ಸಲಿಂಕಾ ಬ್ರೇಕನ್ನೊತ್ತುತ್ತ, ರೈಲು ಬಂಡಿಯನ್ನು ನಿಲ್ಲಿಸುವಾಗ ಎದುರಿನ ಪ್ಲಾಟ್‌ಫಾರ್ಮಿನಲ್ಲಿದ್ದ ಪ್ರಯಾಣಿಕರಲ್ಲಿ ಎಷ್ಟು ಜನ ಪಲಾಯನ ಮಾಡುವವರಿದ್ದಾರೆಂಬುದನ್ನು ನೋಡಿದನು.

ಅವನಿಗೆ ಪರಿಚಯವಿದ್ದ ಮುಖಗಳು ಕಾಣಸಿಗಲಿಲ್ಲ. ಆದರೆ ಅಲ್ಲಿ ನಿಲ್ಲಲು ಅವನಿಗೆ ಸಮಯವಿರಲಿಲ್ಲ. ಕೊನ್ಸಲಿಂಕಾನ ಎಂಜಿನನ್ನು ನಡೆಸಲು ಬಂದ ಇನ್ನೊಬ್ಬ ಅದನ್ನು ಹತ್ತಲು ಪ್ರಯತ್ನಿಸುತ್ತಿದ್ದ. ಕೊನ್ಸಲಿಂಕಾ—ನಿಶ್ಚಿತ ಸಮಯಕ್ಕೆ ಸರಿಯಾಗಿಯೇ ಯಾವಾಗಲೂ ಕೆಲಸಮಾಡುತ್ತಿದ್ದರೂ, ಇಂದು ಪ್ರತಿ ನಿಮಿಷವೂ ನಿಶ್ಚಿತ ಕಾರ್ಯಕ್ರಮಗಳನ್ನನುಸರಿಸುತ್ತ—ಕೆಳಗಿಳಿದು ಇನ್ನೊಂದು ಎಂಜಿನನ್ನು ತರಲು ತಯಾರುಮಾಡುತ್ತಿದ್ದ.

ಕಲಬ್ಜನೂ ಅವನ ಹಿಂದೆಯೇ ಬಂದ. ಅವರಿಬ್ಬರೂ ಕಂಬಿಗಳ ಸಂಕೀರ್ಣವಾದ ಬಲೆಗಳನ್ನು ದಾಟುತ್ತ ಎಂಜಿನನ್ನು ತಿರುಗಿಸುವಲ್ಲಿಗೆ ಬಂದರು. ಕೇವಲ ಮೂರು ಗಾಡಿಗಳನ್ನು ಮಾತ್ರ ರೈಲು ಬಂಡಿ 185 ಆಸ್ಟ್‌ಗೆ ಕೊಂಡು ಹೋಗಬೇಕಾಗಿದ್ದುದರಿಂದ, ಅದರ ಎಂಜಿನು ಅಷ್ಟು ಶಕ್ತಿಯುಳ್ಳದ್ದಾಗಿರಲಿಲ್ಲ. ಆದ್ದರಿಂದ ಅದರಲ್ಲಿ ಬೇಕಾದುದಕ್ಕಿಂತ ಬಹಳ ಹೆಚ್ಚು ಪ್ರಮಾಣದಲ್ಲಿ ಉಗಿಯ ಒತ್ತಡವನ್ನುಂಟುಮಾಡಿದರೇನೇ, ವೇಗದಲ್ಲಿ ಗಡಿ ದಾಟಿ ಹೋಗಿ ಬಿಡಬಹುದೆಂದು ಕೊನ್ಸಲಿಂಕಾನು ಯೋಚಿಸಿದನು.

ಅವರಿಬ್ಬರೂ, ಎಂಜಿನನ್ನು ತಿರುಗಿಸುವಲ್ಲಿಗೆ ಹೋದರು. ಅವರ ಎಂಜಿನು ಆಗಲೇ ಉಗಿ ಕಾರುತ್ತಿತ್ತು. ಅದನ್ನು ಕಂಡು ಕೊನ್ಸಲಿಂಕಾನಿಗೆ

ಸಂತೋಷವಾದರೂ, ಈ ಕೊನೆಯ ಮುಖ್ಯವಾದ ಘಟ್ಟವನ್ನು ಯೋಚಿಸಿ ಅವನಿಗೆ ತುಸು ಅಂಜಿಕೆಯಾಗದಿರಲಿಲ್ಲ.

ಅವನು ಎಂಜಿನಿನ ಬಳಿಗೆ ಹೋಗಿ, ಅದರಮೇಲೆ ಚತುರತೆಯಿಂದ ಹತ್ತಿ ಕಲಬ್ಜನಿಗೂ ಕೈನೀಡಿ ಅವನನ್ನು ಮೇಲಕ್ಕೆ ಎಳೆದ.

ಎಂಜಿನನ್ನು ನಡೆಸುವ ಉಪಕರಣಗಳನ್ನೆಲ್ಲ ಕೊನ್ವಲಿಂಕಾ ನೋಡಿದ. ಉಗಿಯ ಒತ್ತಡವೆಷ್ಟಿದೆಯೆಂದು, ಮಾಪಕದಲ್ಲಿ ನೋಡಿಕೊಂಡು ಎಂಜಿನನ್ನು ನಡೆಸುವ ತ್ರೋಟ್ಲ್ ಲಿವರನ್ನು ಹಿಡಿದ.

"ಮೇಲೆ ಉಗಿಯು ಬುಸುಗುಟ್ಟುತ್ತ, ಕಬ್ಬಿಣದ ಭಾಗಗಳು ಅರೆಯುವ ಶಬ್ದವನ್ನುಂಟುಮಾಡುತ್ತಿದ್ದಂತೆ ಅವನು ಹೊರಗೆ ಬಾಗಿ ನೋಡಿ ನಾವು ಹೋಗೋಣ ಎಲ್ಲ ಸರಿಯಿದೆ! ನಾವು ಹೋಗೋಣ ...!" ಎಂದು ಕಲಬ್ಜನೊಡನೆ ಗಟ್ಟಿಯಾಗಿ ಹೇಳಿದನು.

ಎಂಜಿನಿನ ಪಿಸ್ಟನ್‌ಗಳು ಮೆಲ್ಲನೆ ಚಕ್ರಗಳನ್ನು ದೂಡತೊಡಗಿದುವು. ಎಂಜಿನು ಹೊರಗೆ ಬಂತು.

ಮತ್ತೆ ಇಪ್ಪತ್ತು ಅಡಿ ದೂರದಲ್ಲಿ ಎಂಜಿನನ್ನು ತಿರುಗಿಸುವ ತಿರುಗು ಮೇಜು ಯಂತ್ರವಿತ್ತು. ಅದರ ಬಳಿಗೆ ಎಂಜಿನು ಹಾಯುತ್ತಿದ್ದಂತೆಯೇ ಅದರ ಕೆಲಸಗಾರ ಅದರ ಮುಂದೆ ನಿಂತುಕೊಂಡು ಜೋರಾಗಿ ಕೈಗಳನ್ನು ಬೀಸುತ್ತಿದ್ದ.

ಕೊನ್ವಲಿಂಕಾ ಎಂಜಿನನ್ನು ನಿಲ್ಲಿಸಿ, ಕೆಳಗೆ ಅವನು ಏನೆನ್ನುತ್ತಾನೆಂದು ಕಿವಿಗೊಟ್ಟ. ಆದರೆ ಇತರ ಎಂಜಿನುಗಳ ಶಬ್ದದಿಂದಾಗಿ ಕೊನ್ವಲಿಂಕಾನಿಗೆ ಅವನು ಹೇಳುತ್ತಿದ್ದುದು ಕೇಳಲಿಲ್ಲ. ಕೊನೆಗೆ ಕೊನ್ವಲಿಂಕಾ ಕೆಳಗೆ ಹಾರಿ ಅವನ ಬಳಿಗೆ ಹೋದ.

"ಏನು ಕೆಟ್ಟುಹೋಗಿದೆ ಕಾಮ್ರೇಡ್?" ಎಂದು ಕೊನ್ವಲಿಂಕಾ ಅವನ ಬೊಬ್ಬೆಯನ್ನು ಕೇಳಿ ಕುತೂಹಲದಿಂದ ಪ್ರಶ್ನಿಸಿದ. "ಯಾವುದಾದರೂ ಹಾಳಾಗಿದೆಯೆ ..?" ಎಂದು ಅವನು ನಿರಾಶೆಯಿಂದ ಮುಂದರಿದ. (ಈಗ.... ಏನಾದರೂ ಸಂಭವಿಸುತ್ತದೆ! ಈಗ .... ಯಾವ ಸಮಯದಲ್ಲೂ ಆಗ ದಿದ್ದುದು !).

"ನಿಮಗೆ ಸ್ವಲ್ಪ ತಡವಾಗಲಿದೆ," ಎಂಜಿನನ್ನು ತಿರುಗಿಸುವ ಯಂತ್ರದ ಆಪರೇಟರ್ ಕೊನ್ವಲಿಂಕಾ ಅವನ ಬಳಿಗೆ ಓಡಿ ಬಂದಾಗ ಹೇಳಿದ. ಆಪರೇ

ಟರ್‌ಗೆ ಆಗಿದ್ದ ಹೆದರಿಕೆ ನಿಂತಿತ್ತು. ಮೋಟರು ಕೆಟ್ಟುಹೋಗಿದೆ ....ಅಷ್ಟೆ."

"ಯಾವ ಮೋಟರ್ ?" ಕೊನ್ಸಲಿಂಕಾ ತನ್ನ ಹಣೆಯ ಬೆವರನ್ನು ಬಟ್ಟೆಯ ಚಿಂದಿಯಲ್ಲಿ ಒರಸುತ್ತ ಕೇಳಿದ.

ಆಪರೇಟರ್ ತಲೆಯಲ್ಲಾಡಿಸಿದ.

"ಈ ಟರ್ನ್ ಟೇಬಲ್‌ಗೆ ಪವರ್‌ಕೊಡುವ ಮೋಟರ್ ಈಗೀಗ ಎಲ್ಲವೂ ಕೆಟ್ಟುಹೋಗುತ್ತಿದೆ. ಈ ಕೆಟ್ಟ ಮೋಟರಂತೂ ಆಗಾಗ ನಿಲ್ಲುತ್ತಿದೆ."

ಕೊನ್ಸಲಿಂಕಾ ಹೆದರಿಕೆಯಿಂದ ಹಲ್ಲು ಕಡಿದು ಅವನನ್ನು ನೋಡಿದನು.

"ಅಷ್ಟು ತಾನೇ! ನೀನೆಂದುದು?" ಕೊನ್ಸಲಿಂಕಾ ಗಟ್ಟಿಯಾಗಿ.... ಅದು ಹಾಳಾಗಿ ಹೋಗಲಿ, ಮಹಾರಾಯಾ! ನಾನು ನನ್ನ ಕೆಲಸವನ್ನು ಸರಿಯಾಗಿ ಮಾಡುತ್ತಿರುವಂತೆ ನೀನೂ ನಿನ್ನ ಕೆಲಸವನ್ನೇಕೆ ಸರಿಯಾಗಿ ಮಾಡುವುದಿಲ್ಲ? ನೀನು ಅಲ್ಲಿ ನಿಂತುಕೊಂಡು ಮೋಟರ್ ಕೆಟ್ಟುಹೋಗಿದೆ ಎನ್ನುತ್ತೀ—ನಾನು ಈಗ ಒಂದು ರೈಲು ಬಂಡಿಯನ್ನು ಹೊರಗೆ ಕೊಂಡು ಹೋಗಲಿದ್ದೇನೆ—ಅದಕ್ಕೆ ಇನ್ನು ಕೇವಲ ಐದು ನಿಮಿಷಗಳು ಮಾತ್ರ ಉಳಿದಿವೆ!"

ಆಪರೇಟರನೂ ಕೋಪದಿಂದ, ಅದು ನನ್ನ ತಪ್ಪಲ್ಲ! ಮೋಟರ್ ಕೆಟ್ಟುಹೋಗಿ ನಡೆಯದಿದ್ದರೆ ನಿಜವಾಗಿಯೂ, ನಾನೇನು ಮಾಡಬಹುದು.

ಕೊನ್ಸಲಿಂಕಾ ಸಮಾಧಾನಪಡಲು ಯತ್ನಿಸಿದ. ಅವನು ತುಸು ನಮ್ರತೆಯಿಂದ, "ಕಾಮ್ರೇಡ್, ಕ್ಷಮಿಸು. ಇಲ್ಲ.... ನಿನ್ನಿಂದಾಗದು, ನಿಜ. ಆದರೆ ... ಏನು ಅದೃಷ್ಟ!"

ಆಪರೇಟರ್ ಅವನನ್ನು ನೋಡಿದನು. ಜೆಕೊಸ್ಲೋವಾಕಿಯಾದಲ್ಲಿ ಮಾತ್ರವಲ್ಲ, ಎಲ್ಲಿಯೂ ರೈಲು ಬಂಡಿಯನ್ನು ನಡೆಸುವ ಸಿಬ್ಬಂದಿಗೂ, ನಿಲ್ದಾಣ ಸಿಬ್ಬಂದಿಗೂ ಹಿಂದಿನಿಂದಲೂ ವಂಶಪರಂಪರೆಯಾಗಿ ವೈಷಮ್ಯ ಬೆಳೆದುಬಂದಿದೆ. ಆಪರೇಟರನಿಗೆ, ಕೊನ್ಸಲಿಂಕಾನಿಗೆ ತಡವಾಯಿತೆಂಬ ಸಹಾನುಭೂತಿಯಿರಲಿಲ್ಲ ಈ ಹಾಳಾದ ಡ್ರೈವರನು ತಾವು ದೇವರೆಂದು ಭಾವಿಸಿಕೊಳ್ಳುತ್ತಾರೆ!

ಆಪರೇಟರ್ ನಿರ್ಲಕ್ಷತೆಯಿಂದ "ನನಗೆ ಇದಕ್ಕೇನೂ ಮಾಡಲು ಸಾಧ್ಯವಿಲ್ಲ, ಕಾಮ್ರೇಡ್. ಸ್ವಲ್ಪ ವಿಶ್ರಾಂತಿ ಪಡೆಯಿರಿ! ಇದಕ್ಕೆ ಇನ್ನು ಎರಡು ತಾಸುಗಳು ಬೇಕಾಗಬಹುದು. ನೀವು ಸ್ವಲ್ಪ ಕಾಫಿ ಕುಡಿದು ನಿದ್ರಿಸ ಬಹುದು. ಅವನು ಕೊನ್ಸಲಿಂಕಾನ ಬಿಳುಪಾದ ಮುಖವನ್ನೂ ನಡುಗುತ್ತಿದ್ದ

ತುಟಿಗಳನ್ನೂ ನೋಡಿ ಮತ್ತೆ, ನೀವೇಕೆ ಇಷ್ಟು ಅವಸರದಲ್ಲಿದ್ದೀರಿ? ಆಸ್ಸ್‌ಗೆ ಹೋಗುವ ಪ್ರಯಾಣಿಕರು ಹೇಗೆ ಹೋಗುವರೋ ಎಂದು ಚಿಂತಿಸುತ್ತಿದ್ದರೆ, ಅವರಿಗೆ ನೀವು ತಂದ ಎಂಜಿನ್ ಇದೆ.

"ನಾವು ಅದನ್ನು ಪ್ರೇಗಿನಿಂದ ಬಂದ ಮೂರು ಗಾಡಿಗಳಿಗೆ ಜೋಡಿಸಿ, ಇನ್ನೊಬ್ಬ ಡ್ರೈವರನ ಮೂಲಕ ಆಸ್ಸ್‌ಗೆ ಕಳುಹಿಸಬಲ್ಲೆವು."

ಅವರು ಈ ಸಂಗತಿಯನ್ನು ಯಾರ್ಡ್ ಮಾಸ್ಟರಿಗೆ ಕಳುಹಿಸಿಲು "ಅಷ್ಟರವರೆಗೆ ಇಲ್ಲೇ ಸ್ವಲ್ಪ ಹೊತ್ತು ನಿಂತಿರಿ. ಗಾಬರಿ ಪಡಬೇಡಿ..."

ಹೀಗೆನ್ನುತ್ತ ಅವನು ನಡೆದೇ ಬಿಟ್ಟನು. ಕೊನ್ವಲಿಂಕಾ ಹೆದರಿಕೆಯಲ್ಲಿ ತುಟಿ ಕಚ್ಚಿದ. ತನ್ನ ಗಾಬರಿಯನ್ನು ಕಂಡು ಆಪರೇಟರ್ ಸಂದೇಹಪಟ್ಟನೋ ಏನೋ ಎಂದು ಅವನು ಆಶ್ಚರ್ಯಪಟ್ಟ. ತನ್ನ ಕಳವಳವನ್ನು ತೋರ್ಪಡಿಸ ಕೂಡದೆಂದು ಅವನು ನಿಶ್ಚಯಿಸಿದ—ಇಲ್ಲವಾದರೆ ಟರ್ನ್ ಟೇಬಲ್ ಹಾಳಾದುದಕ್ಕಿಂತಲೂ ಬಹಳ ಹೆಚ್ಚಿನ ಹಾನಿ ತಮ್ಮ ತಂತ್ರಕ್ಕೆ ಆಗಬಹುದೆಂದು ಅವನಿಗೆ ಹೊಳೆಯಿತು. ಇದು ತನ್ನದೇ ತಪ್ಪು! ಈ ತನಕವೂ ಒಂದಿಷ್ಟೂ ತಡೆಯಿಲ್ಲದೆ ನಡೆದು ಬಂದ ಈ ಉಪಾಯವನ್ನು ದುರದೃಷ್ಟಕ್ಕೆ ಸಿಲುಕ ಬಾರದೆಂದು ಅವನು ನಿರ್ಧರಿಸಿದ.

ಅವನ ಹಿಂದೆ, ಪ್ಲಾಟ್‌ಫಾರ್ಮಿನಲ್ಲಿ — ಅವನನ್ನು ವಿಶ್ವಾಸದಿಂದ ಕಾಯುತ್ತ ತಮ್ಮ ಸರ್ವಸ್ವವನ್ನೂ ಅವನ ವಶದಲ್ಲಿ ಬಿಟ್ಟ—ಜನರು, ಅವನು ಜರೋಸ್ಲಾವ್ ಕೊನ್ವಲಿಂಕಾ ಪುರುಷತ್ವವನ್ನು ವ್ಯಕ್ತಪಡಿಸಿ, ತನ್ನ ಕೆಲಸವನ್ನು ಧೈರ್ಯದಿಂದಮಾಡಿ ಮುಗಿಸುವನೆಂಬ ಸಂಪೂರ್ಣ ವಿಶ್ವಾಸದಿಂದ ಕಾದಿದ್ದರು.

ಮನುಷ್ಯನು ತನ್ನ ಜೀವನದಲ್ಲಿ ಕೆಲವು ಸಂದರ್ಭಗಳಲ್ಲಾದರೂ ಅಸಾಧ್ಯತೆಯನ್ನು ಎದುರಿಸಬೇಕಾಗುತ್ತದೆಂದು ಕೊನ್ವಲಿಂಕಾ ಯೋಚಿಸಿದನು. ಹಾಗಿದ್ದರೂ, ನಿಷ್ಫಲವಾಗುವ ಸಂಭವವು, ಸಾಧಿಸಬೇಕಾಗಿದ್ದ ಕೆಲಸಕ್ಕಿಂತಲೂ ಹೆಚ್ಚು ಅಸಾಧ್ಯವೆಂದು ಅವನು ಭಾವಿಸಿ, ತಾನು ಹೇಗಾದರೂ ತನ್ನ ಕೆಲಸದಲ್ಲಿ ಜಯಶೀಲವಾಗಬಹುದೆಂದು ಸುಮ್ಮನಾದನು.

ಫ್ರಾಂಜೆನ್ಸ್‌ಬಾಡ್ ಮತ್ತು ಹಾಸ್ಲೋವ್‌ಗಳಲ್ಲಿ ಮತ್ತು ಪ್ಲಾಟ್‌ಫಾರ್ಮಿನಲ್ಲಿ ಕಾಯುತ್ತಿದ್ದ ಜನರನ್ನು ಯೋಚಿಸಿದಾಗ ಅವನಲ್ಲಿ ಧೈರ್ಯವು ತುಂಬಿ ಬಂತು.

ದೈವೀಕ ಪ್ರೇರಣೆಗೋಸ್ಕರ ಕಣ್ಣು ಹೊರಳಿಸಿ ತನ್ನ ಸುತ್ತಲೂ ನೋಡಿಕೊಂಡ, ಆಗ ಅವನು ಯಾರ ಸಹಾಯವನ್ನು ಬಯಸಲಿಲ್ಲ.

ಎದುರಿನಿಂದ ನಿಲ್ದಾಣದ ಹತ್ತುಮಂದಿ ಕೆಲಸಗಾರರು ತಮ್ಮ ಕೆಲಸದ ಉಪಕರಣಗಳನ್ನು ಹೆಗಲಮೇಲೆ ಹೊತ್ತುಕೊಂಡು ಬರುತ್ತಿದ್ದದನ್ನು ಕಂಡು ಕೊನ್ನಲಿಂಕಾನ ಆಸೆ ಒಮ್ಮೆಲೇ ಕೆರಳಿತು.

ಅವನು ಗಟ್ಟಿಯಾಗಿ ಕೂಗುತ್ತ, "ಒಹ್ಹೊ! ಒಹ್ಹೋ! ನೀವೆಲ್ಲರೂ ಇಲ್ಲಿಗೆ ಬನ್ನಿರಿ!"

ಅವನು ಕೈಗಳಿಂದಲೂ ಅವರನ್ನು ಬರಲು ಸಂಜ್ಞೆಮಾಡಿದ. ಅವರು ನಿಂತು ಅವನನ್ನು ನೋಡಿದರು.

ಕೊನ್ನಲಿಂಕಾ ಅವರ ಬಳಿಗೋಡಿ ಬುಸುಗುಟ್ಟುತ್ತ,

"ದಯವಿಟ್ಟು ನನಗೆ ಸ್ವಲ್ಪ ಸಹಾಯಮಾಡಿರಿ. ನಾನು ಇಲ್ಲಿ ಬಹಳ ತೊಂದರೆಯಲ್ಲಿ ಸಿಕ್ಕಿಬಿದ್ದಿದ್ದೇನೆ...."

"ನಿಮ್ಮನ್ನು ನೋಡುವಾಗ ಹಾಗೆ ತೋರುತ್ತದೆ", "ಏನಾಗಿದೆ....?" ಎಂದು ಅವರಲ್ಲೊಬ್ಬನು ನಸುನಗುತ್ತ ಕೇಳಿದನು.

ಕೊನ್ನಲಿಂಕಾ ವಿವರಿಸಿದ, ಮತ್ತು ಆ ಮನುಷ್ಯನು ನೀವೇಕೆ ಚಿಂತಿಸಬೇಕೆಂದು ಕೇಳುವುದರ ಮೊದಲೇ, ಅವನು ನಮ್ರಭಾವದಿಂದ, "ಕೆಲಸದ ಪಟ್ಟಿಯಲ್ಲಿ ಸ್ವಲ್ಪ ಬದಲಾವಣೆಯಾಗಿದೆ. ನಾನು ಅಸ್ಟ್‌ಗೆ ನಿಜವಾಗಿಯೂ ಈ ಬಂಡಿಯನ್ನು ಕೊಂಡು ಹೋಗಬೇಕಾಗಿಲ್ಲ. ಅಂದರೆ, ಇವತ್ತು ನನ್ನ ದಿನವಲ್ಲ. ಆದರೆ.... ಗುಪ್ತ ಪೋಲೀಸರು ರೈಲು ಬಂಡಿ ಕಳಿಸುವವನು ಕರೆದುಕೊಂಡು ಹೋದರು, ಮತ್ತೆ ... ಒಹೊ, ಅದು ಬಹಳ ದೊಡ್ಡ ಕತೆ. ಆದರೆ.. .ದಯವಿಟ್ಟು ಒಮ್ಮೆ ನನಗೆ ಸಹಾಯಮಾಡಿರಿ...."

ಗುಪ್ತ ಪೋಲೀಸರಿಗೆ ಸಂಬಂಧಿಸಿದ್ದ ಕತೆಯನ್ನು ಕೇಳಲು, ಅದು ದೊಡ್ಡದಾಗಿದ್ದರೂ ಚಿಕ್ಕದಾಗಿದ್ದರೂ, ಅವರು ಇಷ್ಟಪಡುತ್ತಿದ್ದಿಲ್ಲ.

ಅವರು ಕುತೂಹಲದಲ್ಲಿ ಒಬ್ಬರನ್ನೊಬ್ಬರು ನೋಡಿಕೊಂಡರು. ರೈಲು ಡ್ರೈವರನು, ಹೀಗೆ ಯಂತ್ರ ಕೆಟ್ಟುದರಿಂದಾಗಿ ದೊರೆತ ಅನಿರೀಕ್ಷಿತ ವಿಶ್ರಾಂತಿಯನ್ನನುಭವಿಸುವ ಬದಲು, ರೈಲು ಬಂಡಿಯನ್ನು ಸಕಾಲದಲ್ಲಿ ಕೊಂಡು ಹೋಗಲು ಏಕೆ ಇಚ್ಛಿಸುತ್ತಾನೆಂಬ ಕಾರಣವನ್ನು ಪ್ರತಿಯೊಬ್ಬರೂ ಯೋಚಿಸಿದರು.

ಜೆಕೊಸ್ಲೋವಾಕಿಯಾದಲ್ಲಿ ಇಂದು, ಯಾರಿಗಾದರೂ ಸಹಾಯ ಮಾಡಲು ನಿರಾಕರಿಸಿದ್ದಲ್ಲಿ ತೊಂದರೆಯಾಗಬಹುದೆಂಬ ಪ್ರಜ್ಞೆ ಎಲ್ಲರಲ್ಲೂ ಇದೆ. ಆದರೆ ಅದು ಕಮ್ಯುನಿಸಮ್ಮಿನ ಪ್ರಭಾವದಿಂದ ಪ್ರಚೋದಿತವಾದ ಪ್ರಜ್ಞೆಯಲ್ಲವೆಂಬುದು ವಿಷಾದಕರವಾದ ಸಂಗತಿ. ಆ ಪ್ರಜ್ಞೆ ಕೇವಲ ಮಿಥ್ಯಾರೋಪಕ್ಕೆ ಸರ್ಕಾರದಿಂದ ಸಿಗುತ್ತಿದ್ದ ಪ್ರೋತ್ಸಾಹದ ದೃಷ್ಟಿಯಿಂದಾಗಿ ಹುಟ್ಟಿತ್ತು.

ಒಬ್ಬ ದೀರ್ಘಕಾಯನು ಸಾವಧಾನವಾಗಿ ನಮ್ಮಿಂದೇನಾಗಬೇಕು, ಕಾಮ್ರೇಡ್? ಎಂದು ಕೇಳಿಕೊಂಡನು.

ಕೊನ್ವಲಿಂಕಾ, ಆ ಮನುಷ್ಯನೊಡನಿದ್ದ ಕಬ್ಬಿಣದ ಸನ್ನೆ ಕೋಲನ್ನು ತಟ್ಟಿದನು. ಅದರಿಂದ ಎಂಜಿನು ಇಲ್ಲದಾಗ ಅವರು ಗಾಡಿಗಳನ್ನು ದೂಡು ತ್ತಿದ್ದರು.

ಗುಪ್ತ ಪೋಲೀಸರ ಹೆಸರನ್ನೆತ್ತಿದ್ದುದರಿಂದ ಅವರಿಗೆಲ್ಲರಿಗೂ ಅಧೈರ್ಯ ವಾಗಿತ್ತೆಂಬುದು ಕೊನ್ವಲಿಂಕಾನಿಗೆ ಸ್ಪಷ್ಟವಾಗಿತ್ತು. ಅವನಿಂದ ದೂರ ವಿರಲು ಅವರು ಬಯಸುತ್ತಿದ್ದರು. ತಾವು ಅವನಿಗೊಮ್ಮೆ ಸಹಾಯಮಾಡಿದರೆ ಅವನು ತಮ್ಮಿಂದ ದೂರವಾಗುತ್ತಾನೆಂಬುದೂ ಅವರಿಗೆ ಹೊಳೆಯದಿರಲಿಲ್ಲ.

ಅವರ ಮುಖ ಮುದ್ರೆಯಲ್ಲಿ ವ್ಯಕ್ತವಾಗುತ್ತಿದ್ದ ಆಂತರಿಕ ತಳಮಳ ಕೊನ್ವಲಿಂಕಾನಿಗೆ ಸ್ಪಷ್ಟವಾಗಿ ತೋರುತ್ತಿತ್ತು.

"ಬನ್ನಿ!" ಎಂದು ದೀರ್ಘಕಾಯ ವ್ಯಕ್ತಿಯು ಹೆಗಲಿಗೆ ಅವನು ಕೈಹಾಕಿಕೊಂಡು ಟರ್ನ್‌ಟೇಬಲ್‌ನ ಬಳಿಗೆ ಅವರನ್ನು ಕರೆದುಕೊಂಡು ಹೋದನು. "ಇದು ಕೇವಲ ಒಂದೆರಡು ನಿಮಿಷಗಳ ಕೆಲಸ... ..." ಎಂದು ಅಲ್ಲಿ ಅವರಿಗೆ ತಿಳಿಸಿದ.

ಆ ಕೂಟದಲ್ಲಿ ಒಬ್ಬ ನಾಯಕನಿದ್ದ. ಅವನು ಕೊನ್ವಲಿಂಕಾನಿಗೆ ಸಹಾಯ ಮಾಡಬೇಕೆಂದು ನಿರ್ಧರಿಸಿ, ಎಲ್ಲರ ಹೆಗಲಲ್ಲಿದ್ದ ಸನ್ನೆ ಕೋಲು ಗಳನ್ನೂ ಟರ್ನ್‌ಟೇಬಲ್‌ನ ಅಂಚಿಗೆ ಹಾಕಿನೂಕಲು ಆಜ್ಞಾಪಿಸಿದ, ಟರ್ನ್‌ಟೇಬಲ್ ಚಲಿಸಿತು. ಅವರು ತಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಿ ಬುಸುಗುಟ್ಟುತ್ತ, ಬೆವರು ಸುರಿಸುತ್ತ ಅದರ ರೈಲು ಕಂಬಿಯನ್ನು ಹೊರಗಿನ ಕಂಬಿಗೆ ಜೋಡಿಸುವ ಕೆಲಸವಲ್ಲಿ ಯಶಸ್ವಿಯಾದರು.

ಕೊನ್ಸ್ಪಲಿಂಕಾ ಇವತ್ತು ಕ್ರೌನಗಳ ನೋಟೊಂದನ್ನು ಅದರ ನಾಯಕನ ಕೈಯಲ್ಲಿ ಕೃತಜ್ಞತಾ ಪೂರ್ವಕವಾಗಿ ಕೊಟ್ಟ.

"ಧನ್ಯವಾದ ಗೆಳೆಯರೆ! ನನ್ನ ಲೆಕ್ಕದಲ್ಲಿ ಸ್ವಲ್ಪ ಬಾಯಾರಿಕೆ ಕುಡಿಯಿರಿ......ನಿಮಗೆಲ್ಲರಿಗೂ ಸಾವಿರ ಧನ್ಯವಾದಗಳು!"

ಅವನು ಕಲಬ್ಜನನ್ನು ಎಂಜಿನಿಗೆ ಹತ್ತುವಂತೆ ಸಂಜ್ಞೆಮಾಡುತ್ತ ಅದರ ಬಳಿಗೋಡಿದ. ಎಂಜಿನಿನ ಮೇಲೆ ಅವನು ನೆಗೆದು,, ಬ್ರೇಕನ್ನು ಬಿಟ್ಟು, ತ್ರೋಟಲ್ಲನ್ನು ಮೆಲ್ಲಗೆ ತೆರೆದು, ಎಂಜಿನನ್ನು ನಿಧಾನವಾಗಿ ನಡೆಸುತ್ತ, ಟರ್ನ್ ಟೇಬಲಿನ ಮೇಲೆ ಹೋಗುವಾಗ ಆ ಹತ್ತು ಮಂದಿಯನ್ನು ನೋಡಿ ಕೈಯಾಡಿಸಿದ. ಅಲ್ಲಿಂದ ಎಂಜಿನನ್ನು ಮೆಲ್ಲನೆ ಆ ಮೂರು ಗಾಡಿಗಳತ್ತ ನಡೆಸಿದ.

ಎಂಜಿನ ಗಾಡಿಗಳಿಗೆ ಜೋಡಿಸುವುದನ್ನು ಕ್ಷಣಕಾಲ ಚೆನ್ನಾಗಿ ಪರೀಕ್ಷಿಸಿದ.

ಮರಳಿ ಎಂಜಿನಿಗೆ ಹತ್ತಿ......ಉಗಿಯ ಒತ್ತಡವನ್ನು ನಿಯಂತ್ರಿಸುವ ಒಂದು ಉಪಕರಣವನ್ನು ತಿರುಗಿಸಿ ಉಗಿಯ ಒತ್ತಡದ ಮಾಪಕವನ್ನು ನೋಡಿದ. ಒತ್ತಡ ಏರುತ್ತಿತ್ತು. ಆಸ್ಚ್ ಮತ್ತು ಗಡಿನಾಡಿನ ಮಧ್ಯದಲ್ಲಿದ್ದ ಸಾವಿರದ ನೂರು ಮೀಟರ್ ಅಂತರವನ್ನು ಹಾದು ಹೋಗಲು ಹೆಚ್ಚು ಒತ್ತಡ ಬೇಕಿತ್ತು........

ಕಲಬ್ಜ "ಅದು ಒಳ್ಳೆಯದಾಯಿತು, ಕಾಮ್ರೇಡ್! ಇಂದು ಇಡೀ ದಿನ ನಾವು ಇಲ್ಲೇ ಕಳೆಯಬೇಕಾಗುವುದೋ ಏನೋ ಎಂದು ನಾನೆಣಿಸಿದ್ದೆ..." ಎಂದ.

ಕೊನ್ಸ್ಪಲಿಂಕಾ, "ನನಗೆ ಎಗರ್‌ನಲ್ಲಿ ತಿರುಗಾಡಲು ಮನಸ್ಸಿರಲಿಲ್ಲ. ಯಾರಾದರೂ ರೈಲುಬಂಡಿ 185ನ್ನು ಆಸ್ಚ್‌ಗೆ ಕುವಾಸೆಕ್‌ನ ಬದಲು ನಾನೇಕೆ ಕೊಂಡು ಹೋಗುತ್ತೇನೆಂದು ಆಶ್ಚರ್ಯಪಡಬಹುದಿತ್ತು........"

"ಅದು ಸರಿ, ಇನ್ನು ಅದು ಸಾಧ್ಯವಿಲ್ಲ...." ಎಂದನು ಫಾಯರ್‌ಮ್ಯಾನ್ ಕಲಬ್ಜ.

ನಿಲ್ದಾಣದ ಗಡಿಯಾರದಲ್ಲಿ ಎರಡು ಗಂಟೆಗೆ ಒಂಭತ್ತು ನಿಮಿಷ ಗಳಿದ್ದುವು.

ಇನ್ನೊಂದು ಗಂಟೆಯಲ್ಲಿ....

ಕೊನ್ಪಲಿಂಕಾ ಮುಂದೇನಾಗಬಹುದೆಂದು ಯೋಚಿಸಲಿಲ್ಲ. ಉಗಿಯ ಒತ್ತಡ ಮಾಪಕದಲ್ಲಿ ಏರುತ್ತಿದ್ದ ಒತ್ತಡದ ಸಂಕೇತದ ಮೇಲೆಯೇ ಅವನ ದೃಷ್ಟಿ ನೆಟ್ಟಿತ್ತು.

* * *

ಎಲ್ಲರಿಗೂ ಒದಗಬಹುದಾಗಿದ್ದ ಈ ಮಹಾ ಗಂಡಾಂತರದಿಂದ ಕೊನ್ಪಲಿಂಕಾ ಪಾರಾದುದು ಬೇರೆಯಾರಿಗೂ ಗೊತ್ತಿರಲಿಲ್ಲ. ಡಾಕ್ಟರ್ ಸ್ಪೆಕ್ ಎಲ್ಲವೂ ಸರಿಯಾಗಿ ನಡೆಯುತ್ತಿದೆಯೆಂದು ಸಮಾಧಾನಗೊಂಡು ವೇಗವಾಗಿ ಆಸ್ಟ್ಕನಲ್ಲಿದ್ದ ತಮ್ಮ ಮನೆಗೆ ಕಾರಿನಲ್ಲಿ ಹೋದರು.

ಅವರು ಉದ್ರೇಕಗೊಂಡಿದ್ದರು. ಆದರೆ ಅವರಿಗೊಂದು ಬಲವಾದ ಚಿಂತೆ ಹಿಡಿದಿತ್ತು. ತಾವು ಪ್ರೀತಿಸುತ್ತಿದ್ದ ನಾಡನ್ನು ಅವರು ಆಗ ತೊರೆಯಲಿದ್ದರು. ಆ ನಾಡಿನಲ್ಲಿ ಆವರ ಕುಟುಂಬಕ್ಕೆ ರಕ್ತ ಹಾಗೂ ಸಾಂಸ್ಕೃತಿಕ ಸಂಬಂಧ ಬಹಳ ಹಿಂದಿನಿಂದಲೂ ಇದ್ದಿತ್ತು. ಅಲ್ಲದೆ ಆ ನಾಡು ಡಾಕ್ಟರರಿಗೆ ಒಳ್ಳೆಯದನ್ನೇ ಮಾಡಿತ್ತು. ಹಳೆಯ ಜೀವನ ಪದ್ಧತಿಯು ವಂಚನೆಯ ಮೂಲಕ ಸಂಪೂರ್ಣ ಬದಲಾವಣೆ ಹೊಂದಿದ ಬಗ್ಗೆ ಕಳೆದ ನಾಲ್ಕು ವರ್ಷಗಳಿಂದಲೂ ಅವರಿಗೆ ತುಂಬಾ ವ್ಯಥೆಯಾಗುತ್ತಿದ್ದರೂ, ಅವರ ಜೀವನ ಸುಖಮಯವಾಗಿಯೇ ಅಲ್ಲಿ ಸಾಗಿತ್ತು. ಉಳಿದವರೆಷ್ಟೋ ಜನರು, ನಿರಾಶರಾಗಿದ್ದರೂ, ಅವರು ಸಾಫಲ್ಯವನ್ನು ಪಡೆದಿದ್ದರು. ಅದರಿಂದ ಅಲ್ಲೇ ಉಳಕೊಳ್ಳಲು ಅವರಿಗೆ ಬಹಳ ಕಾರಣಗಳಿದ್ದುವು. ಗಡಿಯಾಚೆ ಎಂತಹ ಸುಖ ಸಂಪತ್ತು ಇದ್ದರೂ ಮತ್ತೆ ಅವರು ತಮ್ಮ ನಾಡಿನ ಬಗ್ಗೆ ತುಂಬಾ ಪಶ್ಚಾತ್ತಾಪ ಪಡಲಿಕ್ಕಿತ್ತು. ಅಲ್ಲದೆ ಜೆಕೊಸ್ಲೋವಾಕಿಯಾವನ್ನು ತೊರೆದು ವಿದೇಶಕ್ಕೆ ಹೋಗುವಾಗ ತಾನು ಮರಳಿ–ಅಕ್ಷರಶಃ–ಹೊಸ ಜೀವನವನ್ನು ಪ್ರಾರಂಭಿಸಲು ಸಿದ್ಧನಾಗಿರಬೇಕೆಂಬ ಸಂಗತಿಯೂ ಅವರಿಗೆ ಆಗ ತಿಳಿಯದಿರಲಿಲ್ಲ. ಮೈಯಲ್ಲಿ ಧರಿಸಿದ್ದ ಉಡುಪು ಜೇಬಿನಲ್ಲಿದ್ದ ಸ್ವಲ್ಪ ಹಣ ಮತ್ತು ಅವರ ವೈದ್ಯಕೀಯ ಪದವಿಯ ಪ್ರಮಾಣ ಪತ್ರಗಳು–ಇಷ್ಟು ಮಾತ್ರ ಅವರಿಗೆ ಈ ಹೊಸ ಜೀವನವನ್ನಾರಂಭಿಸಲು ಉಳಿದ ಸಾಧನಗಳಾಗಿದ್ದುವು.

ಜೆಕ್ ಜನರು—ವಿದೇಶೀಯರು ಯೋಚಿಸುವಂತೆ–ಸ್ನೇಹ ಸ್ವಭಾವದವರಲ್ಲ. ಅವರೊಳಗೆ ಪರಸ್ಪರ ಅನ್ಯೋನ್ಯತೆಯಿಲ್ಲ. ಹೊರಗೆ ಅವರ ಸ್ನೇಹ

ರಹಿತವರ್ತನೆಯು ವಿಚಿತ್ರವಾಗಿ ತೋರುವುದಲ್ಲದೆ, ತಮ್ಮ ನೆರೆಹೊರೆಯವರೊಡನೆ ಕೂಡಾ ಅವರಿಗೆ ಹೆಚ್ಚಿನ ಸ್ನೇಹ ಸಂಬಂಧ ಬೆಳೆಯುವುದಿಲ್ಲ. ಇದಕ್ಕೆ ಕಾರಣಗಳಿದ್ದುವು. ಇತರ ಜನಾಂಗಗಳೊಡನೆ ಸಂಪರ್ಕ ಮಾಡಿದುದರಿಂದಾಗಿ ಜೆಕ್ ಜನರಿಗೆ ಏನೂ ಲಾಭವಾಗಲಿಲ್ಲವೆಂಬುದು ಅವರ ಇತಿಹಾಸವನ್ನು ನೋಡಿದರೆ ತಿಳಿಯುತ್ತದೆ. ಆದ್ದರಿಂದ ಅವರು ಇತರರನ್ನು ತಮ್ಮವರನ್ನೂ ಏಕ ರೀತಿಯಲ್ಲಿ ದೂರೀಕರಿಸುತ್ತಾರೆ.

ಇಂಥಹ ತಿರಸ್ಕಾರ ಭಾವನೆಯು—ನಾಡಿನ ಲಾಭಕ್ಕಾಗಿ ಎಷ್ಟೇ ಸಮರ್ಥ ಧೋರಣೆಯಾಗಿದ್ದರೂ—ಯಾವಾಗಲೂ ದ್ವೇಷವನ್ನು ಬೆಳೆಸುವುದೆಂಬುದನ್ನು ಡಾಕ್ಟರರು ಮನಗಂಡಿದ್ದರು. ಗಡಿಯಾಚೆ, ನಿರ್ಭಂದವಲ್ಲದ ಸ್ವಾತಂತ್ರ್ಯ ಸಿಕ್ಕಿದರೂ, ಅಲ್ಲಿ ಸಂಪೂರ್ಣ ಸ್ವಾಗತ ಸಿಕ್ಕಲಿಕ್ಕಿಲ್ಲವೆಂಬ ಸಂಗತಿ ಅವರ ಮನಸ್ಸನ್ನು ಕೊರೆಯುತ್ತಿತ್ತು. ಆಸ್ಚ್, ಫ್ರಾಂಜೆನ್ಸ್ ಬಾಡ್, ಪ್ರೇಗ್, ಪಿಲ್ಸೆನ್ ಮತ್ತು ಕೊಮೊಟೋಗಳಲ್ಲಿದ್ದ ತಮ್ಮ ಸ್ನೇಹಿತರ ವಿಷಯವಾಗಿ ಅವರು ಯೋಚಿಸಿದರು. ತಮ್ಮ ರೋಗಿಗಳ ಮತ್ತು ಹೋಟೆಲು ಹಾಗೂ ವಿಹಾರ ಕೂಟಗಳಲ್ಲಿದ್ದ ತಮ್ಮ ಗೆಳೆಯರ ನೆನಪೂ ಅವರಿಗೆ ಆಗ ಆಗದಿರಲಿಲ್ಲ.

ಹಳೆಯ ಜೀವನ ವಿಧಾನವನ್ನು ತೊರೆಯುವುದಕ್ಕೆ ಬೇಕಾಗುವುದಕ್ಕಿಂತಲೂ ಹೆಚ್ಚಿನ ಧೈರ್ಯವು ಹೊಸಜೀವನದ ರೀತಿಯನ್ನು ಅವಲಂಬಿಸಲು ಬೇಕಾದೀತೆಂಬುದನ್ನು ಆಲೋಚಿಸಿ ಅವರು ಚಿಂತೆಯಿಂದ ದೀರ್ಘಶ್ವಾಸ ಬಿಟ್ಟರು.

ಈ ಅಧೈರ್ಯಗಳನ್ನು ಅಡಗಿಸಲಿಕ್ಕಾಗಿಯೇ ಅವರು ಮನೆಗೆ ಬರುವಾಗ ಈ ಕೋಪವನ್ನು ನಟಿಸಿದ್ದರು. ಅದನ್ನು ಕಂಡು ಅವರ ಹೆಂಡತಿ ಮಕ್ಕಳಿಗೆ ತುಂಬಾ ಆಶ್ಚರ್ಯವಾಯಿತು.

ಡಾಕ್ಟರರು ವಿಶ್ವಾಸದಿಂದ ನಸುನಗುತ್ತ ಬೀಗ ತೆಗೆದು ಮನೆಯ ಒಳಗೆ ಹೋಗುವಾಗ, ಅವರ ಹಂಡತಿ ಉಡುಪು ಧರಿಸಿ ಅವರನ್ನು ಕಾಯುತ್ತಿದ್ದಳು. ಅವರ ಮಕ್ಕಳಿಬ್ಬರೂ ಕೂಡಾ ಉಡುಪು ಧರಿಸಿ ತಿಂಡಿಯ ಕಟ್ಟುಗಳೊಡನೆ ತಾಯಿ ಕೈಗಳನ್ನು ಹಿಡಿದುಕೊಂಡು ಹೊರಟು ನಿಂತಿದ್ದರು.

ಡಾಕ್ಟರ್ ಸ್ಪೆಕ್ ಅಲ್ಲಿದ್ದ ಚಿತ್ರಗಳನ್ನೂ, ಜಮಖಾನಗಳನ್ನೂ, ಆಭರಣಗಳನ್ನೂ ಒಮ್ಮೆ ನೋಡಿ, ಹೆಂಡತಿಯನ್ನು ಚುಂಬಿಸಿ,

"ಸರಿ, ಎಲ್ಲವೂ ಸರಿಯಾಗಿದೆ. ಕಾರು ಕೆಳಗಿದೆ. ನಾವೆಲ್ಲರೂ ಇನ್ನು ಹಾಸ್ಲೋವ್‌ಗೆ ಹೊರಡೋಣ.... ರೈಲು ಸಮಯಕ್ಕೆ ಮುಂಚಿತವಾಗಿ ಬರಲೂ ಬಹುದು. ಜರೊಸ್ಲಾವ್ ಎಲ್ಲಿ?"

ಶ್ರೀಮತಿ ಸ್ವೆಕ್ ತುಸು ಸಂಕೋಚದಿಂದ, "ಒಹ್.... ಅವನು ಇನ್ನೊಂದು ಕ್ಷಣದಲ್ಲಿ ಬರುತ್ತಾನೆ, ಜರೊಸ್ಲಾವ್. ಅವನು... ಅವನು ಈಗ ಹೊರಗೆ ಹೋದ...."

ಡಾಕ್ಟರರು ಭಯ ಹಾಗೂ ಆಶ್ಚರ್ಯಗಳಿಂದ ತಮ್ಮ ಹೆಂಡತಿಯನ್ನು ನೋಡುತ್ತ,

"ಹೊರಗೆ ಹೋದನೆ...? ಯಾವಾಗ? ಎಷ್ಟು ಸಮಯವಾಯಿತು? ...ಯಾಕೆ?" ಅವರು ಒಂದೇ ಸವನೆ ಪ್ರಶ್ನಿಸತೊಡಗಿದರು. "ಅವನು ಯಾಕಾಗಿ ಹೋದ...?"

ಶ್ರೀಮತಿ ಸ್ವೆಕ್ ಗಂಡನ ಹೆಗಲಿಗೆ ಕೈಹಾಕಲು ಅವರು ಅದನ್ನು ಕೋಪದಿಂದ ತಳ್ಳಿದರು.

"ಅವಳು ಕಣ್ಣೀರು ಗರೆಯುತ್ತ, ಕೋಪಿಸಿಕೊಳ್ಳಬೇಡಿರಿ. ಅವನು ನಿಮ್ಮನ್ನು ಕಾದು ಬೇಸತ್ತ. ಅವನು....ಅವನು ಸ್ವಲ್ಪ ಐಸ್‌ಕ್ರೀಂ ತರಲಿಕ್ಕೆಂದು ಓಡಿಹೋದ...."

ಡಾಕ್ಟರರಿಗೆ ನೆಲಕ್ಕೆ ಕಾಲಿನಿಂದ ಒದೆದು ಬೊಬ್ಬಿಡುತ್ತ, "ಐಸ್‌ಕ್ರೀಂ ! ಐಸ್ ಕ್ರೀಂ, ಹ್ಹಂ! ನಿಜವಾಗಿಯೂ ಮುಖ್ಯವಾದುದು.... ಐಸ್ ಕ್ರೀಂ. ಕತ್ರಿನಾ, ಅವನು ಎಂತಹ ಮೂರ್ಖ, ನೀನೇ ಹೇಳು ! ಈಗ ಅವನು...ನಿನ್ನ ಅಪ್ಪಣೆ ಪಡೆದು—ಐಸ್‌ಕ್ರೀಂ ತರಲಿಕ್ಕೆ ಹೊರಗೆ ಹೋಗಿದ್ದಾನೆಯೆ?"

ಉಳಿದ ಇಬ್ಬರು ಮಕ್ಕಳು ಕಳವಳಪಟ್ಟರು. ತಮ್ಮ ಸ್ನೇಹಮಹಿಯಾದ ತಂದೆಯು ಇಷ್ಟು ಉಗ್ರವಾಗಿ ವರ್ತಿಸುವುದನ್ನು ಅವರೆಂದೂ ಕಂಡಿರಲಿಲ್ಲ. ಶ್ರೀಮತಿ ಸ್ವೆಕ್ ಅಧೈರ್ಯಳಾಗಿ, "ಅವನು · ಅವನು ಏನು ತೊಂದರೆ ಕೊಡಲಿಕ್ಕಿಲ್ಲ, ಜರೊಸ್ಲಾವ್. ಹುಡುಗರು ಸುಲಭವಾಗಿ ತಾಳ್ಮೆಗೆಡುವರೆಂಬುದು ನಿಮಗೆ ಗೊತ್ತಿದೆ...."

ನಾನು ಅವನ ಚರ್ಮ ಸುಲಿಯುತ್ತೇನೆ! "ಡಾಕ್ಟರ್ ಸ್ವೆಕ್ ಬೊಬ್ಬಿಟ್ಟರು." "ನಾವು ಎಲ್ಲಿಗೆ ಹೋಗುವೆವೆಂದು ಅವನು ಭಾವಿಸಿದ್ದಾನೆ?

ಹಾಸ್ಲೋವ್ ಕಾಡಿನಲ್ಲಿ ವನಭೋಜನಕ್ಕಾಗಿಯೇ....? ಅವನೆಲ್ಲಿಗೆ ಹೋಗಿದ್ದಾನೆ, ಕತ್ರಿನಾ? ಆ ಅಂಗಡಿ ಎಲ್ಲಿದೆ ಕತ್ರಿನಾ? ನಿನಗೆ ಗೊತ್ತಿಲ್ಲ, ಅಲ್ಲವೇ? ಸರಿ. ನೀವು ತೋರರೆ? ಉಪವಾಸ ಮಾಡಿಸುತ್ತೇನೆಂದು ನೆನೆದು ಐಸ್‌ಕ್ರೀಂ ತಿನ್ನಲು ಹೋದ ನಿಮ್ಮ ಅಪರಂಜಿ ಅಣ್ಣ ಎಲ್ಲಿದ್ದಾನೆಂದು ನಿಮಗೆ ಗೊತ್ತಿಲ್ಲವೆ...?"

ಇಬ್ಬರು ಮಕ್ಕಳಿಗೂ ಹೆದರಿಕೆಯಿಂದ ಮಾತಾಡಲಾಗಲಿಲ್ಲ, ಶ್ರೀಮತಿ ಸ್ವೆಕ್.

"ಓಹೊ, ಜರೊಸ್ಲಾವ್...... ತಡೆಯಿರಿ..."

"ಹ್ಞಾ," ನಾವು ಇಷ್ಟು ಮಾಡಿದ್ದಕ್ಕೆ ಇದು ಒಳ್ಳೆಯದಾಯಿತು..." ಎಂದು ಉದ್ಗರಿಸಿದರು.

ಅವರು ತಲೆಯ ಮೇಲೆ ಹ್ಯಾಟನ್ನಿಟ್ಟು ಬಾಗಿಲಿನ ಹೊರಗೆ ನಡೆದರು

ಆಗ ಅವರ ಮಗ ಮನೆಯ ಬಾಗಿಲಿನ ಸಮೀಪಕ್ಕೆ ಬರುತ್ತಿದ್ದ. ಅಷ್ಟು ಬಹಿರಂಗವಾಗಿ ಅವನಿಗೆ ಶಿಕ್ಷೆಯನ್ನೀಯಲು ಅವರಿಗೆ ಮನಸ್ಸೊಪ್ಪಲಿಲ್ಲ. ಅವನು ಅವರ ಕೋಪದಿಂದ ಹೇಗಾದರೂ ಪಾರಾದನು.

ಆದರೆ ಅವರ ಕೋಪದಿಂದ ಕಿಡಿ ಕಾರುವ ಕಣ್ಣುಗಳನ್ನು ಕಂಡು ಅವನಿಗೆ ಹೆದರಿಕೆಯಾಯಿತು.

"ನಿನ್ನನ್ನು ಮತ್ತೆ ನೋಡುತ್ತೇನೆ, ಜರೊಸ್ಲಾವ್. ಈಗ ಮಾಳಿಗೆಗೆ ಒಂದೇ ಸವನೆ ಓಡಿ ನಿನ್ನ ತಾಯನ್ನೂ ತಮ್ಮಂದಿರನ್ನೂ ಕೆಳಗೆ ಕರೆದುತಾ. ಹಾಸ್ಲೋವ್‌ಗೆ ಮುಟ್ಟುವಾಗ ತಡವಾದರೆ, ನೀನೇ ಅದಕ್ಕೆ ಕಾರಣ."

ಆದರೆ, ಸ್ವೆಕ್‌ರ ಕುಟುಂಬವು ಕೊನೆಯ ಬಾರಿ ಮನೆಯೊಳಗೆ ನಿಂತು, ಮೌನವಾಗಿ ಶ್ರೀಮತಿ ಸ್ವೆಕ್ ಎದುರಿನ ಬಾಗಿಲಿನ ಬೀಗದ ಕೀಲಿಯನ್ನು ತನ್ನ ಗಂಡನ ಕೈಯಲ್ಲಿ ಕೊಡುವಾಗ ಡಾಕ್ಟರ್ ಸ್ವೆಕ್‌ರ ಕಣ್ಣುಗಳಲ್ಲಿ ನೀರು ಬಂದಿತ್ತು. ಅದು ಕೋಪದಿಂದ ಬಂದ ಕಣ್ಣೀರಾಗಿರಲಿಲ್ಲ.

ಅವರು ಸಮಾಧಾನದಿಂದ "ನೀವೆಲ್ಲರೂ ಬನ್ನಿರಿ" ನಾವು ನಮ್ಮ ಹಳೆಯ ಮನೆಯಿಂದ ಹೋಗುತ್ತಿದ್ದೇವೆ. ಯಾವಾಗ ಇಲ್ಲಿಗೆ ಮರಳುವೆವೆಂದು ಯಾರಿಗೆ ಗೊತ್ತು? ಆದರೆ... ನಾವು ಹೊರಗೆ ತಿರುಗಾಡಲಿಕ್ಕೆ ಹೊರಟಿದ್ದೇವೆಂದು ಜನರೆಲ್ಲರೂ ತಿಳಿದಿದ್ದಾರೆ. ಆದ್ದರಿಂದ.... ನಗೆಯಾಡಿ ಮಕ್ಕಳೆ!

ಪ್ರಿಯೆ, ನೀನೂ ನಸುನಗು...." ಅವರು ತನ್ನ ಹಿರೇ ಮಗನ ತಲೆಯನ್ನು ತಟ್ಟುತ್ತ, "ಜರೊಸ್ಲಾವ್‌ನ ಮೇಲೆ ನಾನು ಕೋಪಗೊಂಡುದು ತಪ್ಪೆಂದು ತೋರುತ್ತದೆ. ಐಸ್‌ಕ್ರೀಂ ತಿನ್ನುವ ಹುಡುಗನನ್ನು ನೋಡುವವರಿಗೆ ನಾವು ಎಲ್ಲಿಗೆ ಹೋಗುತ್ತೇವೆಂದು ಹೇಗೆ ತಿಳಿದೀತು....?"

ಡಾಕ್ಟರರ ಸಣ್ಣ ಕಾರಿನಲ್ಲಿ ಕುಳಿತುಕೊಳ್ಳುವಾಗ ಅವರು ಯಾರೂ ಅಳಲಿಲ್ಲ. ಆದರೆ ಶುಭ್ರವಾದ ಆ ಮಧ್ಯಾಹ್ನ ತಿರುಗಾಡಲು ಹೋಗುವಾಗ ಯಾವಾಗಲೂ ಆಗುವ ಪ್ರಸನ್ನತೆಯಲ್ಲಿ ಮಾತ್ರ ಅವರು ನಗಲಿಲ್ಲ.

* * *

ಕೊನ್ಸಲಿಂಕಾ ಸಿಗರೇಟೊಂದನ್ನು ಕಚ್ಚಿಕೊಂಡು ಪ್ಲಾಟ್ ಫಾರ್ಮಿ ನಲ್ಲಿದ್ದ ಗಡಿಯಾರವನ್ನು ಇಣಿಕಿ ನೋಡುತ್ತಿದ್ದ. ನಿಮಿಷದ ಮುಳ್ಳು ನೆಟ್ಟ ಗಾಗುವಾಗ ಒಂದು ಚರ್ಚಿನ ಗಡಿಯಾರವು ಎರಡು ಗಂಟೆ ಬಾರಿಸಿತು. ಇನ್ನು ಐದು ನಿಮಿಷ...

ಅವನು ಪ್ಲಾಟ್‌ಫಾರ್ಮನ್ನು ನೋಡಿದ. ಟಿಕೇಟ್ ಸಂಗ್ರಹಿಸುವ ನೌಕರರು ದ್ವಾರಗಳಲ್ಲಿ ನಿಂತುಕೊಂಡು, ಎರಡು ಗಂಟೆಯಾಗಿ ನಾಲ್ಕು ನಿಮಿಷ ಗಳಾಗುವಾಗ ಬಾಗಿಲು ಮುಚ್ಚಲು ಕಾಯುತ್ತಿದ್ದರು.

ಟ್ರೆಕ್ಸಾನ ಕೆಲಸ ಮಾಡುತ್ತಿದ್ದ ಹೊಸ ಅಧಿಕಾರಿಯು ಪ್ಲಾಟ್‌ಫಾರ್ಮಿ ನಲ್ಲಿ ಎಲ್ಲವನ್ನೂ ನೋಡುತ್ತ, ಒಂದು ಕೈಯ್ಯಲ್ಲಿ ಒಂದು ಪತಾಕೆಯನ್ನೂ, ಮತ್ತೊಂದರಲ್ಲಿ ಊದುವ ಬಿಗಿಲನ್ನೂ ಹಿಡಿದುಕೊಂಡು ಅತ್ತಿತ್ತ ಹೋಗು ತ್ತಿದ್ದ. ಅವನು ಆಗಾಗ್ಗೆ ಪ್ಲಾಟ್‌ಫಾರ್ಮಿನ ಗಡಿಯಾರವನ್ನು ತನ್ನ ಗಡಿ ಯಾರದೊಡನೆ ಹೋಲಿಸುತ್ತಿದ್ದ. ತನಗೆ ಅನಿರೀಕ್ಷಿತವಾಗಿ ಸಿಕ್ಕಿದ ಬಡ್ತಿಯು ಅವನನ್ನು ನಿಷ್ಠಾವಂತನನ್ನಾಗಿ ಮಾಡಿತ್ತು. ಕೊನ್ಸಲಿಂಕಾ ಅವನನ್ನು ನೋಡುತ್ತಿದ್ದ. ಆಗ ಅವನಲ್ಲಾಗುತ್ತಿದ್ದ ಕಳವಳವು ಫಾಯರ್‌ಮ್ಯಾನ್ ಕಲಬ್ಜನಿಗೆ ತಿಳಿಯದಂತೆ ಕೊನ್ಸಲಿಂಕಾ ಜಾಗ್ರತೆಯಲ್ಲಿದ್ದ.

ಪ್ಲಾಟ್‌ಫಾರ್ಮಿನಲ್ಲಿ ಓಡಾಡುತ್ತಿದ್ದ ಜನರನ್ನು ನೋಡಿ ಒಮ್ಮೆ ಕೊನ್ಸ ಲಿಂಕಾನ ಮನಸ್ಸಿನಲ್ಲಿ ವೇಧನೆಯಾಯಿತು. ಆದರೆ ಮರು ಘಳಿಗೆಯಲ್ಲಿ ಕಲಬ್ಜ ಮಾತನಾಡಿದುದನ್ನು ಕೇಳಿ ಧೈರ್ಯವಾಯಿತು. ಕಲಬ್ಜ ನಗುತ್ತ "ಮೂವರು ಶಾಲೆಯ ಹುಡುಗರು ಯಾವಾಗಲೂ ಕೊನೆಗೆ ಬರುವವರು.

ಅವರು ಆಸ್ಟ್ಕನಲ್ಲಿ ಇಳಿಯುವವರು," ಅವನು ಮುಂದುವರಿಸುತ್ತ ನಾನು ಈ ಬಂಡಿಯಲ್ಲಿ ಕೆಲಸದಲ್ಲಿರುವಾಗ ಅವರು ಯಾವಾಗಲೂ ತಡವಾಗಿಯೆ ಬರುವರು. ಆದರೆ ಅವರು ಹೇಗಾದರೂ ರೈಲಿಗೆ ಹತ್ತದೆ ಇಲ್ಲ. ಅಲ್ಲಿ ಹೋಗುತ್ತಿದ್ದಾರೆ... ಅವರಿಗೆ ಕೊನೆಯ ಗಾಡಿಯಲ್ಲಿ ಕುಳಿತುಕೊಳ್ಳುವ ಇಚ್ಛೆಯಾಗಿದೆಯೆಂದು ತೋರುತ್ತದೆ. ಬಹುಶಃ ಅದು ಬಹಳ ಸುರಕ್ಷಿತವಾದ ಬಂಡಿಯೆಂದು ಅವರ ತಾಯಿ ಹೇಳಿರಬಹುದು..."

ಆ ಮೂರು ಮಂದಿ ಮಕ್ಕಳು ನಗುತ್ತ ಕೊನೆಯ ಗಾಡಿಯ ಬಾಗಿಲನ್ನು ತೆರೆದು ಅದರ ಒಳಗೆ ಹೊಕ್ಕಿದರು. ಆದರೆ ಕೊನ್ಪಲಿಂಕಾನಿಗೆ ಅವರ ಮೇಲೆ ಆಸಕ್ತಿಯಿರಲಿಲ್ಲ. ಆತನಕ ತನಗೆ ಟ್ರುಕ್ಸಾ ಕಾಣಸಿಗಲಿಲ್ಲವೆಂದು ಅವನು ದಿಗಿಲು ಬಿದ್ದಿದ್ದ.

ಕಲಬ್ಜ ಸಂತೋಷಭರಿತನಾಗಿ, "ಅಲ್ಲಿ ನೋಡಿರಿ! ನಾನು ಏನು ಹೇಳಿದೆ? ಅವರು ಕೊನೆಯ ಗಾಡಿಯೊಳಗೆ ಹೋದುದನ್ನು ನೋಡಿದಿರಾ? ನಾನು ಮೊದಲೇ ಹೇಳಿದ್ದೆ: ಅವರು ಯಾವಾಗಲೂ ಹಾಗೆಯೇ. ಪ್ರತಿದಿನವೂ...." ಎಂದನು.

ಕೊನ್ಪಲಿಂಕಾ, ಬಂಡಿಯನ್ನು ಕಳುಹಿಸುವ ಅಧಿಕಾರಿಯನ್ನೂ, ಗಡಿಯಾರವನ್ನೂ, ಪ್ಲಾಟ್‌ಫಾರ್ಮನ್ನೂ ನೋಡುತ್ತ ತಲೆಯಲ್ಲಾಡಿಸಿದ. ಆಗ ಟ್ರುಕ್ಸಾ ಮೆಲ್ಲನೆ— ಬಹಳ ನಿಧಾನವಾಗಿ— ಪ್ಲಾಟ್‌ಫಾರ್ಮಿನಲ್ಲಿ ಬರುತ್ತಿದ್ದುದನ್ನು ಕಂಡು ಕೊನ್ಪಲಿಂಕಾ ಸಂತೋಷದಿಂದ ಹಿಗ್ಗಿದ.

ಟ್ರುಕ್ಸಾ ಎಂಜಿನಿನ ಬಳಿಗೆ ಬಂದು ಕೊನ್ಪಲಿಂಕಾನಿಗೆ ನಮಸ್ಕರಿಸಿ ಅದರ ಗಾಡಿಯೊಳಗೆ ನೆಗೆದು.

"ನಮಸ್ಕಾರ ಕೊನ್ಪಲಿಂಕಾ! ನಾನು ಆಸ್ಟ್‌ಗೆ ಬರಲೇ ..."

ಇದರಲ್ಲಿ ಏನೂ ವಿಶೇಷವಿರಲಿಲ್ಲ. ಅನೇಕ ರೈಲ್ವೇ ಕೆಲಸಗಾರರು ಹಾಗೆ ಎಂಜಿನಿನ ಗಾಡಿಯಲ್ಲಿ ನಿಂತು ಡ್ರೈವರನ ಒಡನಾಟದಲ್ಲಿ ಪ್ರಯಾಣ ಮಾಡಲು ಬಯಸುತ್ತಿದ್ದರು. ಟ್ರುಕ್ಸಾ ಕಲಬ್ಜನಿಗೂ ನಮಸ್ಕರಿಸಿದ. ಆದರೆ ಕಲಬ್ಜ ಅವನನ್ನು ತಣ್ಣಗೆ ನೋಡಿದನು. ಕಲಬ್ಜ ನಿಷ್ಠಾವಂತ ಕಮ್ಯುನಿಸ್ಟನಾಗಿದ್ದನು. ಆದರೆ ಟ್ರುಕ್ಸಾ—ಕಲಬ್ಜನ ಸಂಕುಚಿತ ವರ್ತನೆಯಿಂದ ಆಗ ಸ್ಪಷ್ಟವಾದಂತೆ—ಹಾಗಿರಲಿಲ್ಲ.

ಕೊನ್ನಲಿಂಕಾನು, "ನೀವು ಬಂದುದು ಸಂತೋಷ, ಕಾಮ್ರೇಡ್ ಸರಿಯಾಗಿ ಕುಳಿತುಕೊಳ್ಳಿ. ನಾನು ಸಿಗ್ನಲ್ ನೋಡುತ್ತೇನೆ"

ಅವನು ಕಿಟಕಿಯಿಂದ ಇಣಿಕಿ ನೋಡುತ್ತಿರುವಂತೆಯೇ ಕಿವಿಕೇಳುವ ಸಿಳ್ಳು ಕೇಳಿಸಿತು.

ಅಧಿಕಾರಿ ಪತಾಕೆಯನ್ನು ಹಾರಿಸಿದ ಸಂಕೇತದ ಕೈ ಕೆಳಗೆ ಬಿತ್ತು.

ಕೊನ್ನಲಿಂಕಾ ಉಪಕರಣಗಳನ್ನು ನೋಡಿದ, ಕಲಬ್ಜ ಒಲೆಗೆ ಕಲ್ಲಿದ್ದಲನ್ನು ಇನ್ನೂ ಸೇರಿಸುತ್ತಿದ್ದ.

ಕೊನ್ನಲಿಂಕಾ ಬ್ರೇಕನ್ನು ಸಡಿಲುಮಾಡಿ, ತ್ರೋಟ್ಲ್ ತೆರೆದನು.

ಸುಮಾರು ನೂರಕ್ಕೆ ಮಿಕ್ಕಿ ಜನರಿದ್ದ ರೈಲುಬಂಡಿ 185 ಮೆಲ್ಲನೆ ಎಗರ್ ನಿಲ್ದಾಣದಿಂದ ವೇಗವನ್ನು ಹೆಚ್ಚಿಸುತ್ತ, ಅದರ ಚಿರಸ್ಮರಣೀಯವಾಗಲಿದ್ದ ಓಟವನ್ನು ಆರಂಭಿಸಿತು.

ಅದು ಚಲಿಸತೊಡಗಿದಂತೆಯೇ ಗಾರ್ಡ್ ಜಿರಿಟ್ಯುಮಾ ಮತ್ತು ಟಿಕೇಟು-ಸಂಗ್ರಹಿಸುವ ಹುಡುಗಿ ಜರೊಸ್ಲಾವಾ ಪ್ರಿಹೋದಾ, ಸರಕುಗಳ ಬಂಡಿಯೊಳಗೆ ನೆಗೆದು ಕುಳಿತರು.

* * *

ಜಿರಿ ಟ್ಯುಮಾನಿಗೆ 60 ವರ್ಷ ಪ್ರಾಯ ತುಂಬುತ್ತಿತ್ತು. ರೈಲ್ವೇ ಗಾರ್ಡ್‌ನ ಕಠಿನ ಕೆಲಸಗಳನ್ನು ಮಾಡಲು ಅವನು ಅಶಕ್ತನಿದ್ದ. ಕಮ್ಯುನಿಸ್ಟ್ ಆಡಳಿತೆಯಲ್ಲಿ, ಕೆಲಸ ಬಹಳ ಬಿಗುವಾಗಿತ್ತು.

ಟ್ಯುಮಾ ಮುದುಕನಾಗುತ್ತಿದ್ದ. ಇಲ್ಲದಿದ್ದರೂ ಅವನು ಸ್ವಭಾವತಃ ಆಲಸಿ. ರೈಲುಬಂಡಿ ಹೊರಡುವ ಮುಂಚೆ ಎಲ್ಲಾ ಗಾಡಿಗಳ ಬಾಗಿಲುಗಳನ್ನು ಮುಚ್ಚಬೇಕೆಂಬ ನಿಯಮವನ್ನು ಅವನು ಮೆಚ್ಚುತ್ತಿರಲಿಲ್ಲ; ಏಕೆಂದರೆ, ಬಾಗಿಲು ಮುಚ್ಚಿದ ಬಳಿಕ ಅವಸರದಲ್ಲಿ ಅವನು ಸಾಮಾನಿನ ಗಾಡಿಗೆ ನೆಗೆಯಬೇಕಾಗುತ್ತಿತ್ತು. ಅಷ್ಟರಲ್ಲಿ ರೈಲುಬಂಡಿ ಚಲಿಸ ತೊಡಗುತ್ತಿತ್ತು. ಆದರೆ ಅವನು ಯಾವುದನ್ನು ಗಮನಿಸದೆ ಸಾಮಾನಿನ ಗಾಡಿಯೊಳಗೆ ಕುಳಿತುಕೊಂಡು ಸಿಗರೇಟು ಸೇದುತ್ತಿದ್ದ. ಪ್ರಯಾಣಿಕರ ವಿಭಾಗದ ಮೇಲ್ವಿಚಾರವನ್ನೆಲ್ಲ ಜರೊಸ್ಲಾವ್ ಪ್ರಿಹೋದಳ ಪಾಲಿಗೆ ಬಿಟ್ಟು ಬಿಡುತ್ತಿದ್ದ.

ಕಮ್ಯುನಿಸ್ಟ್ ಅಧಿಕಾರಿಗಳು ನಿಯಮಗಳನ್ನು ಬಿಗುಮಾಡುತ್ತಿದ್ದುದು ಟ್ಯೆಮಾನಿಗೆ ಮೆಚ್ಚುಗೆಯಾಗದಿದ್ದರೂ ಅವನು ಕಮ್ಯುನಿಸಮ್ಮನ್ನು ವಿರೋಧಿಸುತ್ತಿರಲಿಲ್ಲ. ಅವನಿಗೆ ನಿಯಂತ್ರಣಗಳು ಮೇಲಿಂದ ಮೇಲೆ ತನ್ನ ಮತ್ತು ಇತರರ ಮೇಲೆ ಎಷ್ಟು ಕಠಿನವಾಗುವುವೋ ಅಷ್ಟು ಒಳ್ಳೆಯದೆಂದು ತೋರುತ್ತಿತ್ತು.

ಆದರೆ ಪ್ರಿಹೋದಗಳಿಗೆ, ಒಳ್ಳೆಯ ನೌಕರಿ ದೊರಕಿದ್ದರೂ--ಅಷ್ಟು ವೇತನವಿರುವ ಟಿಕೇಟು-ಸಂಗ್ರಹ ಮಾಡುವ ನೌಕರಿಯನ್ನು ಆಕೆ ಹೇಗೆ ಗಳಿಸಿದ್ದಳೆಂಬುದು ಯಾರಿಗೂ ತಿಳಿದಿರಲಿಲ್ಲ--ಆಕೆ ಬೇರೆ ಬೇರೆ ರಾಜಕೀಯ ಪದ್ಧತಿಗಳೊಳಗಿರುವ ಭೇದವನ್ನು ತಿಳುಕೊಳ್ಳುವಷ್ಟು ಶಕ್ತಿಯಿಲ್ಲದ, ಸರಳ ಮನೋವೃತ್ತಿಯ ಹುಡುಗಿಯಾಗಿದ್ದಳು.

ಅವಳು ಆಜ್ಞಾನುಸಾರವಾಗಿ--ಎಲ್ಲಾ ಆಜ್ಞಾನುಸಾರವಾಗಿ--ತನ್ನ ಪಾಲಿನ ಕೆಲಸವನ್ನೆಲ್ಲ ದಕ್ಷತೆಯಿಂದ ಮಾಡುವುದರಲ್ಲಿ ತೃಪ್ತಿ ಹೊಂದುತ್ತಿದ್ದಳು. ಅವಳನ್ನು ಕಾಲ್‌ಹೋವರ್ತನು ಮೊದಲು ಗಮನಿಸಿದ. ಅವಳು ಅವನಿದ್ದ ಗಾಡಿಯ ಬಾಗಿಲನ್ನು ತೆರೆದು ನಿರ್ಜೀವವಾಗಿ,

" ಟಿಕೇಟು ತೋರಿಸಿರಿ ! " ಎಂದಳು.

ಕಾಲ್--ಆ ಗಾಡಿಯಲ್ಲಿ ಅವನೊಬ್ಬನೇ ಉಳಿದಿದ್ದ ತನ್ನ ಕಿಸೆಯೊಳಗೆ ಕೈ ಹಾಕಿ ಟಿಕೇಟನ್ನು ತೆಗೆದ.

ಜರೊಸ್ಲಾವಾ ಪ್ರಿಹೋದಾ ಅದನ್ನು ತೆಗೆದುಕೊಂಡು, ಅದಕ್ಕೆ ತೂತು ಮಾಡಿ ಅವನಿಗೆ ಹಿಂದೆ ಕೊಡುತ್ತ ತನ್ನಷ್ಟಕ್ಕೆ " ಅಸ್ಚ " ಎಂದು ಹೇಳಿ ಗಾಡಿಯ ಹೊರಗೆ ಬಾಗಿಲು ಮುಚ್ಚಿ ಹೋದಳು.

ಹೋವರ್ತನಿಗೆ ದಿಗಿಲಾಗಿತ್ತು. ಆ ಮುದುಕಿಯು ಕೆಳಗೆ ಇಳಿದ ನಂತರ ತನ್ನ ದಿಗಿಲು ಹೆಚ್ಚಿದೆಯೆಂದು ಅವನಿಗೆ ಆಶ್ಚರ್ಯವಾಯಿತು. ಅದಕ್ಕೆ ಟಿಕೇಟು-ಸಂಗ್ರಾಹಕ ಹುಡುಗಿಯು " ಅಸ್ಚ " ಎಂದುದೇ ಕಾರಣವೋ ಎಂದು ಅವನು ಭಾವಿಸುತ್ತ ಗಾಡಿಯೊಳಗೆ ತಿರುಗಾಡಲು ನಿರ್ಧರಿಸಿದನು.

ಅವನು ಪಲಾಯನಗಾರರ ಕೂಟದಲ್ಲೊಬ್ಬನಾಗಿದ್ದರೂ, ಏನೊಂದೂ ಅತಂಕ ಸಂಭವಿಸದಂತೆ ಅವನು ಕಾವಲುಗಾರನಾಗಿಯೂ ನೇಮಿಸಲ್ಪಟ್ಟವನಾಗಿದ್ದ. ಯಾರಾದರೂ ಪ್ರಯಾಣಿಕರು ಅಕಸ್ಮಾತ್ತಾಗಿ ಗಾಡಿ ನಿಲ್ಲಿಸಲು

ಇರುವ ಎಮರ್ಜೆನ್ಸಿ ಬ್ರೇಕಿನ ಸರಪಳಿಯನ್ನು ಎಳೆಯದಂತೆ— ಎಳೆಯುವ ಯತ್ನವನ್ನೂ ಮಾಡದಂತೆ ಅವನು ನೋಡಿಕೊಳ್ಳಬೇಕಾಗಿತ್ತು. ಆಸ್ಟ್‌ನಲ್ಲಿ ರೈಲು ಬಂಡಿ ನಿಲ್ಲುವುದಿಲ್ಲವೆಂಬುದನ್ನು ಕಂಡು ಪ್ರಯಾಣಿಕರು ಸರಪಳಿಯನ್ನೆಳೆಯಲು ಯತ್ನಿಸಬಹುದಿತ್ತು. ಮುಖ್ಯವಾಗಿ ಇದಕ್ಕೋಸ್ಕರವೇ ಅಕಸ್ಮಿಕವಾಗಿ ರೈಲನ್ನು ನಿಲ್ಲಿಸದಂತೆ—ಹೋವರ್ತನಿಗೆ ಒಂದು ಪಿಸ್ತೂಲನ್ನೂ ಒದಗಿಸಲಾಗಿತ್ತು.

ಹೋವರ್ತ ಗಾಡಿಯ ಜಗಲಿಗೆ ಹೋಗಿ ಒಂದು ಕಿಟಕಿಯ ಬಾಗಿಲನ್ನು ತೆರೆದ.

ಆಮೇಲೆ ಅದನ್ನು ಮುಚ್ಚಿ, ಗಾಡಿಯೊಳಗೆ ನೋಡುತ್ತ ಆಚೆ ಹೋದ: ಅವುಗಳಲ್ಲಿ ಹೆಚ್ಚು ಜನರಿಲ್ಲದಿದ್ದರೂ, ಅವರನ್ನು ಪರಿಶೀಲಿಸುತ್ತಿರುವುದು ಅವಶ್ಯವೆಂದು, ರೈಲಿನ ವೇಗ ಹೆಚ್ಚುತ್ತಿದ್ದಂತೆ, ಅವರಿಗೆ ತೋರಿತು.

" ನನಗೆ ಈ ರೈಲು ಬಂಡಿಯಲ್ಲಿರುವ ಗುಪ್ತ ಪೋಲೀಸರು ಯಾರೆಂದು ತಿಳಿದಿದ್ದರೆ ಒಳ್ಳೆಯದಾಗುತ್ತಿತ್ತು. " ಎಂದವನು ತನ್ನೊಳಗೇನೇ ಹೇಳಿಕೊಂಡನು.

ಪ್ರಯಾಣಿಕರೊಡನೆ ಗುಪ್ತ ಪೋಲೀಸರು ಇದ್ದೇ ಇರುವರೆಂಬುದ ಹೋವಾರ್ತನಿಗೆ ಖಚಿತವಾಗಿತ್ತು. ಎಂಥಹ ಚಿಕ್ಕ ರೈಲು ಬಂಡಿಯು ಎಷ್ಟು ಸಣ್ಣ ನಿಲ್ದಾಣದಿಂದ ಹೋಗುತ್ತಿದ್ದರೂ, ಅದರಲ್ಲಿ ಗುಪ್ತ ಪೋಲೀಸನೊಬ್ಬನು ಇಲ್ಲದೆ ಇರುತ್ತಿದ್ದಿಲ್ಲ. ಅವನಿಗೆ ದೇಶದ " ಸ್ವಾತಂತ್ರ್ಯ ಪಡೆದ " ಕಾರ್ಮಿಕರಿಂದ ಸಂಬಳ ದೊರೆಯುತ್ತಿತ್ತು.

ಟ್ರುಕ್ಸಾ ಈ ವಿಷಯವನ್ನು ತನಗೆ, ಕೊನೆಯ ಸಲ ಚೆನ್ನಾಗಿ ವಿವರಿಸಿದ್ದಾನೆಂಬುದು ಕಾರ್ಲ್‌ಗೆ ಜ್ಞಾಪಕಕ್ಕೆ ಬಂತು.

" ಗುಪ್ತ ಪೋಲೀಸರು ನಿಜವಾಗಿ ಅಪಾಯಕಾರಿಗಳಲ್ಲ. ಅವರಿಗೆ ಟಿಕೇಟುಗಳಲ್ಲಾಗಲೀ, ಗುರುತು ಹಚ್ಚುವ ಪತ್ರಗಳಲ್ಲಾಗಲೀ ಆಸಕ್ತಿಯಿಲ್ಲ. ಅವರು ಕೆಲಸವೆಂದರೆ ಕುಳಿತು ಕಾಯುವುದು.... ಕುಳಿತು ಯಾವುದಾದರೂ ಏನಾದರೂ— ಸಂಭವಿಸುವುದನ್ನು ನಿರೀಕ್ಷಿಸುವುದು......"

ಕಾರ್ಲ್ ನಸುನಕ್ಕು " ಸರಿ, ಅವರು ಕಾಯುತ್ತಿರುವುದನ್ನು ಸಮರ್ಥಿಸಲಿಕ್ಕೆ, ಸಧ್ಯದಲ್ಲೇ ಅಸಾಧಾರಣ ಘಟನೆಗಳು ನಡೆಯಲಿವೆ..."

ಸಾಮಾನ್ಯ ವಸ್ತ್ರಧಾರಿಗಳಾದ ಕಾವಲುಗಾರರು ಮಾತ್ರ ಅಪಾಯಕಾರಿಗಳೆಂದು ಟ್ರುಕ್ಸಾ ಅವನಿಗೆ ಹೇಳಿದ್ದ. ಅವರು ರೈಲು ಬಂಡಿಗಳನ್ನು ಪರಿಶೀಲಿಸುತ್ತಿದ್ದರು. ಅವರಿಗೆ ಪ್ರತಿಯೊಬ್ಬ ಪ್ರಯಾಣಿಕನನ್ನೂ ಗುರುತಿಸುವ ವಿಲಕ್ಷಣ ಸಾಮರ್ಥ್ಯವಿತ್ತು. ಅವರು ಸಾಮಾನುಗಳನ್ನೂ, ಪತ್ರಗಳನ್ನೂ ತನಿಖೆ ಮಾಡದೆ ಬಿಡುತ್ತಿರಲಿಲ್ಲ.

ಆದರೆ, ಅವರು ಎಗರ್‌ನಲ್ಲಿ ಬಂಡಿಯನ್ನು ಹತ್ತದಿದ್ದರೆ ಮತ್ತೆ ಅವರು ಬರಲಿಕ್ಕಿಲ್ಲ. ಆದರೆ ಅವರು ಹಾಗೆ ಹತ್ತಿದರೆ ನಾನು ನಿಮಗೆಲ್ಲರಿಗೆ ಎಚ್ಚರಿಕೆಯನ್ನೀಯುತ್ತೇನೆ" ಎಂದು ಟ್ರುಕ್ಸಾನು ಹೇಳಿದ್ದನು.

ಆತನಕ ಪ್ಲಾಟ್‌ಫಾರ್ಮಿನಲ್ಲಾಗಲೀ, ರೈಲು ಬಂಡಿಯಲ್ಲಾಗಲೀ, ಸಾಮಾನ್ಯ ವಸ್ತ್ರಧಾರಿಗಳಾದ ಕಾವಲುಗಾರರು ಹೋವರ್ತನಿಗೆ ಕಾಣಸಿಕ್ಕಿರಲಿಲ್ಲ. ಅದರಲ್ಲಿ ಗುಪ್ತ ಪೋಲೀಸರು ಮಾತ್ರ ಇರುವವರೆಂದು ಅವನು ಯೋಚಿಸಿದನು.

ಬ್ರೇಕ್ ಹಾಕುವ ಶಬ್ದ ಕೇಳಿತು. ಕಾರ್ಲ್ ತನ್ನ ಗಾಡಿಯ ಕಿಟಕಿಯನ್ನು ತೆರೆದನು.

ಫ್ರಾಂಜೆನ್ಸ್ ಬಾಡ್ ನಿಲ್ದಾಣವಲ್ಲಿ ಅನೇಕ ಪ್ರಯಾಣಿಕರಿದ್ದುದು ಅವನಿಗೆ ತೋರಿತು. ಅವನಿಗೆ ಯಾರಮೂ ಪರಿಚಯವಿಲ್ಲದಿದ್ದುದರಿಂದ, ಸ್ಕಾಲ್ಸ್ಕಿಯನ್ನಾಗಲೀ ಲೊಸ್ಕೊಟ್‌ನನ್ನಾಗಲೀ ಅವನು ಗುರುತಿಸಲಿಲ್ಲ. ಅಲ್ಲಿ ಅವರಿಬ್ಬರೇ ಪಲಾಯನದ ಪಂಗಡದವರಾಗಿದ್ದರು. ಆದರೆ ಅಲ್ಲಿಂದ ಪಲಾಯನ ಮಾಡಲು ಇಚ್ಛಿಸುತ್ತಿದ್ದವರೂ ಬಹಳ ಮಂದಿ ಇದ್ದಾರೆಂಬುದರಲ್ಲಿ ಸಂಶಯವಿರಲಿಲ್ಲ.

* * * *

ಆದರೆ ಹೋವರ್ತನಿಗೆ ಲೊಸ್ಕೊಟ್‌ನನ್ನು ಪಲಾಯನಗಾರರಲ್ಲೊಬ್ಬನೆಂದು ಕಂಡುಹಿಡಿಯಲು ಕಷ್ಟವಾಗುತ್ತಿದ್ದಿಲ್ಲ.

ಏಕೆಂದರೆ ಆಗ ಲೊಸ್ಕೊಟ್ ಸಂಪೂರ್ಣವಾಗಿ ಭಯ ಪೀಡಿತನಾಗಿದ್ದ.

ಇದಕ್ಕೆ ಸ್ಕಾಲ್ಸ್ಕಿ ಆಡಿದ "ಆಟವು" ಬಹುಮಟ್ಟಿಗೆ ಕಾರಣವಾಗಿತ್ತೆನ್ನಬಹುದು.

ಸ್ಕಾಲ್ಸ್ಕಿ ಟ್ರುಕ್ಸಾನ ಮನೆಯಲ್ಲಿದ್ದುದನ್ನೆಲ್ಲ ನಾಶಮಾಡಿ, ಅಲ್ಲಿ ಪೋಲೀಸರಿಗೆ ಸೂರೆ ಮಾಡಲು ಏನನ್ನೂ ಬಿಟ್ಟುಬಿಡದೆ, ಕೂಡಲೇ ಫ್ರಾಂಜೆನ್ಸಬಾಡ್

ನಿಲ್ದಾಣಕ್ಕೆ ಹೊರಡಲು ಲೊಸ್ಕೊಟ್‌ನನ್ನು ಒತ್ತಾಯಪಡಿಸಿದ್ದ. ರೈಲು ಬಂಡಿ ಅಲ್ಲಿಗೆ ಬರಲು ಮತ್ತೂ ಒಂದು ತಾಸೂ ಇತ್ತು.

ಸ್ಕ್ಯಾಲ್ಸಿಸ್ಕಯ ಕೈಯ್ಯಲಿದ್ದ, ಪಿಸ್ತೂಲಿನ ಕಟ್ಟನ್ನು ಕಂಡೇ ಲೊಸ್ಕೊಟ್ ಅಂಜಿದ್ದ. ಅದು ನಿಲ್ದಾಣಕ್ಕೆ ರೈಲು ಬರಲು ಮುಕ್ಕಾಲು ಗಂಟೆಯ ಮುಂಚಿತ ವಾಗಿಯೇ ಹೋದುದು ಅವನನ್ನು ದಂಗು ಬಡೆಸಿತ್ತು:

ತನ್ನಷ್ಟೇ ಸ್ಕ್ಯಾಲ್ಸಿಸ್ಕಯೂ ಅಂಜಿದ್ದಾನೆಂಬುದು ಮಾತ್ರ ಲೊಸ್ಕೊಟ್‌ನಿಗೆ ತಿಳಿದಿರಲಿಲ್ಲ. ತನ್ನ ಹೆದರಿಕೆಯನ್ನಡಗಿಸಲು ಏಕಾಂತವೇ ಮದ್ದೆಂದು ನಂಬಿದ್ದ ಲೊಸ್ಕೊಟ್‌ಗೆ, ಸ್ಕ್ಯಾಲ್ಸಿಸ್ಕಯ ಬಹಿರಂಗದ ವರ್ತನೆ ಇನ್ನೂ ಭಯ ವನ್ನು ಹೆಚ್ಚಿಸಿತು. ಲೊಸ್ಕೊಟ್ ಇನ್ನೂ ಮುಕ್ಕಾಲು ಗಂಟೆ ಆ ರೈಲಿಗೆ ನಿರ್ಜನವಾದ ನಿಲ್ದಾಣದಲ್ಲಿ ಕಾಯಬೇಕಲ್ಲವೇ ಎಂದು ಶಪಿಸಿದ. ಅದರಲ್ಲಿ ತುಂಬಾ ಮಂದಿ ಗುಪ್ತ ಪೋಲೀಸರೂ ಇರಬಹುದೆಂದು ಅವನು ಯೋಚಿಸಿ ದನು. ಆದರೆ ಸ್ಕ್ಯಾಲ್ಸಿಸ್ಕ ಈ ಗಂಡಾಂತರವನ್ನು ಉತ್ಸಾಹದಿಂದ ನಿರೀ ಕ್ಷಿಸುತ್ತಿದ್ದ.

"ನಾವು ಸ್ವಲ್ಪ ಬಾಯಾರಿಕೆ ಕುಡಿಯೋಣ" ಎಂದು ಸ್ಕ್ಯಾಲ್ಸಿಸ್ಕ ಟಿಕೀಟು ತೋರಿಸಿ ಪ್ಲಾಟ್‌ಫಾರ್ಮಿನೊಳಗೆ ಬಂದ ಬಳಿಕ ಹೇಳಿದನು." ಆದರೆ ಆದರ ಮುಂಚೆ ನನಗೆ ಒಂದು ಚಿಕ್ಕ ಕೆಲಸವಾಗಬೇಕಾಗಿದೆ..."

ಈ ಮಾತಿನ ಅರ್ಥವನ್ನು ತಿಳಿಯದೆ, ಲೊಸ್ಕೊಟ್, ಸ್ಕ್ಯಾಲ್ಸಿಸ್ಕಯೊಡನೆ ಸಾಮಾನುಗಳನ್ನಿಡುವ ಕೋಣೆಯ ಕಿಟಕಿಯ ಬಳಿಗೆ ಹೋಗಲಿಲ್ಲ. ಅವನು ಹತ್ತು ಅಡಿ ದೂರದಲ್ಲಿ ನಿಂತುಕೊಂಡಿದ್ದಾಗ ಸ್ಕ್ಯಾಲ್ಸಿಸ್ಕ ಏನು ಮಾಡುತ್ತಾ ನೆಂದು ತಿಳಿದು ಬೆದರಿಕೊಂಡನು.

"ಆ ಕಟ್ಟಿನೊಳಗೆ ಏನಿದೆ?" ಎಂದು ಲಗ್ಗೇಜ್ ಕ್ಲಾರ್ಕ್ ಕೇಳಿದನು. ಈ ಪ್ರಶ್ನೆ ಜೆಕೊಸ್ಲೋವಾಕಿಯಾದಲ್ಲಿ ವಾಡಿಕೆಯಾಗಿ ಕೇಳುವ ಪ್ರಶ್ನೆ ಯಾಗಿತ್ತು.

ಸ್ಕ್ಯಾಲ್ಸಿಸ್ಕ ನಕ್ಕ.

"ಯಾಕೆ.... ಒಂದು ಮೆರ್ಷಿ ಗ‍ರ್-ಮಾತ್ರ, ಕಾಮ್ರೇಡ್! ನಾನು ಈಗ ಅರ್ಧ ಗಂಟೆಯಲ್ಲಿ, ನನ್ನ ರೈಲು ಬರುವ ಒಳಗೆ ಬರುತ್ತೇನೆ. ಇದನ್ನು ಆ ತನಕ ಹಿಡಿದುಕೊಂಡು ತಿರುಗಲು ನನಗೆ ಆಗುವುದಿಲ್ಲ...."

ಕ್ಲಾರ್ಕನು ರಶೀದಿ ಬರೆದು ಕಿಟಕಿಯಿಂದ ಕೊಟ್ಟ.

ಅವನು ಆ ಕಟ್ಟನ್ನು ಒಳಗಿಟ್ಟು ನಸುನಗುತ್ತ, "ಸರಿ ನೀವು ಬಂದು ಅದನ್ನು ಪುನಃ ಕೊಂಡು ಹೋಗುವ ಒಳಗೆ ಅದು ತನ್ನಷ್ಟಕ್ಕೆ ಸಿಡಿಯದೆಂದು ಭಾವಿಸುತ್ತೇನೆ!" ಎಂದನು.

"ಆ ಹೆದರಿಕೆಯಿಲ್ಲ, ಕಾಮ್ರೇಡ್" ಎನ್ನುತ್ತ ಸ್ಕಾಲ್ಸ್ಕಿ ರಶೀದಿಯನ್ನು ಜೇಬಿನೊಳಗೆ ಸೇರಿಸಿ ಲೊಸ್ಕೊಟ್‌ನನ್ನು ನೋಡಿ, "ಅದೊಂದು ಜರ್ಮನ್ ಕೋವಿ. ಅದರಲ್ಲಿ ಒಳ್ಳೊಳ್ಳೆಯ ಅಪಾಯರಹಿತ ಸಲಕರಣೆಗಳಿವೆ..." ಎಂದನು.

ಲೊಸ್ಕೊಟ್‌ನ ಕೈಹಿಡಿದು; "ಜಾಡ್ರ್ಗಾ ಬಾ: ನಿನಗೆ ಈಗ ಸ್ವಲ್ಪ ಕುಡಿದರೆ ಸಾಕಾಗದೆಂದು ತೋರುತ್ತದೆ" ಎಂದ.

ಈ ಘಳಿಗೆಯಿಂದ ಲೊಸ್ಕೊಟ್ ಸ್ಕಾಲ್ಸ್ಕಿಯೊಡನೆ ಅವಶ್ಯವಿದ್ದಾಗ ಮಾತ್ರ ಮಾತಾಡುತ್ತಿದ್ದ. ಅವನು ಸ್ಕಾಲ್ಸ್ಕಿಯನ್ನು ತುಂಬಾ ಆಗ ದ್ವೇಷಿಸಿದ.

ಆದರೆ ನಿಲ್ದಾಣದ ಅಂಗಡಿಗೆ ಹೋಗಿ ಸ್ಕಾಲ್ಸ್ಕಿ ತೆಗೆದುಕೊಟ್ಟ ಮದ್ಯವನ್ನು ಕುಡಿದ. ಸ್ಕಾಲ್ಸ್ಕಿಯ ವಿನೋದದ ಮಾತುಗಳನ್ನು ಕೇಳಿ ಅಂಗಡಿಯವನಿಗೂ ನಗು ಬಂತು.

ಲೊಸ್ಕೊಟ್ ಸ್ಕಾಲ್ಸ್ಕಿಯನ್ನು ಮೆಚ್ಚದಿದ್ದರೂ, ಸ್ಕಾಲ್ಸ್ಕಿಯು ಕಿಟಕಿಯ ಬಳಿ ಕುಳಿತುಕೊಂಡು ಹೊರಗೆ ರೈಲು ಮಾರ್ಗವನ್ನು ನೋಡುತ್ತಿದ್ದನೆಂಬುದನ್ನು ಮಾತ್ರ ಅವನು ಗಮನಿಸಿದ.

ಮತ್ತೆ ಇಬ್ಬರು ಅಲ್ಲಿ ಮೌನವಾಗಿ ಕುಳಿತರು—ಲೊಸ್ಕೊಟ್‌ನ ಕೋಪದ ಮೌನವನ್ನು ಸ್ಕಾಲ್ಸ್ಕಿಯ ಧೈರ್ಯಕ್ಕೂ ಒಡೆಯಲಾಗಲಿಲ್ಲ. ಕೊನೆಗೆ ಗಂಟೆ ಬಾರಿಸಿತು. ಪ್ರಯಾಣಿಕರು ಎದ್ದರು. ರೈಲು ಬಂಡಿ 185 ಬರುತ್ತಿದೆ ಎಂಬುದು ಸ್ಪಷ್ಟವಾಯಿತು.

ಆಗ ತಾನೇ ಅವರಿಬ್ಬರು ಪರಸ್ಪರ ಅರ್ಥಗರ್ಭಿತವಾಗಿ ನೋಡಿಕೊಂಡರು.

"ನಾನು ಸಾಮಾನಿನ ಕೋಣೆಗೆ ಹೋಗಿ...." ಎನ್ನುತ್ತ ಸ್ಕಾಲ್ಸ್ಕಿ ಓಡಾಡುತ್ತಿದ್ದಾಗ, ರೈಲು ನಿಲ್ದಾಣಕ್ಕೆ ಬಂದೇಬಿಟ್ಟಿತು.

ಸ್ಕಾಲ್ಸ್ಕಿ ಲೊಸ್ಕೊಟ್‌ನೊಡನೆ ಪ್ಲಾಟ್‌ಫಾರ್ಮಿನ ತುದಿಯಲ್ಲಿ ಎಂಜಿನ್ ನಿಲ್ಲುವ ಜಾಗೆಯಲ್ಲಿ ಕಾಗದ ಸುತ್ತಿದ ಕಟ್ಟನ್ನು ಹಿಡಿದುಕೊಂಡು ನಿಂತ.

ಅವರಿಬ್ಬರೂ ರೈಲು ಹತ್ತಲು ಟ್ರ್ರಿಕ್ಸಾನಿಂದ ಸಂಕೇತವನ್ನು ನಿರೀಕ್ಷಿಸುತ್ತಿದ್ದರು.

ಪ್ಲಾಟ್ ಫಾರ್ಮಿನ ಅಂಚಿಗಿಂತ ತುಸು ದೂರದಲ್ಲಿ ಸ್ಕಾಲ್ಸ್ಕಿ ನಿಂತುಕೊಂಡು ಲೊಸ್ಕೊಟ್‌ನನ್ನು ಹಿಂದಕ್ಕೆಳೆದು,

" ಜಾರ್ಡಾ, ಅವರು ಅಲ್ಲಿದ್ದಾರೆ! ಒಹ್ಹೊ... ಹೌದು: ನಮ್ಮನ್ನು ಅವರು ನೋಡಿದರು . ಎಂದ.

ಟ್ರ್ರಿಕ್ಸಾ ಅವರಿಬ್ಬರನ್ನೂ ನಿಜವಾಗಿಯೂ ನೋಡಿದ್ದ.

ಅವನು ಅವರ ಪರಿಚಯವನ್ನು ತೋರ್ಪಡಿಸದೆ, ಕಲಬ್ಜನಿಗೆ ತಿಳಿಯದಂತೆ ಮೆಲ್ಲನೆ ತಲೆಯಲ್ಲಾಡಿಸಿದ.

"ಏನೆನ್ನುತ್ತಾರೆ, ಅವರು ..? ಲೊಸ್ಕೊಟ್ ಭಯದಿಂದ ಕೇಳಿದ.

ಸಾಲ್ಸ್ಕಿ ಕ್ಷಣಕಾಲ ಏನೂ ಹೇಳಲಿಲ್ಲ.

ಆ ಮೇಲೆ ಲೊಸ್ಕೊಟ್‌ನ ಕಿವಿಯಲ್ಲಿ,

" ಎಲ್ಲವೂ ಸರಿಯಾಗಿದೆ, ದೇವರೇ! ಒಳಗೆ ಯಾರೂ ಕಾವಲುಗಾರರಿಲ್ಲ. ನಾವು ಬಂಡಿಯೊಳಗೆ ಕುಳಿತುಕೊಳ್ಳೋಣ. ಸರಿ.... ನಿನಗೆ ಕೊನೆಯ ಗಾಡಿ ಲೊಸ್ಕೊಟ್. ಅವನು ಲೊಸ್ಕೊಟ್‌ನ ತೋಳನ್ನು ಹಿಡಿದು, "ಜಾರ್ಡಾ ಒಳ್ಳೆಯ ಅದೃಷ್ಟ. ನಿನ್ನನ್ನು ನಾನು ಆ ಮೇಲೆ ನೋಡುತ್ತೇನೆ..."

ಲೊಸ್ಕೊಟ್ ತಲೆಯಲ್ಲಾಡಿಸುತ್ತ, ಕೈಗಳೆರಡರಲ್ಲಿಯೂ ತಿಂಡಿಯ ಕಟ್ಟನ್ನು ಹಿಡಿದುಕೊಂಡು ಪ್ಲಾಟ'ಫಾರ್ಮಿನ ಇನ್ನೊಂದು ತುದಿಗೆ ಬೇಗ ಬೇಗನೆ, ಹೆಜ್ಜೆ ಹಾಕಿದನು.

ಟ್ರ್ರಿಕ್ಸಾ ತೃಪ್ತಿಯಿಂದ ಎಂಜಿನಿನ ಗಾಡಿಯಲ್ಲಿ ಒರಗಿದ್ದ. ಆ ತನಕ ತಂತ್ರದ ಬಹು ಸಣ್ಣ ಅಂಶಗಳನ್ನು ಕೂಡಾ ಸಾಧಿಸಿಯಾಗಿತ್ತು. ಈಗ ಅದರ ಬಹು ಮುಖ್ಯವಾದ ಕೆಲಸವನ್ನು ನೆರವೇರಿಸಬೇಕಿತ್ತು. ಟ್ರ್ರಿಕ್ಸಾ ಈಗ ಅದನ್ನು ಯೋಚಿಸುವುದರಲ್ಲೇ ಮಗ್ನನಾಗಿದ್ದ. ಆದರೆ ಅದರ ಕಡೆ ಮೇಲ್ವಿಚಾರವನ್ನು ನಡೆಸುವ ಆಸ್ಪದ ದುರ್ದೈವವಶಾತ್ ಇರಲಿಲ್ಲ. ಆ ತಂತ್ರದ ಪ್ರಕಾರ ಮೂರು ಗಾಡಿಗಳಲ್ಲಿ ಪ್ರತಿಯೊಂದರಲ್ಲಿಯೂ ಕಡಿಮೆಯೆಂದರೆ ಒಬ್ಬೊಬ್ಬ, ಪಲಾಯನ ಕೂಟದ ಶಸ್ತ್ರಧಾರಿಯಿದ್ದು ಅಕಸ್ಮಾತ್ತಾಗಿ ಯಾರೂ

ಬ್ರೇಕ್ ಹಾಕದಂತೆ ನೋಡಿಕೊಳ್ಳಬೇಕಾಗಿತ್ತು. ರೈಲು ಬಂಡಿಯ ತುದಿಯಲ್ಲಿದ್ದ ಸಾಮಾನಿನ ಬಂಡಿಗೆ ಮಾತ್ರ ಹೀಗೆ ಕಾವಲು ಇರಲು ಸಾಧ್ಯವಿರಲಿಲ್ಲ. ಏಕೆಂದರೆ ಯಾವ ಪ್ರಯಾಣಿಕನೂ ಅದರೊಳಗೆ ಹೋಗಕೂಡದಿತ್ತು. ಇದು ಇಡೀ ತಂತ್ರದ ದುರ್ಬಲವಾದ ಅಂಶವಾಗಿತ್ತು. ಆದರೆ ಒಂದು ಗಾಡಿಯ ಚಕ್ರ ತಿರುಗದಿದ್ದರೂ ಅದನ್ನು ಎಳೆದುಕೊಂಡು ಹೋಗುವಷ್ಟು ಎಂಜಿನು ಬಲವುಳ್ಳದ್ದಾಗಿದೆಯೆಂದು ಟ್ರುಕ್ಸಾನು ಆಲೋಚಿಸಿದ್ದನು.

ಟ್ರುಕ್ಸಾ ಪ್ಲಾಟ್‌ಫಾರ್ಮನ್ನು ನೋಡುತ್ತ, "ಈಗ, ನಾವೇನು ಏರ್ಪಾಡು ಮಾಡಿದ್ದೇವೆಂದು ನೋಡುತ್ತೇನೆ. ಆಯಾಯ ಪಲಾಯನ ಮಾಡುವವರು ಅವರವರಿಗೆ ಸಿಕ್ಕಿದ ಪ್ರತ್ಯೇಕ ಆಜ್ಞೆಗಳನ್ನು ಪಾಲಿಸದಿರಲಿಕ್ಕಿಲ್ಲವೆನ್ನೋಣ. ಡಾಕ್ಟರ್ ಸ್ವೆಕ್ ಮೊದಲಿನ ಬಂಡಿಗೆ ಹತ್ತುತ್ತಾರೆ. ಸ್ಕಾಲ್ನಿಕ,—ಹುಷಾರ್!—ಮುಂಚೆ ತಿಳಿಸಿದ್ದಂತೆ ಎರಡನೆಯ ಗಾಡಿಗೆ ಹತ್ತಿದ; ಹೌದು ಲೊಸ್ಕೊಟ್ ಮೂರನೆಯ ಗಾಡಿಗೆ ಹೋಗುತ್ತಿದ್ದಾನೆ. ಅಲ್ಲಿ ಕಾರ್ಲ್ ಹೋವರ್ತ ಮೊದಲೇ ಇದ್ದಾನೆ ..." ಎಂದು ತನ್ನಲ್ಲೇ ಹೇಳಿಕೊಂಡನು.

ಹೋವರ್ತನಿಗೂ ಲೊಸ್ಕೊಟ್‌ನಿಗೂ ಪರಿಚಯಮಾಡಿಸಬೇಕಿತ್ತೆಂದು ಟ್ರುಕ್ಸಾನಿಗೊಮ್ಮೆ ತೋರಿತು. ತಾನು ಮೂತ್ರಶಂಕೆ ಮಾಡುವ ನೆವದಿಂದ ಕೆಳಗಿಳಿದು ಹೋಗಿ ಅವರೊಳಗೆ ಪರಿಚಯಮಾಡಿಕೊಡುತ್ತೇನೆ ಎಂದೂ ಅವನು ನೆನಸಿದನು.

ಆದರೆ ಹಾಗೆ ಮಾಡುವುದು ಬೇಡವೆಂದು ಟ್ರುಕ್ಸಾನಿಗೆ ಕೂಡಲೆ ಹೊಳೆಯಿತು. ಕಲಬ್ಜ ಅವನು ರೈಲು ಹತ್ತುವಾಗ ಕೊಟ್ಟ ಕಾರಣವನ್ನು ಕೇಳಿದ್ದ. ಅದಕ್ಕೂ ಫ್ರಾಂಜೆನ್ಸ್‌ಬಾಡ್ ಸ್ಥಳಕ್ಕೂ ಏನೂ ಸಂಬಂಧವಿರಲಿಲ್ಲ. ಕಲಬ್ಜನಿಗೆ ಪರಿಚಯವಿರುವ ಗುಪ್ತ ಪೋಲೀಸನೂ ಬಂಡಿಯಲ್ಲಿರಲೂಬಹುದು. ಕೇವಲ ಲೊಸ್ಕೊಟ್ ಮತ್ತು ಹೋವರ್ತರನ್ನು ಪರಿಚಯಮಾಡಿಸುವುದಕ್ಕೆ ಹೋಗಿ, ಕಲಬ್ಜನ ಮನಸ್ಸಿನಲ್ಲಿ ಸಂದೇಹ ಹುಟ್ಟಿಸಿ, ಇಡೀ ತಂತ್ರವನ್ನೇ ಹಾಳು ಮಾಡುವುದು ಬೇಡವೆಂದು ಯೋಚಿಸಿ ಟ್ರುಕ್ಸಾ ಸುಮ್ಮನಾದ.

ಲೊಸ್ಕೊಟ್ ಮತ್ತು ಹೋವರ್ತ ಪರಿಚಯವಿಲ್ಲದಿದ್ದರೂ ಒಟ್ಟಾಗಿರಬೇಕು. ಹೋವರ್ತ ಎಷ್ಟೆಂದರೂ ಜಾಣ. ಅವನಿಗೆ ಪರಿಸ್ಥಿತಿಯ ಅರಿವಾಗದಿರಲಿಕ್ಕಿಲ್ಲ. ಲೊಸ್ಕೊಟ್‌ನಿಂದ ಏನೂ ಪ್ರಯೋಜನವಾಗದಿದ್ದರೂ, ಹೋವರ್ತ ಅವನಿಂದ, ತಂತ್ರವು ಹಾಳಾಗದಂತೆ ನೋಡಿಕೊಳ್ಳಬಹುದು.

ಹೋವರ್ತ ಒಬ್ಬ ಹೆದರಿಕೆಯನ್ನು ಸೂಚಿಸುತ್ತಿದ್ದ ವ್ಯಕ್ತಿಯು–ಉದ್ದೇಶ ಪೂರ್ವಕವಾಗಿಯೇ ಎಂದು ತೋರುತ್ತಿತ್ತು—ಕೊನೆಯ ಗಾಡಿಯ ಬಳಿಗೆ ಬಂದು ಅದನ್ನೇರುವುದನ್ನು ಗಮನಿಸಿದ. "ನಾನು ಇವನನ್ನು ನೋಡಿ ಕೊಳ್ಳುವುದು ಒಳ್ಳೆಯದು!" ಎಂದು ಹೋವರ್ತ ತನ್ನಷ್ಟಕ್ಕೆ ಆಗ ಹೇಳಿ ಕೊಂಡ. "ಬಹುಶಃ ನಾನು ನಿರೀಕ್ಷಿಸುವ ವ್ಯಕ್ತಿಯು ಇವನೇ ಆಗಿರ ಬಹುದು. ಇಲ್ಲವೇ ಇವನು ಬೇರೆ ಜನವೂ ಆಗಿರಬಹುದು!"

ಎರಡನೆಯ ಗಾಡಿಯೊಳಗೆ ಹೋದ ತರುಣ ದಂಪತಿಗಳು ಯಾರೆಂದೂ ಹೋವರ್ತ ಆಶ್ಚರ್ಯಪಟ್ಟ. ಅವರು ಬಹಳ ಸಂತೋಷದಿಂದಿದ್ದಂತೆ ತೋರು ತ್ತಿತ್ತು. ಆದರೆ ಅವರು ಹೆದರಿಕೆಯಿಂದ ಅತ್ತಿತ್ತ ನೋಡುತ್ತಿದ್ದರು. ಬಹುಶಃ ಅವರೂ ಪಲಾಯನದ ಕೂಟದವರೇ ಆಗಿರಬಹುದೆಂದು ಅವನಿಗೆ ತೋರಿತು.

ಅವರೂ ನಿಜವಾಗಿಯೂ ಪಲಾಯನ ಮಾಡುವವರೇ ಆಗಿದ್ದರು. ಆದರೆ ಇನ್ನೊಂದು ವಿಧದಲ್ಲಿ. ತರುಣಿಯೊಡನೆ ಗುಲಾಬಿ ಹೂಗಳ ಚಿಕ್ಕ ದೊಂದು ಗುಚ್ಛವಿತ್ತು. ತರುಣನು ಬಹಳ ಜಾಗ್ರತೆಯಿಂದ ತಮ್ಮಿಬ್ಬರ ಪೆಟ್ಟಿಗೆ ಯನ್ನು ಒಳಗೆ ಇಟ್ಟ. ಸ್ಕಾಲ್ಸಿಕ ಈ ಹೊಸ ದಂಪತಿಗಳನ್ನು ನಿರಾಸಕ್ತಿ ಯಿಂದ ಪರಿಶೀಲಿಸುತ್ತಿದ್ದ.

ತರುಣಿಯು ಗಾಡಿಯ ಒಂದು ಮೂಲೆಯಲ್ಲಿ ಕುಳಿತುಕೊಂಡು ತನ್ನ ಗಂಡನನ್ನು ಮಮತೆ, ಅಭಿಮಾನ ಮತ್ತು ಹೆದರಿಕೆಗಳಿಂದ ನೋಡುತ್ತಿದ್ದಳು. ಕೇವಲ ಒಂದು ತಾಸಿನ ಹಿಂದೆ ಅವರ ಮದುವೆಯಾಗಿತ್ತಷ್ಟೆ.

ಅವನು ಗಸಿಗಳ ಎಂಜನಿಯರ್ ಆಗಿದ್ದ. ಅವನ ನೌಕರಿಯ ಕರಾರಿನ ಪ್ರಕಾರ ಅವನು ಮದುವೆಯಾಗಬಾರದಿತ್ತು. ಆದರೆ ತಮ್ಮ ಸುಖಕ್ಕೆ ಅಡ್ಡಿ ಬರುವ ನಿರ್ಬಂಧವನ್ನು ಮುರಿಯುವುದೊಳ್ಳೆಯದೆಂದು ಅವರಿಗೆ ತೋರಿತ್ತು.

ಅವರು ತಮ್ಮ ಕಾಗದ ಪತ್ರಗಳೊಡನೆ ಅಂದು ಬೆಳಗ್ಗೆ ಪಿಲ್ಸೆನ್‌ನಿಂದ ಅಲ್ಲಿಗೆ—ಅಲ್ಲಿ ಯಾರಿಗೂ ಅವರ ಪರಿಚಯವಿರಲಿಲ್ಲ—ಬಂದಿದ್ದರು. ಅಲ್ಲಿ ಒಂದು ಉಂಗುರವನ್ನು ಪಡೆದು, ಅಪರಿಚಿತ ಸಾಕ್ಷಿಗಾರರ ಮುಂದೆ ಸರಳವಾಗಿ ವಿವಾಹವಾಗಿದ್ದರು.

ಅವರು ಈಗ ಇಪ್ಪತ್ತನಾಲ್ಕು ತಾಸಿನ, ಹೊಸತಾಗಿ ಗಳಿಸಿದ ಪ್ರೀತಿಯ ರುಚಿಯನ್ನು ಸವಿಯುತ್ತ, ಪ್ರವಾಸಕ್ಕಾಗಿ ಆಸ್ಚ್‌ಗೆ ಹೊರಟಿದ್ದರು. ಮತ್ತು

ಆ ಕ್ಷಣದ ಮಟ್ಟಿಗಾದರೂ—ತಮ್ಮ ಭವಿತವ್ಯದ ಕುರಿತು ಅವರು ಗಮನವೀಯದಿರಲು ಸಿದ್ಧರಿದ್ದರು.

ಆ ಹುಡುಗಿಯು—ಸ್ಕಾಲ್ಸ್ಕಿ, ನಸುಗಪ್ಪಾದ ಅವಳ ಹೊಳೆಯುವ ಕಣ್ಣುಗಳನ್ನು ಮೆಚ್ಚಿದ—ಹಂಗೇರಿಯ ನಿರಾಶ್ರಿತೆಯಾಗಿದ್ದಳು. ಅವಳೊಡನೆ ಯಾವ ದಾಖಲೆಯೂ ಇರಲಿಲ್ಲ. ಆಕೆ ತನ್ನ ಬಂಧನವಾಗಬಹುದೆಂಬ ಹೆದರಿಕೆಯಲ್ಲಿ ಹಲವು ತಿಂಗಳುಗಳನ್ನು ಕಳೆದಿದ್ದಳು. ಈಗಲಂತೂ ಅವಳ ಮದುವೆಯಾಯಿತು. ಅದೂ ಸುರಕ್ಷಿತೆಯಾಗಿರಲಿಕ್ಕಲ್ಲ, ಪ್ರೇಮಕ್ಕಾಗಿ. ತಮಗೆ ಮುಂದೇನಾಗಬಹುದೆಂಬುದು ಇಬ್ಬರಿಗೂ ಗೊತ್ತಿರಲಿಲ್ಲ, ಇಬ್ಬರಿಗೂ ಅದನ್ನು ಯೋಚಿಸುವ ಧೈರ್ಯ ಕೂಡಾ ಇರಲಿಲ್ಲ. ಆದರೆ ಆ ಕ್ಷಣದಲ್ಲಿ ಅವರು ಸುಖದಿಂದಿದ್ದರು. ಸ್ಕಾಲ್ಸ್ಕಿಗೂ ಅವರ ಸಂತೋಷ ವ್ಯಕ್ತವಾಗುತ್ತಿತ್ತು. ಆದರೆ ತನ್ನಂತೆಯೇ ಅವರೂ ತಮ್ಮ ಸರ್ವಸ್ವವನ್ನೂ ಕಳೆದುಕೊಂಡಿದ್ದಾರೆಂಬುದು ಮಾತ್ರ ಅವನಿಗೆ ತಿಳಿದಿರಲಿಲ್ಲ.

" ಅದೃಷ್ಟವಂತರು ! ", ಹುಡುಗಿ ತನ್ನ ಗಂಡನ ಹೆಗಲಮೇಲೆ ತಲೆಯನ್ನಿಡುವಾಗ, ಸ್ಕಾಲ್ಸ್ಕಿ ನಿಟ್ಟುಸಿರುಬಿಟ್ಟ. " ಅದೃಷ್ಟವಂತರು ... ಇವರಿಗೆ ಲೋಕದಗೊಡವೆಯೇ ಇಲ್ಲ.... "

ಎರಡೂಕಾಲು ಗಂಟೆಗೆ ರೈಲು ಬಂಡಿ ಫ್ರಾಂಜೆನ್ಸ್‌ಬಾಡ್‌ನಿಂದ, ಹಾಸ್ಲೊವಿಗೆ ಮುಂದರಿಯಿತು. ಹಾಸ್ಲೊವ್, ಆಸ್ಚ್‌ನ ಮುಂದಿನ ನಿಲ್ದಾಣ. ಸ್ಕಾಲ್ಸ್ಕಿ ಆ " ಪ್ರೇಮಪಕ್ಷಿ '' ಗಳನ್ನು ಕೊನೆಯಸಲ ನೋಡಿ, ಹೊರಗೆ ಹೋಗಿ ಆ ಗಾಡಿಯನ್ನು ಚೆನ್ನಾಗಿ ಪರಿಶೀಲಿಸಿದ. ಅದನ್ನು ನೋಡಿಕೊಳ್ಳುವುದು ಅವನ ಪಾಲಿಗೆ ಬಿದ್ದಿತ್ತು.

ಅವನು ಎಮರ್ಜೆನ್ಸಿ ಬ್ರೇಕನ್ನು ನೋಡುತ್ತಿರುವಾಗ ಒಮ್ಮೊಮ್ಮೆ ಆ ಹಂಗೇರಿಯನ್ ಹುಡುಗಿಯೂ ಅವಳಗಂಡನೂ ಅವನಿಗೆ ತೋರುತ್ತಿದ್ದರು.

"ಅವರು ನವದಂಪತಿಗಳೆನ್ನುದರಲ್ಲಿ ಸಂಶಯವಿಲ್ಲ ! " ಎಂದುಕೊಂಡನವನು.

ಆದರೆ ಇತರರ ಸಮಸ್ಯೆಗಳ ಮಧ್ಯೆ ತನ್ನ ಕಷ್ಟದ ಸಮಸ್ಯೆಯನ್ನು ಅವನು ಮರೆತಿರಲಿಲ್ಲ. ಆ ದಂಪತಿಗಳ ಸಮಸ್ಯೆಯಂತೂ ಬಹಳ ಸುಲಭದ್ದೆಂದು ಅವನು ನಂಬಿದ್ದ. ಕೊನೆಗೆ ಬ್ರೇಕಿನ ಗಾಳಿಯ ಕೊಳವೆ ಅವನಿಗೆ ಕಾಣಸಿಕ್ಕಿತು.

" ಅದೇ ಟ್ರಿಕ್ವಾಸ್ನರ ಸಮಸ್ಯೆಯಾಗಿರಬೇಕು... ನನಗೆ ಬ್ರೇಕುಗಳನ್ನು ಹಾಳು ಮಾಡುವುದು ಇಲ್ಲಿ ಸಾಧ್ಯವಿಲ್ಲ. " ಎಂದು ಅವನು ಯೋಚಿಸಿದನು.

ಆದರೆ ಕೊನ್ಪಲಿಂಕಾ ಆ ಸಮಸ್ಯೆಯ ಕುರಿತು ತುಂಬಾ ಯೋಚಿಸಿದ್ದ. ಹಾಸ್ಲೊವ್ ನಿಲ್ದಾಣದಲ್ಲಿ ರೈಲು ನಿಂತೊಡನೆ ಅವನು ಎಂಜಿನಿನಿಂದ ಕೆಳಗೆ ನೆಗೆದು ಕೊನೆಯ ಗಾಡಿಯ ಬಳಿಗೆ ಓಡಿದನು.

ಅವನು ಬೊಬ್ಬಿಟ್ಟು, " ಟ್ಯೂಮಾ, ಒಹ್ಹೋ! ಟ್ಯೂಮಾ ... ! "

ಮುದುಕ ಗಾರ್ಡ್, ಕೈಯಲ್ಲಿ ಬೆಳ್ಳಿಯ ಗಡಿಯಾರವನ್ನು ಹಿಡಿದು ಕೊಂಡು, ಸಾಮಾನಿನ ಗಾಡಿಯ ಕಿಟಕಿಯಿಂದ ಇಣಿಕಿ ಹೊರಗೆ ನೋಡಿದನು.

" ಕಾಮ್ರೇಡ್, ನೀವು ನನ್ನನ್ನು ಕರೆದಿರಿ? "

ಕೊನ್ಪಲಿಂಕಾ, ಆ ಗಾಡಿಯ ಬಳಿಗೆ ನಮ್ರತೆ ಮತ್ತು ಅಸಮಾಧಾನ ದಿಂದ ಬಂದು,

" ಏರ್ ಬ್ರೇಕ್‌ಗಳು, ಜಿರಿ. ಅವು ತುಂಬಾ ಒತ್ತುತ್ತಿವೆ. ಅವನ್ನು ಸರಿಮಾಡುವಿರಾ .... ? "

" ಈಗಲೇ ... ? " ಟ್ಯೂಮಾ, ತಾನು ಯಾವ ಅರ್ಥದಲ್ಲಿ ಕೇಳಿದೆ ನೆಂದು ಕೊನ್ಪಲಿಂಕಾನಿಗೆ ತಿಳಿಯಲಿಕ್ಕಿಲ್ಲದೆಂದು ಭಾವಿಸುತ್ತ ಕೇಳಿದ. ಗಾಡಿ ಗಳ ಕೆಳಗಿಳಿದು ಏರ್ ಬ್ರೇಕ್‌ಗಳ ಕೊಳವೆಗಳನ್ನು ಸರಿಮಾಡಲು ತನಗೆ ವಯಸ್ಸಾದುದರಿಂದ ಸಾಧ್ಯವಿಲ್ಲವೆಂದು ಅವನು ಆಗ ನೆನೆಸಿದ್ದನು.

ಕೊನ್ಪಲಿಂಕಾ, " ಈಗಲೇ, ಬ್ರೇಕ್‌ಗಳು ಹೀಗೆಯೇ ಇದ್ದರೆ ಈ ಬಂಡಿ ಯನ್ನು ಮುಂದೆ ಕೊಂಡುಹೋಗುವುದು ಕಷ್ಟವೆಂದು ನನಗೆ ತೋರು ತ್ತದೆ ... " ಎಂದನು.

ಟ್ಯೂಮಾ ಅಸಮಾಧಾನದಿಂದ ಪ್ಲಾಟ್‌ಫಾರ್ಮಿಗೆ ಇಳಿದು ಮೆಲ್ಲನೆ,

" ಇದು ನನಗಿಂತ ಕಡಿಮೆ ಪ್ರಾಯದವರಿಗೆ ಹೇಳಿದ ಕೆಲಸ. ಇಂಥ ಕೆಲಸಮಾಡಲು ನನಗೀಗ ಶಕ್ತಿಯಿಲ್ಲ...."

ಕೊನ್ಪಲಿಂಕಾ ಮೆಲ್ಲನೆ, " ಕ್ಷಮಿಸಿ, ಆದರೆ ಅದು ನಿಮ್ಮ ಜವಾಬ್ದಾರಿ ಯೆಂದು ನಿಯಮವಿದೆ ... ನನ್ನದಲ್ಲ "

" ಅದು ನಿಮಗೆ ಗೊತ್ತೇ ಇದೆ! " ಎಂದು ಗೊಣಗುಟ್ಟುತ್ತ ಟ್ಯೂಮಾ ಮೆಲ್ಲನೆ ರೈಲು ಮಾರ್ಗಕ್ಕಿಳಿದು ಗಾಡಿಯ ಅಡಿಗೆ ಬಗ್ಗಿಕೊಂಡು ಹೋದನು.

ಹಾಗೆ ಹೋಗುವಾಗ ಟ್ಯೋಮಾ, "ಈ ಡ್ರೈವರರು ಹಾಳಾಗಲಿ! ಅವರಿಗೆಲ್ಲವೂ ತಾವೆಂದಂತೆಯೇ ಆಗಬೇಕು. ಅದು ಗಾಳಿಯ ಒತ್ತಡವಾಗಲೀ ಬೇರೇನಾಗಲೀ, ಅವರು ಯಾವಾಗಲೂ ಹಾಗೆಯೇ. ಹೌದು, ಡ್ರೈವರರಿಗೆ ಒತ್ತಡ ಸರಿಯಾಗಿರದಿದ್ದರೆ ಗಾಡಿ ನಡೆಸಲಿಕ್ಕಾಗುವುದಿಲ್ಲ, ಆದರೆ ಅದನ್ನು ಸರಿಮಾಡುವ ಕೆಲಸ ನಾನು ಕೆಲಸದಲ್ಲಿರುವಾಗಲೇ ಒದಗಬೇಕೆ? ಎಂಥ ದುರದೃಷ್ಟ ನನ್ನದು!" ಎಂದವನು ಗೊಣಗುಟ್ಟಿದನು.

ಅವನು ಗಾಳಿ ಹೊರಗೆ ಬಿಡುವ ಕೊಳವೆಯನ್ನು ಮುಟ್ಟಿದ.

"ಎಷ್ಟು ಗಾಳಿ ಬಿಡಬೇಕು....?"

"ನೀವು ಗಾಳಿ ಬಿಡಿ, ಕಾಮ್ರೇಡ್. ಅದು ಎಷ್ಟು ಬಿಡಬೇಕೆಂಬುದನ್ನು ನಾನು ತಿಳಿಸುತ್ತೇನೆ."

ಗಾಳಿ ಹೊರಗೆ ಹೋಗುವಾಗ ಶಬ್ದವಾಯಿತು. ಟ್ಯೋಮಾ ತನ್ನಷ್ಟಕ್ಕೆ ತನ್ನ ದುರದೃಷ್ಟವನ್ನು ಶಪಿಸಿಕೊಳ್ಳುತ್ತಿದ್ದ. ಆದರೆ ಹಾಗೆ ಗಾಳಿಯನ್ನು ಹೆಚ್ಚು ಕಡಿಮೆ ಮಾಡುವುದು ವಿಶೇಷವಾಗಿರಲಿಲ್ಲ. ಮತ್ತೆ ಗಾಳಿಯ ಒತ್ತಡವನ್ನು ಇಳಿಸಲು ಕೊನ್ಪಲಿಂಕಾ ಹೇಳಿದುದರಿಂದಾಗಿ ಅವನಿಗೆ ಏನೂ ಸಂದೇಹವಾಗಲಿಲ್ಲ.

"ಇನ್ನೂ ಸ್ವಲ್ಪ ಗಾಳಿ ಹೋಗಲಿ, ಜಿರಿ. ಇನ್ನೂ ಹೆಚ್ಚು...."

ಕೊನ್ಪಲಿಂಕಾನು ಹೇಳಿದನು. ಜಿರಿ, ಮತ್ತೊಮ್ಮೆ ಸ್ವಲ್ಪ ಗಾಳಿ ಬಿಟ್ಟನು.

ಇನ್ನೊಮ್ಮೆ ಹಿಸ್ ಎಂದು ಜಿರಿಯು ಸ್ವಲ್ಪಗಾಳಿಯನ್ನು ಬಿಟ್ಟನು.

"ಈಗ ಸಾಕೋ....?" ಎಂದು ಕೇಳಿದನು.

"ಇಲ್ಲ, ಇನ್ನೂ ಸ್ವಲ್ಪ...." ಎಂದು ಅಧಿಕಾರವಾಣಿಯಿಂದ ಕೇಳಿಸಿತು.

ಮತ್ತೆ ಗಾಳಿ ಹೋಗುತ್ತಲೇ ಇತ್ತು, ಏಕೆಂದರೆ ಕೊನ್ಪಲಿಂಕಾ ಮೇಲಿನಿಂದ "ಇಲ್ಲ.... ಇಲ್ಲ ಮುಚ್ಚಬೇಡಿ. ಮುಚ್ಚಬೇಡಿ. ಇನ್ನು ಸ್ವಲ್ಪ...." ಎಂದು ಆಗಾಗ ಹೇಳುತ್ತಿದ್ದ.

ಮತ್ತೆ ಕೊನ್ಪಲಿಂಕಾ ಥಕ್ಕನೆ,

"ಸರಿ! ಅದನ್ನು ಮುಚ್ಚಿರಿ! ಎಂದ.

ಗಾಳಿ ಹೊರಹೋಗುವ ಶಬ್ದ ಬಹಳ ಕ್ಷೀಣವಾಗಿತ್ತು. ಟ್ಯೋಮಾನ ಕಿವಿಗೆ ಅದು ಕೇಳಿರಲಿಲ್ಲ. ಅವನು ಅಧಿಕಾರದ ದಾಸನಾಗಿದ್ದ. ತನ್ನ ಕರ್ತ

ವ್ಯವೇನೆಂಬುದನ್ನು ತಿಳಿಯದೆ ತನ್ನನ್ನು ದಾಸ್ಯದಲ್ಲಿಟ್ಟುಕೊಂಡಿದ್ದ ಅಧಿಕಾರಕ್ಕೆ ವಿಧೇಯನಾಗಿಯೇ ದ್ರೋಹಮಾಡಿದ. ಟ್ರ್ಯೂಮಾ ಕೊಳವೆಗಳೊಳಗಿದ್ದ ಗಾಳಿಯನ್ನೆಲ್ಲ ಖಾಲಿ ಮಾಡಿದ್ದ ಗಾಳಿಯ ಒತ್ತಡದ ಬ್ರೇಕ್‌ಗಳು ನಿಷ್ಪ್ರಯೋಜಕವಾಗಿದ್ದುವು ....

ಇದು ಕೊನ್ಪಲಿಂಕಾನಿಗೆ ಮಾತ್ರ ಗೊತ್ತಿತ್ತು. ಟ್ರ್ರಿಕ್ಸಾನಿಗೂ ಕೊನ್ಪಲಿಂಕಾ ಹೋದ ಉದ್ದೇಶ ತಿಳಿದಿದ್ದರೂ, ಅದು ಸಫಲವಾಯಿತೆಂದು ಮತ್ತೆ ತಿಳಿಯಿತಷ್ಟೆ.

ಪ್ರಯಾಣಿಕರೆಲ್ಲ ಡ್ರೈವರನನ್ನು ನೋಡುತ್ತಲೇ ಗಾಡಿ ಹತ್ತಿದರು. ಅವನು ಯಾರೋ ಸಾಮಾನ್ಯ ವೇಷ ಭೂಷಣಗಳನ್ನು ಧರಿಸಿದ್ದ ಅಧಿಕಾರಿಯೊಡನೆ ಮಾತಾಡುತ್ತಿದ್ದಂತೆ ತೋರುತ್ತಿತ್ತು.

ಕಿರಿಯ ಜರೊಸ್ಲಾವ್ ಐಸ್‌ಕ್ರೀಂ ಬೇಟೆಯನ್ನು ನಡೆಸಿಯೇ ಬಿಟ್ಟಿದ್ದರೂ, ಸ್ವಿಕ್ ಕುಟುಂಬ 2-24 ಕ್ಕೆ ಬರುವ ಬಂಡಿಯನ್ನು ಹಿಡಿಯಲು ನಿಲ್ದಾಣದಲ್ಲಿ ಸಕಾಲಕ್ಕೆ ತಲಪಿತ್ತು.

ಸ್ವಿಕ್ ಕುಟುಂಬ ಹಾಸ್ಲೊವ್ ಸಂದರ್ಶಿಸಿ ಹಿಂದೆರಳುತ್ತಿದ್ದಂತೆ ನೋಡುವವರಿಗೆ ತೋರಬಹುದಿತ್ತು.

ಎಲ್ಲರೊಡನೆಯೂ ತಿಂಡಿಯ ಕಟ್ಟುಗಳು ಮಾತ್ರ ಇದ್ದುವು. ಒಳ್ಳೆಯ ಉಡುಪು ಧರಿಸಿದ್ದ ಆ ಮೂವರು ಮಕ್ಕಳನ್ನು ನೋಡುವಾಗ ಅವು ಎಲ್ಲೋ ಹಿರಿಯ ಸಂಬಂಧಿಕರನ್ನು ನೋಡಿಕೊಂಡು, ತಮ್ಮ ಮನೆಗೆ ಹಿಂದೆ ತೆರಳಲು ಆಶಿಸುತ್ತಿದ್ದುವೆಂದು ಭಾವಿಸಬಹುದಿತ್ತು.

ಶ್ರೀಮತಿ ಸ್ವಿಕ್, ಶಾಂತವಾಗಿ ತನ್ನ ಗಂಡನೊಡನೆ ಮಾತಾಡುತ್ತಿದ್ದಳು. ಆಗಾಗ ತನ್ನ ಮಕ್ಕಳನ್ನು ನಸುನಗುತ್ತ ನೋಡುತ್ತಿದ್ದಳು. ಅವರೆಲ್ಲರೂ ಒಂದನೆಯ ಗಾಡಿಯ ಬಳಿಗೆ ಹೋಗುವಾಗ ಅವಳು ತನ್ನ ಮುಷ್ಟಿಗಳನ್ನು ಗಟ್ಟಿಯಾಗಿ ಬಿಗಿದಿದ್ದಳು.

ಡಾಕ್ಟರರು ಕೊನ್ಪಲಿಂಕಾನನ್ನು ದಾಟುವಾಗ ಕ್ಷಣಕಾಲ ನಸುನಕ್ಕರು. ಅದರ ಅರ್ಥ, "ಎಲ್ಲವೂ ಸರಿಯಾಗಿದೆ.... ಈತನಕ... '' ಎಂದಾಗಿತ್ತು.

ಡಾಕ್ಟರರು ದೀರ್ಘಶ್ವಾಸವೊಂದನ್ನು ಬಿಡುತ್ತ ಮಕ್ಕಳು ಮತ್ತು ಹೆಂಡತಿಯೊಡನೆ ಗಾಡಿ ಹತ್ತಿದರು. ಟ್ರ್ರಿಕ್ಸಾ ತಾನು ಕುಳಿತಲ್ಲಿಂದ ಅವರು ಒಳಗೆ

ಹೋಗುವುದನ್ನು ನೋಡಿ, ಆಗ ಎಲ್ಲ ಗಾಡಿಗಳಲ್ಲೂ ತಕ್ಕ ಕಾವಲುಗಾರ ರಿದ್ದಾರೆಂದು ತಿಳಿದುಕೊಂಡನು.

ಬಾಗಿಲುಗಳು ಮುಚ್ಚಿದುವು. ಕರವಸ್ತ್ರಗಳು ಹಾರಿದುವು. ಟ್ರ್ಯೊಮಾ ತನ್ನ ಪತಾಕೆಯನ್ನು ಹಾರಿಸಿ, ಬಿಗಿಲನ್ನು ಊದಿ, ತನ್ನ ಕೊನೆಯ ಗಾಡಿಗೆ ಹಾರಿದ. ಆಗ ಅಲ್ಲಿ ತನ್ನ ಆಸನದ ಮೇಲೆ ಕುಳಿತಾಗ ಅವನಿಗೆ ವಿಮೋಚನೆ ಯಾದಂತಾಯಿತು.

ಅವನು ಒಂದು ವಸ್ತ್ರದ ಚೂರನ್ನು ಹೆಕ್ಕಿ ಗೊಣಗುಟ್ಟುತ್ತ ತನ್ನ ಬೆರಳು ಗಳಲ್ಲಾಗಿದ್ದ ಕಪ್ಪು ಎಣ್ಣೆಯನ್ನು ಒರಸಿಕೊಂಡ.

ತಾನು ಕೇವಲ ಪ್ರಯಾಣವನ್ನು ಮಾತ್ರ ಮುಗಿಸುವುದಲ್ಲ, ಅದ ಕ್ಕಿಂತಲೂ ಹೆಚ್ಚಿನದನ್ನು ಸಾಧಿಸಲಿದ್ದೇನೆಂಬುದನ್ನು ಪ್ರತಿಯೊಬ್ಬನಲ್ಲಿಯೂ ನೆನಪು ಹುಟ್ಟಿಸಲಿಕ್ಕೆಂದೋ ಎಂಬಂತೆ ಎಂಜಿನ್ನು ಸಿಳ್ಳು ಹಾಕಿತು.

ಸ್ವಾತಂತ್ರ್ಯ!... ಸಿಳ್ಳು ಕಠೋರವಾಗಿ ಕೇಳುತ್ತಿತ್ತು.

ಸ್ವಾತಂತ್ರ್ಯ!.... ಚಕ್ರಗಳು ಉರುಳುತ್ತ ಶಬ್ದ ಮಾಡುತ್ತಿದ್ದುವು.

ಸ್ವಾತಂತ್ರ್ಯ!.... ರೈಲು ಬಂಡಿಗೆ ಅಪ್ಪಳಿಸುವ ಗಾಳಿ ಕೂಗಿತು.

ಜರೊಸ್ಲಾವಾ ಪ್ರಿಹೋದಾ ಡಾಕ್ಟರ್ ಸ್ಟೈಕ್‌ರೊಡನೆ ಟಿಕೀಟುಗಳನ್ನು ಕೇಳಿದಳು.

ಗಂಟೆ 2–30. ಹೊರಗೆ ಬಿಸಿಲಿನಿಂದ ಕಂಗೊಳಿಸುತ್ತಿದ್ದ ಗದ್ದೆಗಳಲ್ಲಿ ಕೆಲವು ಮಕ್ಕಳು ರೈಲು ಬಂಡಿ ಹೋಗುತ್ತಿದ್ದಾಗ ಅದಕ್ಕೆ ಕೈಯಾಡಿಸಿದರು.

ಮೂರನೆಯ ಗಾಡಿಯಲ್ಲಿ ಕಾರ್ಲ್‌ಹೋವರ್ತ ಹೊರಗೆ ನಿಂತುಕೊಂಡು ತನ್ನ ಗಡಿಯಾರವನ್ನೊಮ್ಮೆ ನೋಡಿ, ನೀರಿನ ಕೋಣೆಯ ಬಾಗಿಲಿಗೆ ಒರಗಿ ಜೆಕ್‌ನ ರಾಷ್ಟ್ರೀಯ ರೈಲ್ವೇಗಳ ವೇಳಾಪಟ್ಟಿಯನ್ನು ಅಭ್ಯಸಿಸುತ್ತಿದ್ದ ಟಿಕೆಟ್ ಸಂಗ್ರಾಹಕ ಹುಡುಗಿಯ ಕಡೆಗೆ ದೃಷ್ಟಿ ಬೀರಿದನು.

ರೈಲಿನ ವೇಗದಲ್ಲಿ ಅವಳ ದೇಹ ಅತ್ತಿತ್ತ ಅಲ್ಲಾಡುತ್ತಿತ್ತು.

ಆ ಮೂವರು ಹುಡುಗರು ಕೆಳಗೆ ಕುಳಿತುಕೊಂಡು ಜುಗಾರಿ ಆಟ ಆಡು ತ್ತಿದ್ದರು. ಇಬ್ಬರು ಮಿಲಿಯಗಟ್ಟಲೆ ಕ್ರೌನ್‌ಗಳನ್ನು ಕಳಕೊಂಡರು. ಕೆಂಪು ಕೂದಲಿನ ಮತ್ತೊಬ್ಬನು ಅವರಿಬ್ಬರನ್ನು ಸುಲಿಗೆ ಮಾಡುತ್ತಿದ್ದ. ಅವನಿಗೆ ತನ್ನ ಅದೃಷ್ಟವನ್ನು ನೆನೆದು ವಿಶೇಷ ಉದ್ರೇಕವಾಗುತ್ತಿತ್ತು. ಆಗಾಗ ಅವರೊಳಗೆ ಉಂಟಾಗುತ್ತಿದ್ದ ಜಗಳದಿಂದಾಗಿ ಆಟಕ್ಕೆ ತಡೆಯಾಗುತ್ತಿತ್ತು.

ಒಬ್ಬರಿಗೊಬ್ಬರು ಹೊಡೆದು, ಒಬ್ಬನ ಟೊಪ್ಪಿಯನ್ನು ಇನ್ನೊಬ್ಬನು ಸೆಳೆದು, ಅವರು ಬೊಬ್ಬೆ ಹಾಕುತ್ತಿದ್ದರು.

ಎರಡನೆಯ ಗಾಡಿಯ ಬದಿಯಲ್ಲಿ ಸ್ಕಾಲ್ಸ್ಕಿ ನಿಂತಿದ್ದ. ಪಿಲ್ಸೆನ್‌ನಿಂದ ಬಂದಿದ್ದ ಪ್ರಣಯಿಗಳು ತಮ್ಮ ಪ್ರಣಯ ಸ್ವಪ್ನದಲ್ಲಿ ತಲ್ಲೀನರಾಗಿ ಮೌನ ವಾಗಿದ್ದರು. ಉಳಿದ ಪ್ರಯಾಣಿಕರು ಬಿಸಿಲಿನ ತಾಪವನ್ನು ತಡೆಯಲಾರದೆ ತೂಕಡಿಸುತ್ತಿದ್ದರು.

ಆದರೆ ಮೂರು ಗಂಟೆ ಸಮೀಪವಾಗುತ್ತಿದ್ದಾಗ ರೈಲು ಬಂಡಿಗೆ ಜೀವ ಬಂದಂತಾಯಿತು.

ಪ್ರೇಗಿನಿಂದ ಬಂದ ವ್ಯಕ್ತಿ ತನ್ನ ಕೋಟನ್ನು ತೆಗೆದುಕೊಂಡ. ಹೋವರ್ತ ತನ್ನ ಸೆಲ್ಲೋ ಪೆಟ್ಟಿಗೆಯನ್ನು ತೆಗೆದು ಕೆಳಗಿಟ್ಟ.

ಎರಡನೆಯ ಗಾಡಿಯಲ್ಲಿ ಸ್ಕಾಲ್ಸ್ಕಿ ತನ್ನ ಕಾಗದ ಸುತ್ತಿದ ಕಟ್ಟನ್ನು ಮೆಲ್ಲನೆ, ಅತ್ತಿತ್ತ ನೋಡುತ್ತ ಬಿಚ್ಚುತ್ತಿದ್ದ.

ಪ್ರಯಾಣಿಕರು ಕಿಟಕಿಯ ಹೊರಗೆ ತಲೆಹಾಕಿ ಆಸ್ಟ್ಸನ ಹೊರಭಾಗದ ಮನೆಗಳನ್ನು ನೋಡುತ್ತಿದ್ದರು.

ಗನಿಗಳ ಎಂಜಿನಿಯರ್ ಮೃದುವಾಗಿ ತನ್ನ ಹೆಂಡತಿಯ ಕೈಯನ್ನು ತಟ್ಟುತ್ತ ನಸುನಕ್ಕು ಒಳದನಿಯಲ್ಲಿ,

"ನಾವು ಬೇಗನೇ ಅಲ್ಲಿಗೆ ಹೋಗುತ್ತೇವೆ, ಪ್ರಿಯೆ ...." ಎಂದನು.

ಹೋವರ್ತ ತನ್ನ ಖಾಲಿಯಾಗಿದ್ದ ಬಂಡಿಯಲ್ಲಿ ಸೆಲ್ಲೋ ಪೆಟ್ಟಿಗೆಯನ್ನು ಕಿಟಕಿಯ ಬಳಿ ತೆರೆದ. ಅದರೊಳಗಿದ್ದ ಪಿಸ್ತೂಲನ್ನು ತೆಗೆದು ತನ್ನ ಅಂಗಿ ಯೊಳಗೆ ಸೇರಿಸುವಾಗ ಅವನು ಜರೊಸ್ಲಾವಾ ಪ್ರಿಹೋದಾಳನ್ನು ಕಡೆಗಣ್ಣಿ ನಿಂದ ನೋಡಿದ. ಪೆಟ್ಟಿಗೆಯನ್ನು ಪುನಃ ಮುಚ್ಚಿ ಮೇಲಿಟ್ಟ. ಅವಳು ಏನನ್ನೂ ನೋಡಿರಲಿಲ್ಲ.

ರೈಲು ವೇಗದಲ್ಲಿ ಹೋಗುವಾಗ ಬದಿಯಲ್ಲಿದ್ದ ಮನೆಗಳೂ ಸರಿಯಾಗಿ ಕಾಣುತ್ತಿದ್ದಿಲ್ಲ. ಅದು ಎಂದಿಗಿಂತ ಹೆಚ್ಚು ವೇಗದಲ್ಲಿ ಹೋಗುತ್ತಿದೆಯೆಂದು ಫಕ್ಕನೆ ಒಬ್ಬಿಬ್ಬ ಪ್ರಯಾಣಿಕರು ಅಸಮಾಧಾನದಿಂದ ಸಂಶಯಗೊಂಡರು.

ಏನಾದರೂ ಹಾಳಾಗಿದೆಯೆ? ಎಲ್ಲರಿಗೂ ಹೆದರಿಕೆ ಹಿಡಿಯಿತು.

"ರೈಲಿಗೆ ಏನಾಗಿದೆ? ಅದು ನಿಲ್ಲುವುದಿಲ್ಲ...!"

—ಎಂದು ಬೊಬ್ಬೆ ಕೇಳತೊಡಗಿತು.

ರೈಲು ಇನ್ನೂ ವೇಗವಾಗಿ ಓಡುತ್ತಿತ್ತು. ಬದಿಯಲ್ಲಿದ್ದ ತಂತಿ ಕಂಬಗಳನ್ನು ಅದು ರಪರಪನೆ ಹಾದು ಹೋಗುತ್ತಿತ್ತು. ಮುಳ್ಳು ಬೇಲಿಗಳೆಲ್ಲ ಉದ್ದವಾಗಿ ಹಸುರಾಗಿ ತೋರುತ್ತಿದ್ದುವು. ಚಕ್ರಗಳು ಕಂಬಿಗಳ ಸಂದುಗಳ ಮೇಲೆ ಹೋಗುವಾಗ ಗುಂಡು ಸಿಡಿಯುವಂತೆ ಕೇಳುತ್ತಿತ್ತು. ವೇಗ, ಬಹಳ ಹೆಚ್ಚಿತು ....

ಫಾಯರ್‌ಮ್ಯಾನ್ ಕಲಬ್ಜ ಒಲೆಯ ಮುಂದಿನಿಂದ, " ದೇವರೇ ಕೊನ್ವಲಿಂಕಾ ನಿಮಗೇನಾಗಿದೆ ! ಒತ್ತಡ ಕಡಿಮೆಮಾಡಿ ! " ಎಂದನು.

ಆಸ್ಟ್ ನಿಲ್ದಾಣಕ್ಕೆ ಇನ್ನೂ ನೂರು ಮೀಟರ್ ದೂರವಿತ್ತು. ರೈಲು ಗುಡುಗುತ್ತ ಅಲ್ಲಾಡುತ್ತಾ ಹೋಗುವಾಗ ಕೊನ್ವಲಿಂಕಾ ಹಲ್ಲುಕಚ್ಚಿ ಕಲಬ್ಜನನ್ನು ನೋಡಿ ಥ್ರಾಟ್ಲ್ ಕೀಲನ್ನು ಇನ್ನು ಎಳೆದ. ವೇಗಮಾಪಕದ ಮುಳ್ಳು ಮೇಲೇರುತ್ತಿತ್ತು. ಗಂಟೆಗೆ ಎಂಭತ್ತು ಕಿಲೋಮೀಟರ್- ಎಂಭತ್ತೆರಡು, ಎಂಭತ್ತೈದು, ಎಂಭತ್ತೇಳು. ತೊಂಭತ್ತು ಕಿಲೋಮೀಟರ್, ಗಂಟೆಗೆ.

ಫಾಯರ್‌ಮ್ಯಾನ್‌ನ ಕೆಂಪಾದ ಕಣ್ಣುಗಳಲ್ಲಿ ಭಯ ಉಕ್ಕಿತು.

" ನಿಮಗೆ ಹುಚ್ಚು ಹಿಡಿದಿದೆ ! ರೈಲನ್ನು ನಿಲ್ಲಿಸಿ. ನಿಲ್ಲಿಸಿ ! " ಎಂದವನು ಬೊಬ್ಬಿಟ್ಟನು.

ತನ್ನ ದೊಡ್ಡ ಸೌಟನ್ನೆತ್ತಿ ಆವನು ಟ್ರುಕ್ಸಾನ ಕಡೆಗೆ ಸಹಾಯಕ್ಕಾಗಿ ತಿರುಗಿದನು.

ಆದರೆ ಟ್ರುಕ್ಸಾನ ಕೈಯ್ಯಲ್ಲೊಂದು ಪಿಸ್ತೂಲಿತ್ತು. ಅದನ್ನು ಫಾಯರ್ ಮ್ಯಾನ್‌ನ ಎದೆಗೆ ಗುರಿಯಿಟ್ಟಿದ್ದ. ಫಾಯರ್‌ಮ್ಯಾನ್ ಈಗ ಇನ್ನೊಂದು ವಿಧದ ಹೆದರಿಕೆಯಿಂದ ತಲ್ಲಣಗೊಂಡ.

ಟ್ರುಕ್ಸಾ ಪಿಸ್ತೂಲನ್ನು ಹಿಂದೆ ತೆಗೆಯುತ್ತಿದ್ದಾಗ ಅವನು, ಇಲ್ಲಾ ಎಂದು ಅರಚಿದನು.

" ಆ ಸೌಟನ್ನು ಕೆಳಗೆ ಹಾಕು, ಮತ್ತು ಮಲಗು ! " " ಸರಿ. ಈಗ ಮಗುಚಿ ಮುಖವನ್ನು ಕೆಳಗೆ ಹಾಕಿ ಮಲಗು " ಎಂದು ಹೇಳಿದನು.

ಗಂಟೆಗೆ ನೂರು ಕಿಲೋಮೀಟರ್ .... ವೇಗದಿಂದ ಬಂಡಿಯು ಬಿಡುತ್ತಿತ್ತು.

ಸಾಮಾನಿನ ಗಾಡಿಯಲ್ಲಿ ಜಿರಿಟ್ಸ್ಕಿಯೂ ತನ್ನ ಅರೆಸಿದ್ದೆಯಿಂದ ಎಚ್ಚತ್ತು, ಏನೋ ವಿಪತ್ತು ಸಂಭವಿಸಲಿದೆಯೆಂದುಕೊಂಡ. ಬಂಡಿ ಅತ್ತಿತ್ತ ಅಲ್ಲಾಡು ತ್ತಿದ್ದುದರಿಂದ ಅದರ ವೇಗ ಹೆಚ್ಚಿತ್ತೆಂಬುದು ಸ್ಪಷ್ಟವಾಗುತ್ತಿತ್ತು. ಕಿಟಕಿಯ ಬಾಗಿಲಿನಿಂದ ಹೊರಗೆ ನೋಡುವಾಗ ಅವನಿಗೆ ಭೂಮಿ ಮಿಂಚಿನಂತೆ ಹಸರು ಮತ್ತು ಕಂದು ಬಣ್ಣದಲ್ಲಿ ಹೊಳೆಯುತ್ತಿದ್ದುದು ಕಾಣಿಸಿತು.

ದೇವರೇ! "ಬ್ರೇಕುಗಳು ಹಾಳಾಗಿರಬೇಕು!" ಎಂದವನು ಯೋಚಿಸಿದನು.

ಅವನು ಎಮರ್ಜೆನ್ಸಿ ಬ್ರೇಕನ್ನು ತನಗೆ ಶಕ್ತಿಯಿದ್ದಷ್ಟು ಎಳೆದ. ಆದರೆ ರೈಲಿನ ವೇಗ ಒಂದಿಷ್ಟೂ ಕಡಿಮೆಯಾದಂತೆ ತೋರಲಿಲ್ಲ.

ಅವನೂ ಆಗ ಹೆದರಿಕೆಯಲ್ಲಿ ನಡುಗಿದ. ಅತ್ತಿತ್ತ ಅಲ್ಲಾಡುತ್ತ ಹ್ಯಾಂಡ್ ಬ್ರೇಕಿನ ಚಕ್ರವನ್ನು ಒಂದೇ ಸವನೆ ತಿರುಗಿಸಿದ. ಸಾಮಾನಿನ ಗಾಡಿಯ ಚಕ್ರಗಳಿಗೆ ಅದು ತಾಗಿ ಶಬ್ದವಾದರೂ, ರೈಲಿನ ವೇಗ ಇಳಿಯಲಿಲ್ಲ.

ಜರೊಸ್ಲಾವಾ ಪ್ರಿಹೋದಾ ನೀರಿನ ಕೋಣೆಯ ಬಾಗಿಲಿಗೆ ಒರಗಿ ವೇಳಾಪಟ್ಟಿಯನ್ನು ಅಭ್ಯಸಿಸುತ್ತಿದ್ದಳು. ಅವಳಿಗೆ ಬೇರೆ ಯಾವ ಗೊಡವೆಯೂ ಇದ್ದಿಲ್ಲ. ಒಂದುವೇಳೆ ಯಾರಾದರೂ ರೈಲು ಅಷ್ಟು ವೇಗದಲ್ಲಿ ಏಕೆ ಹೋಗುತ್ತಿತ್ತೆಂದು ಕೇಳಿದ್ದರೆ, ಅದನ್ನು ಹೇಳುವುದು ತನ್ನ ಕರ್ತವ್ಯವಲ್ಲವೆನ್ನ ಬಹುದಿತ್ತಾಕೆ. ಅವಳು ಇನ್ನೂ ವೇಳಾಪಟ್ಟಿಯನ್ನು ಅಭ್ಯಸಿಸುವುದರಲ್ಲೇ ಮಗ್ನಳಾಗಿದ್ದಳು.

ಆಸ್ಟ್ಸ ನಿಲ್ದಾಣದ ಪ್ಲಾಟ್‌ಫಾರ್ಮಿನಲ್ಲಿ ಹೆಚ್ಚು ಜನರಿರಲಿಲ್ಲ. ಸ್ಟೇಶನ್ ಮಾಸ್ಟರರೂ ನಾಲ್ಕೈದು ಮಂದಿ ಸೈನಿಕರೂ ಅಲ್ಲಿ ನಿಂತುಕೊಂಡಿದ್ದರು. ಕೆಲವು ಜನ ಬೇರೆಯವರೂ ಸ್ನೇಹಿತರನ್ನು ಇದಿರ್ಗೊಳ್ಳಲು ನೆರೆದಿದ್ದರು.

ಮೂರು ಗಂಟೆಗೆ ಆಸ್ಟ್ಸ ನಿಲ್ದಾಣವನ್ನು ದಾಟಿ ರೈಲು ಬಂಡಿ ಮುಂದಕ್ಕೆ ಗುಡುಗುತ್ತ ಹೋಯಿತು. ಹಿಂದಿನ ಗಾಡಿಯ ಅಡಿಯಿಂದ ಆಗ ಬೆಂಕಿಯ ಕಿಡಿಗಳು ಹಾರಿ ಪ್ಲಾಟ್‌ಫಾರ್ಮಿನ ಮೇಲೆ ಬಿದ್ದು, ನಂದಿ ಹೋದುವು.

ಆ ರೈಲು ಬಂಡಿಯ ಪ್ರಯಾಣಿಕರೆಲ್ಲ ಗಾಡಿಗಳ ಜಗಲಿಯಲ್ಲಿ ನಿಂತು ಹೊರಗೆ ನೋಡುತ್ತಿದ್ದರು. ಪಿತೂರಿಗಾರರಿಗಲ್ಲದೆ ಉಳಿದವರಿಗೆಲ್ಲ ಬಹಳ ದಿಗಿಲಾಗಿತ್ತು.

ಲೊಸ್ಕೊಟ್ ಬೊಬ್ಬೆ ಹಾಕುತ್ತಲೂ ಇರಲಿಲ್ಲ, ಕೈಯನ್ನು ಬೀಸುತ್ತಲೂ ಇರಲಿಲ್ಲ. ಅವನೂ ಸುಮ್ಮನಿದ್ದ.

ಆದರೆ ಉಳಿದ ಎಲ್ಲಾ ಪ್ರಯಾಣಿಕರಿಗಿಂತಲೂ ಹೆಚ್ಚಿಗೆ ಭಯಪಟ್ಟಿದ್ದನೆಂದು ತೋರುತ್ತಿತ್ತು.

ಅವನು ತನ್ನ ಕಾಗದದ ಕಟ್ಟನ್ನು ನೀರಿನ ಕೋಣೆಯೊಳಗೆ ಬಿಚ್ಚಿಸಿ ಪಿಸ್ತೂಲನ್ನು ಬ್ರೆಡ್ಡಿನ ತುಂಡುಗಳೆಡೆಯಿಂದ ತೆಗೆದು ಅದಕ್ಕೆ ಅಂಟಿಕೊಂಡಿದ್ದ ಬ್ರೆಡ್ ಮತ್ತು ಬೆಣ್ಣೆಯ ಚೂರುಗಳನ್ನು ಕರವಸ್ತ್ರದಿಂದ ಉಜ್ಜಿದ. ಆ ಮೇಲೆ ಅದನ್ನು ತನ್ನ ಇಜಾರಿನೊಳಗೆ ಸಿಕ್ಕಿಸಿ ಹೊರಬಂದ.

ಅವನು ಒಂದು ವಿಷಯವನ್ನು ಸಿರ್ಧರಿಸಿದ್ದ: ಅದೇನೆಂದರೆ ಹೋವರ್ತ ಸಾದಾ ಉಡುಪಿನ ಗುಪ್ತ ಪೋಲೀಸನೆಂದು. ಅದರ ಕಾರಣ ಅವನಿಗೇ ಗೊತ್ತು. ತನಗೆ ದೊರೆತ ಆಜ್ಞೆಯಂತೆ ತಾನು ವರ್ತಿಸಲು ಯತ್ನಿಸಿದರೆ ತಾನು ಸಾಯುವುದು ಖಂಡಿತವೆಂದು ಲೊಸ್ಕೊಟ್‌ಗೆ ಗೊತ್ತಿದ್ದರೂ ತಾನು ಅಂಜುಬುರುಕನೆಂಬ ಪ್ರತೀತಿಯನ್ನು ಅಳಿಸಲಿಕ್ಕಾಗಿಯೇ ಎಂಬಂತೆ ಅವನು ಸ್ವಲ್ಪ ಸಮಯದ ಬಳಿಕ ಹೊರಗೆ ಹೋವರ್ತನ ಒಳಿಗೆ ಹೋಗಿ ನಿಂತು ಅವನನ್ನೇ ನೋಡಿದ.

ಕೊನೆಯ ಘಳಿಗೆ ಸಮೀಪಿಸಿದಂತೆ, ಕೊನ್ಸಲಿಂಕಾ ಕಡೆಯ ಓಟಕ್ಕೆ ಥ್ರಾಟ್ಲ್‌ನ್ನು ತೆರೆದಿರಬೇಕೆಂದು ಲೊಸ್ಕೊಟ್ ಎಣಿಸಿ ಹೋವರ್ತನ ಸಮೀಪಕ್ಕೆ ಸೇರಿದ. ಪ್ರಯಾಣಿಕರೆಲ್ಲ ಕೋಪದಲ್ಲಿ ಗಾಡಿಯ ಬದಿಗೆ ಬರಲು ಲೊಸ್ಕೊಟ್ ತನ್ನ ಪಿಸ್ತೂಲನ್ನೂ ಸೊಂಟದಿಂದ ತೆಗೆದು ಹೋವರ್ತನಿಗೆ ನಡುಗುವ ಕೈಯ್ಯಲ್ಲಿ ಗುರಿಯಿಟ್ಟ.

ಅಲ್ಲಿ ಗುಪ್ತ ಪೋಲೀಸನೊಬ್ಬನು ಇರಲಿಲ್ಲವೆಂದಲ್ಲ; ಅದರೆ-ಜಾಗ್ರತೆಯ ಮನುಷ್ಯ! —ಅವನು ನಡುಗುತ್ತಿದ್ದ ಲೊಸ್ಕೊಟ್‌ನ ಹಿಂಬದಿಯಲ್ಲಿ ನಿಂತುಕೊಂಡು, ತನ್ನ ಇರವನ್ನು ಬಚ್ಚಿಡಲು ಯತ್ನಿಸುತ್ತಿದ್ದ. ಇದು ಸಮರ್ಥವಾದ ರೈಲನ್ನು ವಶಪಡಿಸುವ ತಂತ್ರವೆಂದು ಅವನಿಗೆ ಆಗ ಖಚಿತವಾಗಿತ್ತು.

ಹೋವರ್ತ ಲೊಸ್ಕೊಟ್‌ನ ಪಿಸ್ತೂಲನ್ನು ನೋಡಿದ .... ಆಬಳಿಕ ಲೊಸ್ಕೊಟ್‌ನನ್ನು ನೋಡಿದ.

ಅವನ ನಡುಗುವ ಕೈಗಳನ್ನು ಕಂಡು, ನಸುನಕ್ಕ.

ಆದರೆ ಅದು ಬಹಳ ಅಪಾಯಕರವಾದ ಘಳಿಗೆಯಾಗಿತ್ತು. ಅಂಜುಬುರುಕನೊಬ್ಬನ ಆಟವನ್ನು ವಿನೋದದಿಂದ ನೋಡುತ್ತಿರಲು ಸಮಯವಿರಲಿಲ್ಲ.

ಹೋವರ್ತ ಗಡಸು ಧ್ವನಿಯಲ್ಲಿ "ಎಲ್ಲರೂ ನಿಮ್ಮ ಗಾಡಿಯೊಳಗೆ ಹೋಗಿ!" ಎಂದು ಬೊಬ್ಬಿಟ್ಟನು.

ಅವನು ಗಾಬರಿಗೊಂಡಿದ್ದ ಪ್ರಯಾಣಿಕರ ಮುಂದೆ ನಿಂತ. ಅವನ ಧ್ವನಿಯಲ್ಲಿದ್ದ ಅಧಿಕಾರದ ದರ್ಪವನ್ನು ಕೇಳಿ ಎಲ್ಲರೂ ಸುಮ್ಮನಾಗಿ, ಅವನ ಆಜ್ಞೆಗೆ ವಿಧೇಯರಾಗಿ ನಡೆದರು.

ಆಸ್ಟ್ಚ ನಿಲ್ದಾಣದಲ್ಲಿದ್ದ ಸೈನಿಕರು, ಅದು ಪಲಾಯನ ಮಾಡುವಬಂಡಿಯೆಂದು ಭಾವಿಸಿ, ಪ್ರಯಾಣಿಕರಿಗೆ ಎಮರ್ಜೆನ್ಸಿ ಬ್ರೇಕನ್ನು ಉಪಯೋಗಿಸುವಂತೆ ಸಂಜ್ಞೆ ಮಾಡಿದ್ದರು. ಆದರೆ ಶರವೇಗದಲ್ಲಿ ಆ ಬಂಡಿ ಆಸ್ಟ್ಚ ನಿಲ್ದಾಣವನ್ನು ದಾಟಿ ಹೋಗಿತ್ತು. ಪ್ರಯಾಣಿಕರಿಗೆ ಸೈನಿಕರು ಮಾಡಿದ ಸಂಜ್ಞೆ ಗೊತ್ತಾಗಲಿಲ್ಲ. ಹೊಗೆ ಮತ್ತು ಬೆಂಕಿಯ ಕಿಡಿಗಳ ಮೋಡ ಮಾತ್ರ ಅದರ ಹಿಂದೆ ಕಾಣುತ್ತಿತ್ತು.

ಯಾರೂ ಬ್ರೇಕನ್ನು ಹಾಕಲು ಪ್ರಯತ್ನಿಸಲಿಲ್ಲ. ಆದ್ದರಿಂದ ಕಾವಲುಗಾರರಿಗೆ ತಮ್ಮ ಪಿಸ್ತೂಲುಗಳನ್ನು ಉಪಯೋಗಿಸುವ ಅವಶ್ಯಬೀಳಲಿಲ್ಲ. ಮೂರನೆಯ ಗಾಡಿಯ ಸೈನಿಕರು ಹೋವರ್ತನ ಆಜ್ಞೆಯನ್ನನುಸರಿಸಿ ಒಳಗೆ ಹೋಗಿ ಕುಳಿತ್ತಿದ್ದರು. ಡಾಕ್ಟರ್ ಸ್ಟೆಕ್ ಮತ್ತು ಸ್ಕಾಲ್ಸಿಕ್ಕ ತಮ್ಮ ತಮ್ಮ ಗಾಡಿಗಳಲ್ಲಿ ಹಾಗೆಯೇ ವರ್ತಿಸಿ ಪರಿಸ್ಥಿತಿಯನ್ನು ಹತೋಟಿಗೆ ತಂದಿದ್ದರು.

ಗಂಟೆಗೆ ನೂರು ಕಿಲೋಮೀಟರ್. ನೂರೈದು, ನೂರ ಹತ್ತು, ನೂರ ಹದಿನೈದು ಕಿಲೋಮೀಟರ್ ಗಂಟೆಗೆ....

ರೈಲು ಆಗ ಹೆಚ್ಚು ಕಡಿಮೆ ಗಂಟೆಗೆ ನೂರಿಪ್ಪತ್ತು ಕಿಲೋಮೀಟರ್ ವೇಗದಲ್ಲಿ ಓಡುತ್ತಿದ್ದುದರಿಂದ ಗಡಿಯನ್ನು ಒಂದು ನಿಮಿಷದೊಳಗೆ ಮುಟ್ಟಬಹುದು.

ಲೊಸ್ಕೊಟ' ತನ್ನ ಆವೇಶವನ್ನು ತಡೆಯಲಾರದೆ ಗಾಡಿಯೊಳಗೆ ಕುಳಿತುಕೊಂಡಿದ್ದ. ಅವನಿಗೆ ಜಿಗುಪ್ಸೆ ಹುಟ್ಟಿತು.

ಅವನ ಪಿಸ್ತೂಲು ಇನ್ನೂ ಕೈಯ್ಯಲ್ಲೇ ಇತ್ತು. ಯಾರೂ ಅದನ್ನು ತೆಗೆದುಕೊಳ್ಳಲು ಇಚ್ಛಿಸಲಿಲ್ಲ.

ಅವನು ಕೋಪದಿಂದ ಅದನ್ನು ಕೆಳಗೆ ಎಸೆದನು. ತನ್ನ ಮುಖವನ್ನು ಕೈಗಳಿಂದ ಮುಚ್ಚಿ, ದೇವರೇ, "ನಾನೆಂಥ ಹೇಡಿ! ಒಂದು ಕ್ಷಣದ ಹಿಂದೆ ನಾನು ಸರಿಯಾಗಿದ್ದೆ. ನಾನು ಆ ಗುಪ್ತ ಪೋಲೀಸನಿಗೆ ಗುಂಡಿಕ್ಕುತ್ತಿದ್ದೆ. ನಾನು ಸ್ವತಂತ್ರನಾಗಿದ್ದೆ... ಸ್ವತಂತ್ರ .. ಈಗ...." ಎಂದು ಗೊಣಗುಟ್ಟಿದನು.

ಆಸ್ಟ್ರಿಯ ಮತ್ತು ಜರ್ಮನಿಯ ಗಡಿಯ ಮಧ್ಯದಲ್ಲಿದ್ದ ಕೊನೆಯ ಸ್ಥಳದತ್ತ ರೈಲು ಬಂಡಿ ಓಡಿತು (ಅದನ್ನು ಕಾಯುವವನು ರೈಲ್ವೆಯ ನಿವೃತ್ತ ಕೆಲಸಗಾರನಿದ್ದು, ಅವನಿಗೆ ಮುದಿ ಪ್ರಾಯದಲ್ಲಿ ವಿರಾಮದ ನೌಕರಿಯನ್ನು ಕೊಡಲಾಗಿತ್ತು).

ಆ ಸ್ಥಳಕ್ಕೆ ರೈಲು ಬಂಡಿಗಳು ಬರುತ್ತಿದ್ದಿಲ್ಲ. ವರ್ಷಗಟ್ಟಲೆ ಅವನು ಅದರ ಗೇಟುಗಳನ್ನು ಮುಚ್ಚಿರಲಿಲ್ಲ.

ರೈಲು ಬಂಡಿ ಹೋಗುವಾಗ ಅವನು ತನ್ನ ಚಿಕ್ಕ ತೋಟದಲ್ಲಿ ನಿದ್ರಿಸುತ್ತಿದ್ದ. ಅದನ್ನು ನೋಡಿ ಆಶ್ಚರ್ಯಪಡುತ್ತ ಕಣ್ಣುಗಳನ್ನು ಮುಚ್ಚಿಕೊಂಡ. ಅವನು ತನ್ನೊಳಗೆ, "ಈ ಬಂಡಿ ವೇಳೆಯಿಲ್ಲದೆ ಏಕೆ ಓಡುತ್ತಿದೆ?" ಎಂದು ಪ್ರಶ್ನಿಸಿದನು. ಅದು ಗೇಟಿಗೆ ಢಿಕ್ಕಿ ಹೊಡೆದು, ಮುಂದೆ ಗಡಿಯ ಕಾವಲುಗಾರರು ಇದ್ದಲ್ಲಿಂದ ಮುಂದುವರಿಯಿತು. ರೈಲು ಬಂಡಿಯು 185 ಒಮ್ಮೆಲೇ ಓಡುವುದನ್ನು ಕಂಡು ಅವರು ಆಶ್ಚರ್ಯಪಟ್ಟರು. ಆ ಬಳಿಕ ಅದರ ವೇಗ ಇಳಿಯಿತು. ಗಡಿಯಾಚೆಯ ಚಿಕ್ಕ ಸೆಲ್ಬ್ ನಿಲ್ದಾಣದಲ್ಲಿ ಅದು ನಿಲ್ಲಲಿತ್ತು.

ರೈಲು ಬಂಡಿ 185 ಜೆಕೊಸ್ಲೋವಾಕಿಯಾವನ್ನು ದಾಟಿತ್ತು. ಈಗ ಅದು ಜರ್ಮನಿಯಲ್ಲಿತ್ತು.

* * * *

"ನೀನು ಈಗ ಹೇಳಬಹುದು ಕಲಬ್ಬ!" ಎಂದು ಕೊನ್ವಲಿಂಕಾ, ತಾನು ಮತ್ತು ಟ್ರುಕ್ಸಾ ಎಂಜಿನ್ನಿನಿಂದ ಕೆಳಗೆ ಹಾರುವಾಗ ಹೇಳಿದ. ಅವರಿಬ್ಬರೂ ಸ್ಕಾಲ್ನಿಕ್ಕಯನ್ನೂ ಡಾಕ್ಟರ್ ಸ್ವೆಕ'ರನ್ನೂ ಕರೆಯುತ್ತ ಅವರ ಬಳಿಗೆ ಹೋದರು. ಅವರೂ ರೈಲುಬಂಡಿ ನಿಂತೊಡನೆ ಕೆಳಗಿಳಿದಿದ್ದರು. ಆ ಬಳಿಕ ಕೊನ್ವಲಿಂಕಾ ಮತ್ತು ಟ್ರುಕ್ಸಾ ಸೆಲ್ಬ್ ನಿಲ್ದಾಣಕ್ಕೆ ಹೋದರು. ಅಲ್ಲಿ ಅವ

ರನ್ನು ಇದಿರುಗೊಳ್ಳಲು ಜನರ ಒಂದು ಚಿಕ್ಕ ಗುಂಪು ಬಹಳ ಆಸೆಪಡುತ್ತಿತ್ತು.

ಡಾಕ್ಟರ್ ಸ್ವೆಕ್ ಅವರನ್ನು ಹಿಂಬಾಲಿಸಿದರು. ಆದರೆ ಯಾರಾದರೂ ಈ ವಿಜಯಕ್ಕೆ ಹಾನಿ ಮಾಡದಂತೆ ನೋಡಲು ಸ್ಕಾಲ್ನಿಕ್ ಮತ್ತು ಹೋವರ್ತ್ ರೈಲಿನಲ್ಲೇ ನಿಂತರು.

ಆಗ ಜರ್ಮನ್ ಕಾವಲುಗಾರರು ಬಂದರು. ಟ್ರುಕ್ಸಾ ಅವರ ಅಧಿಕಾರಿಗೆ ನಮಸ್ಕರಿಸಿ ತಾನೊಮ್ಮೆ ಟೆಲಿಫೋನನ್ನುಪಯೋಗಿಸಬಹುದೋ ಎಂದು ಕೇಳಿದ.

"ನಿಮಗೆ ಆಸ್ಟ್ರ ನಿಲ್ದಾಣದವರೊಡನೆ ಮಾತಾಡಬೇಕೆ?" ಎಂದು ಜರ್ಮನ್ ವ್ಯಕ್ತಿಯು ಕೇಳಿದನು. ಟ್ರುಕ್ಸಾ ನಸುನಕ್ಕನು.

"ಇಲ್ಲ" ಎಂದು ಅವನು ತಲೆಯಲ್ಲಾಡಿಸಿದ, "ಅವರಿಗೆ ಏನೂ ಹೇಳಲಿಕ್ಕಿಲ್ಲ. ನಾನು— ಮತ್ತು ನನ್ನ ಸ್ನೇಹಿತರು— ಅತೀ ಸಮೀಪದಲ್ಲಿರುವ ಅಮೇರಿಕದ ಅಧಿಕಾರಿಗಳೊಡನೆ ಮಾತಲಾಡಲಿಚ್ಛಿಸುತ್ತೇವೆ, ನಮ್ಮನ್ನು ಆದಷ್ಟು ಬೇಗ ಕೈದು ಮಾಡಬೇಕೆಂದು ನಾವು ಇಚ್ಛಿಸುತ್ತೇವೆ!"

ಜೆಕ್ ಗಡಿಗೆ ಹೆಚ್ಚು ದೂರವಿರಲಿಲ್ಲ. ತಮ್ಮನ್ನು ಅಲ್ಲಿಂದ ಹಿಂಬಾಲಿಸಿ ಬರಬಹುವೆಂಬ ಹೆದರಿಕೆ ಅವರಿಗೆ ಇನ್ನೂ ಇತ್ತು.

ಆದರೆ ಟೆಲಿಫೋನಿನಲ್ಲಿ ಕರೆಯುವ ಆವಶ್ಯವೇನೂ ಬೀಳಲಿಲ್ಲ. ಸ್ಟೇಷನ್ ಮಾಸ್ತರರ ಆ ದೇಶದ ಮೇರೆಗೆ ಆಗಲೇ ನಾಲ್ಕು ಜನ ಅಮೆರಿಕನ್ ಮಿಲಿಟರಿ ಪೋಲೀಸರಿದ್ದ ಜೀಪ್ ಸೆಲ್ಬ್‌ಗೆ ಬಂತು.

ಇಷ್ಟು ಸಂತೋಷ ಸನ್ನಿವೇಶದಲ್ಲಿ ಎಂದೂ ಬಂಧಿಸುವ ಕೆಲಸ ಎರಗಿದುದ್ದಿಲ್ಲ.

ಮತ್ತೆ ಹನ್ನೆರಡು ಮಂದಿ ಪಿತೂರಿಗಾರರು ಹತ್ತಿರದ ಪಟ್ಟಣಕ್ಕೆ ಹೋಗಿ ಸ್ವತಂತ್ರವಾದ ಸ್ವಾಭಿಮಾನಯುಕ್ತವಾದ ನವಜೀವನವನ್ನು ಆರಂಭಿಸಿದರಲ್ಲದೆ, ರೈಲುಬಂಡಿ 185 ರಲ್ಲಿದ್ದ ಉಳಿದ ಇಪ್ಪತ್ತೇಳು ಪ್ರಯಾಣಿಕರೂ, ಅವರನ್ನು ಸೇರಿಕೊಂಡರು. ಹೀಗೆ ಸ್ವಾತಂತ್ರ್ಯವನ್ನು ಇಚ್ಛಾಬದ್ಧವಾಗಿ ಆರಿಸಿದವರಲ್ಲಿ ಶಾಲೆಯ ಮಕ್ಕಳೂ, ಪ್ರಣಯಿಗಳೂ ಮತ್ತು ತರುಣ ನವ ದಂಪತಿಗಳೂ ಸೇರಿದ್ದರು.

ಆ ಎಂಜಿನಿನ ಮುಂದೆ ಕೆಂಪು ನಕ್ಷತ್ರದ ಚಿಹ್ನೆ ಇತ್ತು. ಆ ಎಂಜಿನನ್ನು ಇನ್ನು ಕೊನ್ಸಲಿಂಕಾನು ನಡೆಸಲಾರ. ಅವನು ಅದನ್ನು ಕೊನೆಯ ಬಾರಿ

ನೋಡಿದಾಗ ಅವನು ತನ್ನೊಡನಿದ್ದ ಸ್ನೇಹಿತರಿಗೆ ಮತ್ತು ಒಡನಾಡಿಗಳಿಗೆ ಮಾತ್ರವಲ್ಲದೆ ಇತರರಿಗೂ ತನ್ನಿಂದ ಉಪಕಾರವಾಗಲಿ ಎಂದು ಪ್ರಾರ್ಥಿಸಿದ. ಅವನ ಏಕೈಕ ನಿದರ್ಶನದ ಸೂಕ್ಷ್ಮವಾದ ಕಿಡಿಯು ಒಂದು ದಿನ ಅನ್ಯಾಯಕ್ಕೆ ಆಹುತಿಯಾದ ಜನರಿಗೆಲ್ಲಾ, ಘನಸ್ಥಿಕೆ ಅಭಿಮಾನ ಮತ್ತು ಶಾಂತಿಯತ್ತ ಸಾಗಲು ಹೆಬ್ಬೆಳಕಾಗಿ ಪರಿಣಮಿಸಬಹುದು....

